# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...

ಸಂಪ್ರದಾಯಬದ್ಧ ಗಾಯನ ಗಂಗೆ — ಡಾ|| ನಾಗರಾಜರಾವ್ ಹವಾಲ್ದಾರ್ ... ೮
ಪಶ್ಚಿಮಘಟ್ಟದ ವಿಭಿನ್ನ ಮುಖಗಳು – ಒಂದು ಅಧ್ಯಯನ — ಕೆ. ಮಹಾಂತೇಶ್ ... ೪೬
ನಾ ಕಂಡ ಅಮೂಲ್ಯ — ಡಾ|| ಕೆ. ಶ್ರೀನಿವಾಸನ್ ... ೧೦

ಪಿಶಾಚಿ — ಮೊಹಮ್ಮದ ಅಬ್ದಿಲ್ ವಲಿ, ಯೆಮೆನ್ ... ೧೩
ಹೃದಯ ಹೀನರು — ಪಾರ್ವತಿ ಜಿ. ಐತಾಳ್ ... ೪೫
ನಾವು ಕೊಂದ ಅಪ್ಪ — ಸುಕನ್ಯಾ ಕನಾರಳ್ಳಿ ... ೨೨
ಬಣ್ಣಕ್ಕೆ ಮರುಳಾದವರು — ಬಿಳುಮನೆ ರಾಮದಾಸ್ ... ೧೭
'ಹೊಸರುಚಿ' ಕಾಲಂ — ಭೋಜರಾಜ ಸೊಪ್ಪಿಮಠ ... ೧೫
ಕಾವ್ಯಧಾರೆ — ೧೮, ೨೧, ೨೩, ೨೯, ೩೧, ೩೮, ೪೪, ೫೦, ೫೪, ೬೨

ನಿರುದ್ಯೋಗ — 'ಅಗಸ್ತ್ಯಭ್ರಾತಾ' ... ೧೯

ಬರಗೂರರ 'ತಾಯಿ'ಯ ಬಂಡಾಯ — ಡಾ|| ರಂಗರಾಜ ವನದುರ್ಗ ... ೫೫
ಹೇಂಗೆ ಮನ ಹಾಂಗೆ ಘನ — ವಿ. ಚಂದ್ರಶೇಖರ ನಂಗಲಿ ... ೬೦
ಶಿಕ್ಷಣ ಕ್ಷೇತ್ರದ ಕ್ರಾಂತಿ – ಎಜುಸ್ಯಾಟ್ — ಪರಮೇಶ್ವರಯ್ಯ ಸೊಪ್ಪಿಮಠ ... ೩೦
ನೆನ್ನೆ ನಾಳೆಗಳ ನಡುವೆ — ಡಾ|| ಕೆ. ಪೂರ್ಣಮಂಗಳಾ ... ೪೯

ಸಂಗೀತ ಸಾಮ್ರಾಟ್ ನೌಷಾದ್ ಅಲಿ — ನಾ. ದಿವಾಕರ ... ೨೫

ಮಾನಸಿಕ ಒತ್ತಡವನ್ನು ತಡೆಗಟ್ಟುವುದು ಹೇಗೆ ? — ಡಾ|| ಎಸ್. ದ್ವಾರಕಾನಾಥ್ ... ೩೨

ಕುವೆಂಪು ಅವರ ಕವನಗಳಲ್ಲಿ ಬಡತನದ ಪರಿಕಲ್ಪನೆ — ಎಚ್. ಕೆ. ವೆಂಕಟೇಶ್ ... ೩೯
ದೇವರ ಜಾಡ್ಯ ಮತ್ತು ವಚನಕಾರರು — ಕೆ. ಡಿ. ಮುತ್ತೂರ ... ೩೪
ಜಾಗತೀಕರಣ ಮತ್ತು ಕನ್ನಡ ರಂಗಭೂಮಿ — ಬಿ. ಆರ್. ಪೋಲೀಸ್ ಪಾಟೀಲ ... ೨೭

ನಮ್ಮ ಕಾಡುವ ಅಡ್ಡಹೆಸರುಗಳು — ಬಸವರಾಜ ಹೂಗಾರ ... ೩೬
ಆಚರಣೆಗಳಲ್ಲಿ ಮತೀಯತೆ-ಸಾಮರಸ್ಯ — ಡಿ. ಎಂ. ನದಾಫ್ ... ೩೭

ಬೇಕಿತ್ತೇ ಭಯೋತ್ಪಾದನೆ ತಡೆಗೆ ಈ ಕಾನೂನು — ಜಿ. ಎಸ್. ಶ್ರೀನಾಥ ... ೪೨
ಬಲವಾಗಿ ಬೀಸುತ್ತಿರುವ ಬದಲಾವಣೆಯ ಅಲೆ — ಸೀಯಾರ್ಕೆ ... ೫೧

ಬುಧಗ್ರಹ ಎಲ್ಲಿದೆ ? — ಡಾ|| ಬಿ. ಎಸ್. ಶೈಲಜಾ ... ೫೩
ನಾಗರಿಕತೆ ಮತ್ತು ಅರಾಜಕತೆ (ಪುಸ್ತಕ ವಿಮರ್ಶೆ) — ಎಂ. ಎಸ್. ಆಶಾದೇವಿ ... ೪೪
ನಾವು ಸಹಜ ಕೃಷಿಕರಾದೆವು — ಪ್ರವೀಣ್ ಖನ್ನಾ ... ೫೮

ಹೊಸ ಓದು — ಎನ್. ಸಿ. ಮಹೇಶ್ ... ೫೭
ಮನಸ್ಸು ಮತ್ತು ಶ್ರಮ — ಡಾ|| ವಾಯ್. ಕೆ. ಗುಂಡಕರ್ಜಗಿ ... ೬೨

ಚಿತ್ರಗಳು : ಮೋನಪ್ಪ, ಶ್ರೀಹರಿ, ವೇಲ್, ರಾಂಚಂದ್ರ ಕೊಪ್ಪಲು
ವಿವೇಕಾನಂದ, ಗಣೇಶ್ ವಗ್ಗಾ

ಮುಖಚಿತ್ರ : ಶ್ರೀಮತಿ ಗಂಗೂಬಾಯಿ ಹಾನಗಲ್, ವರ್ಣಚಿತ್ರ : ಉದಯ್ ಜಾದೂಗಾರ್

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ

### ಈ ತಿಂಗಳು

ಸರ್ವೋಚ್ಚ ನ್ಯಾಯಾಲಯದ ಎರಡು ತೀರ್ಪುಗಳು ಹೊರಬಿದ್ದು ಬೇಕಾದಷ್ಟು ಪ್ರಮುಖ ಪ್ರಶ್ನೆಗಳು ನಮ್ಮ ಮುಂದೆ ಬಂದಿವೆ. ಅನೇಕ ಉದ್ಯಮಿಗಳು, ವ್ಯಾಪಾರಿಗಳು, ಮುಂತಾದವರು ಬ್ಯಾಂಕುಗಳಿಂದ ಭಾರಿ ಮೊತ್ತದ ಸಾಲ ಪಡೆದು ಅದನ್ನು ಹಿಂದಿರುಗಿಸದೆ ದೇಶಕ್ಕೆ ಭಾರವಾಗಿರುವುದು ಸರ್ವವಿದಿತ. ಸುಮಾರು ಒಂದು ಲಕ್ಷ ಕೋಟಿ ರೂಪಾಯಿಗಳು ಹೀಗೆ ಗುಳುಂ ಆಗಿರುವುದನ್ನು ರಿಸರ್ವ್ ಬ್ಯಾಂಕ್ ಕೂಡ ಒಪ್ಪಬೇಕಾಗಿದೆ. ಒಬ್ಬ ಸಾಮಾನ್ಯ ರೈತ ಐದು ಸಾವಿರ ರೂಪಾಯಿ ಸಾಲ ಪಡೆದು ಅದನ್ನು ಹಿಂದಿರುಗಿಸದಿದ್ದರೆ ಅವನ ಮನೆಯ ಜಪ್ತಿ ನಡೆಯುತ್ತದೆ, ಅವನು ಅವಮಾನಿತನಾಗುತ್ತಾನೆ. ಆದರೆ ಒಂದು ಸಾವಿರ ಕೋಟಿ ಸಾಲ ಪಡೆದವನು ಹಿಂದಿರುಗಿಸದಿದ್ದರೆ ಕಾಲಾನುಕ್ರಮವಾಗಿ ಸಾಲವನ್ನು ರದ್ದು ಮಾಡಲಾಗುತ್ತದೆ, ಅದಕ್ಕೆ ಏನೇನೋ ಕಾರಣಗಳನ್ನು ಕೊಡಲಾಗುತ್ತದೆ. ಹೀಗೆ ಮಾಡುವುದು ಅನುಚಿತವೆಂದು ನ್ಯಾಯಾಲಯಕ್ಕೆ ಹೋದಾಗ ಹೊರಬಿದ್ದ ತೀರ್ಪು ಆಶ್ಚರ್ಯಕರವಾಗಿದೆ. ಸಾಲವನ್ನು ರದ್ದು ಮಾಡಲು ಸೂಕ್ತ ಕಾರಣಗಳು ಇರುತ್ತವಾದ್ದರಿಂದ ಬ್ಯಾಂಕು ಅದನ್ನು ರದ್ದು ಮಾಡುವುದರಲ್ಲಿ ತಪ್ಪೇನೂ ಇಲ್ಲವೆಂಬುದು ಆ ತೀರ್ಪು. ಉತ್ಪಾದನೆ ಕುಂಠಿತವಾಗಿರಬಹುದು, ಮಾರುಕಟ್ಟೆ ಕುಸಿದಿರಬಹುದು, ತಂತ್ರಜ್ಞಾನ ಹಳೆಯದಾಗಿದ್ದಿರಬಹುದು, ಅದರಿಂದ ನಷ್ಟವಾಗಿರಬಹುದು, ಅಥವಾ ಅಂಥವೇ ಬೇರೆ ಮುಗ್ಗಟ್ಟುಗಳು ಉಂಟಾಗಿರಬಹುದು; ಆದ್ದರಿಂದ ಸಾಲ ರದ್ದು ಮಾಡಬೇಕಾದ್ದು ಅನಿವಾರ್ಯವಾಗಬಹುದು. ಇಷ್ಟು ಸರಳವಾದ ತೀರ್ಪು ಅದಲ್ಲವಾದರೂ ಸಾರಾಂಶ ಅದು. ಇಂಥದೇ ಸಂದರ್ಭ ಒಬ್ಬ ರೈತನಿಗೆ ಇರುವುದಿಲ್ಲವೇ ? ಸಕಾಲಕ್ಕೆ ಮಳೆಯಾಗದಿದ್ದರೆ ? ಬೀಜ ಕಳಪೆಯಾದರೆ ? ಗೊಬ್ಬರವು ಮರಳು ಮಿಶ್ರಿತವಾದರೆ ? ಮಾರುಕಟ್ಟೆ ಕುಸಿದರೆ ? ಇವಾವುದಕ್ಕೂ ರೈತನಿಗೆ ಸಾಲದಿಂದ ವಿನಾಯಿತಿ ಇಲ್ಲ. ಸಾವಿರ ಕೋಟಿ ನುಂಗಿದರೆ ಕಾರಣಗಳುಂಟು; ಐದುಸಾವಿರ ಹಿಂದಿರುಗಿಸದಿದ್ದರೆ ಅದು ಅಪರಾಧ ! ನಮ್ಮ ದೇಶದ ನೈತಿಕತೆಗೆ ಮತ್ತು ಕಾನೂನಿಗೆ ಏನು ಹೇಳಬೇಕೋ ತಿಳಿಯದಾಗಿದೆ.

ಇನ್ನೊಂದು ತೀರ್ಪು ನರ್ಮದಾ ಅಣೆಕಟ್ಟೆಗೆ ಸಂಬಂಧಿಸಿದ್ದು. ಅದರ ಹಿನ್ನೆಲೆಯಲ್ಲಿ ಅಭಿವೃದ್ಧಿ ಎಂದರೇನೆಂಬುದನ್ನು ಮರು ವ್ಯಾಖ್ಯಾನ ಮಾಡಿಕೊಳ್ಳಬೇಕಾದ ಪರಿಸ್ಥಿತಿ ಉಂಟಾಗಿದೆ. ನ್ಯಾಯಾಲಯವೇ ಹೇಳಿದ್ದಂತೆ ನಿರ್ವಸಿತರಿಗೆ ಮೊದಲು ನಿರ್ದಿಷ್ಟ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟು ಆಮೇಲೆ ಅಣೆಕಟ್ಟಿನ ಎತ್ತರ ಹೆಚ್ಚಿಸುವುದನ್ನು ಪರಿಶೀಲಿಸಬೇಕೆಂದು ಒಪ್ಪಲಾಗಿತ್ತು. ಸೌಲಭ್ಯಗಳನ್ನು ಕಲ್ಪಿಸಿಕೊಟ್ಟಿಲ್ಲವೆಂಬುದು ವಿಶ್ವಕ್ಕೇ ತಿಳಿಯುವಂತೆ ಸಾಬೀತುಗೊಳಿಸಲಾಗಿದೆ, ಆದರೆ ಎತ್ತರವನ್ನು ಹೆಚ್ಚಿಸುವುದನ್ನು ನ್ಯಾಯಾಲಯ ತಡೆದಿಲ್ಲ. ಇದೆಂತಹ ವಿಪರ್ಯಾಸವೋ ತಿಳಿಯದಾಗಿದೆ. ಬೆಂಗಳೂರಿನ ಬಳಿ ಗೊಟ್ಟಿಗೆರೆ ಕೆರೆಗೆ ತೊಂದರೆಯಾಗದಂತೆ ರಸ್ತೆಯ ನಿರ್ಮಾಣ ಮಾಡಬೇಕು, ಇಲ್ಲವಾದರೆ ನಿರ್ಮಾಣ ಕೂಡದು ಎಂಬ ವಾದವನ್ನು ಮುಂದಿಟ್ಟಾಗ ಕರ್ನಾಟಕದ ಉಚ್ಚ ನ್ಯಾಯಾಲಯ ಅದಕ್ಕೆ ಮಾನ್ಯತೆ ನೀಡಿ ತಡೆಯಾಜ್ಞೆ ವಿಧಿಸಿತು; ತಡೆಯಾಜ್ಞೆಯನ್ನು ಸರ್ವೋಚ್ಚ ನ್ಯಾಯಾಲಯವು ರದ್ದುಗೊಳಿಸಿತು ! ಅಭಿವೃದ್ಧಿಯೆಂದರೆ ರಸ್ತೆ ನಿರ್ಮಾಣ, ಕೆರೆಯ ಮುಚ್ಚುವಿಕೆ, ಎಂಬ ಹೊಸ ಮೀಮಾಂಸೆ ಇದರಿಂದಾಗಿ ಕಾನೂನಿನ ಪರಿಧಿಯಲ್ಲಿ ಬಂದಿದೆ. ಗುಜರಾತ್ - ಮಹಾರಾಷ್ಟ್ರ - ಮಧ್ಯಪ್ರದೇಶ ಸರ್ಕಾರಗಳು ಜನರ ಕತ್ತು ಹಿಚುಕಿದರೆ ಪರವಾಗಿಲ್ಲ, ಅಣೆಕಟ್ಟನ್ನು ಎತ್ತರಿಸುವುದರಿಂದ ಆ ರಾಜ್ಯಗಳು ಅಭಿವೃದ್ಧಿ ಹೊಂದುತ್ತವೆ, ಎಂಬುದು ನವೀನ ಸೂತ್ರ. ಯಾವುದು ನ್ಯಾಯ, ಯಾವುದು ಅನ್ಯಾಯ, ಎಂಬುದಕ್ಕಿಂತ ಅಭಿವೃದ್ಧಿಯೆಂಬ ಭೂತಾಕಾರದ ಮಂತ್ರವು ನಮ್ಮನ್ನು ಏಳಿಗೆಯತ್ತ ಕೊಂಡೊಯ್ಯುತ್ತದೆಂಬ ಮತಿ ಭ್ರಮಣೆ ನಮ್ಮಲ್ಲುಂಟಾಗಿದೆ. ಯಾವ ಜನರಿಗೆ ''ನ್ಯಾಯ'' ದೊರೆಯುತ್ತದೆಂಬುದು ಇದರಿಂದ ಸ್ಪಷ್ಟವಾಗುತ್ತದಲ್ಲವೆ ? ವರ್ಗಾಧಾರಿತ ಸಮಾಜದ ಮಾತನ್ನಾಡಿದರೆ ಮೂಗು ಮುರಿಯುವವರು ಈಗೇನನ್ನುತ್ತಾರೆ ? ವರ್ಗ ವಿಭಜನೆಯ ಪಿಡುಗು ಸರ್ವವ್ಯಾಪಿಯಾಗಿದೆ. ಜನಸಾಮಾನ್ಯರು ಇದನ್ನರಿಯಲು ಇನ್ನೆಷ್ಟು ಅನುಭವಗಳು ಅಗತ್ಯವೋ ತಿಳಿಯದು. ಬೊಲಿವಿಯಾದಲ್ಲಿ ಅದು ಐವತ್ತು - ಅರವತ್ತು ವರ್ಷಗಳ ನಂತರ ಮೂಡಿಬಂದಿದೆ; ನಮಗೆ ನೂರು ವರ್ಷಗಳೇ ಬೇಕೇನೋ !

* * *

ಜಮ್ಮು-ಕಾಶ್ಮೀರ ರಾಜ್ಯದ ದೋಡಾ ಜಿಲ್ಲೆಯಲ್ಲಿ ನಡೆದ ಭೀಕರ ಹತ್ಯೆಗಳು ಪ್ರಭುತ್ವವು ನಿರ್ಜೀವಗೊಂಡಿದೆಯೆಂಬ ಸಂಶಯಕ್ಕೆ ಎಡೆಮಾಡಿಕೊಟ್ಟಿವೆ. ಕೆಲವು ರಾಜಕೀಯ ಪಕ್ಷಗಳು ಇಂತಹ ಸಂದರ್ಭದಲ್ಲಿ ಅನುಸರಿಸಿರುವ ನೀತಿ ಆತಂಕಕಾರಿಯಾಗಿದೆ. ಉರಿಯುವ ಮನೆಯಲ್ಲಿ ಗಳ ಹಿರಿಯುವ ಈ ನೀತಿಯು ಯಾರಿಗೂ ಗೌರವ ತರುವುದಿಲ್ಲವೆಂಬುದು ರಾಜನಾಥ ಸಿಂಗರ ಪಕ್ಷಕ್ಕೆ ತಿಳಿದಂತಿಲ್ಲ. ಅವರೇಕೆ ಕಾಶ್ಮೀರ

೭ನೇ ಪುಟಕ್ಕೆ

ತಿಂಗಳ ಪತ್ರಿಕೆ
**ಹೊಸತು**
ನಿಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೭ ಸಂಚಿಕೆ-೧೧ ಜೂನ್ ೨೦೦೬

**ಸಂಪಾದಕ**
ಜಿ. ರಾಮಕೃಷ್ಣ

**ಸಹಸಂಪಾದಕರು**
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**
ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**
**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : nkp@bgl.vsnl.net.in
website : www.navakarnatakabooks.com

ಸಂಪಾದಕೀಯ

# ರಾಜಿ ಏಕಪಕ್ಷೀಯವಲ್ಲ: ರಾಜ್ಯಗಳ ಚುನಾವಣೆಯ ಫಲಿತಾಂಶದ ಕೆಲವು ಪರಿಣಾಮಗಳು

ಎರಡು ಬಣಗಳ ನಡುವೆ ರಾಜಿ ಆಗಬೇಕಾದರೆ ಪರಿಹರಿಸಲು ಸಾಧ್ಯವಾಗುವ ಕೆಲವಾದರೂ ಭಿನ್ನಾಭಿಪ್ರಾಯಗಳು ಅವರಲ್ಲಿ ಇದ್ದಿರಬೇಕು. ರಾಜಿಗೆ ಷರತ್ತುಗಳೂ ಇರುತ್ತವೆ. ಅವರ ನಡುವೆ ಒಂದು ಕನಿಷ್ಠ ಮಟ್ಟದ್ದಾದರೂ ಸಮಾನತೆ ಇರುತ್ತದೆ. ಒಂದಿಷ್ಟು ತಮ್ಮ ತಮ್ಮ ಪಟ್ಟುಗಳನ್ನು ಇಬ್ಬರೂ ಬಿಟ್ಟುಕೊಡಬೇಕು. ಬುದ್ಧದೇವರು ಕಮ್ಯುನಿಸ್ಟರಾಗಿದ್ದುಕೊಂಡೇ ವಾಸ್ತವ ಪರಿಸ್ಥಿತಿಯನ್ನು ಗಮನಿಸಿ, ಬಂಡವಾಳದೊಂದಿಗೆ ತಾವು ರಾಜಿ ಮಾಡಿಕೊಂಡಿದ್ದರೆಂದು ಸ್ಪಷ್ಟಪಡಿಸಿದ್ದಾರೆ. ಬರುವ ದಿನಗಳಲ್ಲಿ ಈ ರಾಜಿಯ ಸ್ವರೂಪದ ಎಳೆಗಳು ಒಂದೊಂದಾಗಿ ಬಿಡಿಸಿಕೊಂಡು ಪ್ರಕಟವಾಗುವುದನ್ನು ಕುತೂಹಲದಿಂದ ಗಮನಿಸೋಣ. ಕಾರಣ ಕಮ್ಯುನಿಸಂ ಮತ್ತು ಬಂಡವಾಳವಾದದ ನಡುವೆ ಅಪರಿಹಾರ್ಯವಾದ ವೈರುಧ್ಯವೆಂಬ ನಿಲುವಿಗೆ ಈಗ ಭ್ರಮನಿರಸನದ ಕಾಲ ಒದಗಿಬಂದಿದೆ! ಹೀಗೆ ರಾಜಿಮಾಡಿಕೊಂಡಿದ್ದರಿಂದಲೇ ತಾವು ಗೆದ್ದೆವೆಂದೇನೂ ಹೇಳದಿರುವುದು ಸಮಾಧಾನದ ಸಂಗತಿ. ಕಾರಣ, ಅಷ್ಟೊಂದು ಬಹುಮತವಿಲ್ಲದಿದ್ದರೂ, ಸಾಕಷ್ಟು ಸ್ಥಾನಗಳನ್ನು ಗಳಿಸಿ ಎಡಪಕ್ಷಗಳ ಒಕ್ಕೂಟ ಕೇರಳ ಮತ್ತು ಪಶ್ಚಿಮ ಬಂಗಾಳ ಎರಡೂ ಕಡೆ ಈ ಬಗೆಯ ರಾಜಿ ಇಲ್ಲದೆಯೇ ಗೆದ್ದಿತ್ತೆಂದು ಸ್ಪಷ್ಟವಾಗಿತ್ತು. ಒಂದು ವೇಳೆ ಪಶ್ಚಿಮ ಬಂಗಾಳದಲ್ಲಿ ಎಡಪಕ್ಷಗಳ ಸಂಯುಕ್ತರಂಗ, ಚುನಾವಣಾ ಆಯೋಗ ನಡೆದುಕೊಂಡ ಕೊಂಕುನೀತಿಯಿಂದ ಭಯಭೀತರಾಗಿ ಈ ರಾಜಿಗೆ ಮುಂದಾದರೇ ? ಹಾಗಿದ್ದರೆ ಅದು ವಿಷಾದನೀಯ. ಅಲ್ಲಿ ಆಳ್ವಿಕೆಯಲ್ಲಿದ್ದ ಸರ್ಕಾರ ಸಾಕಷ್ಟು ಜನಪರ ಸಾಧನೆಗಳನ್ನು ಮಾಡಿತ್ತು. ವಿರೋಧ ಪಕ್ಷಗಳು ಒಂದು ಸ್ಪಷ್ಟ ಧೋರಣೆ ತಾಳಲಾರದೆ ದಿವಾಳಿಯಾಗಿದ್ದವು. ಕಮ್ಯುನಿಸ್ಟ್ ಚೀನಾದಲ್ಲಿ ಏನಾಗುತ್ತಿದೆ ಎಂಬುದರ ಬಗ್ಗೆ ಅರೆಕೊರೆ ಮಾಹಿತಿಯೇ ಇನ್ನೂ ಇದ್ದು, ಅದನ್ನು ಕುರಿತ ಬಂಡವಾಳದ ಬಾಲಬಡುಕರ ಅಬ್ಬರದ ಪ್ರಚಾರಕ್ಕೆ ತಲೆಬಾಗಿ ಈ ರಾಜಿಗೆ ಮುಂದಾದರೆ ? ವಿರೋಧೀ ಬಣದ ಇಡೀ ನೀತಿಗಳನ್ನು ತಮ್ಮದೇ ಚುನಾವಣಾ ಘೋಷಣೆಯನ್ನಾಗಿ ಮಾಡಿಕೊಂಡು, ಅವರನ್ನು ಕಂಗಾಲಾಗಿಸುವ ತಂತ್ರದಲ್ಲಿ ಎಡಪಕ್ಷದ ಒಕ್ಕೂಟ ಬೂರ್ಷ್ವಾ ಪಕ್ಷಗಳನ್ನು ನಾಚಿಸಿದಂತಿದೆ. ಅಥವಾ ಬೂರ್ಷ್ವಾ ವ್ಯವಸ್ಥೆ ಎಡಪಕ್ಷಗಳ ಸ್ಥಾನವನ್ನು ನುಂಗಿಕೊಂಡವೇ ? ಚುನಾವಣೆಯ ಫಲಿತಾಂಶ ಬರುತ್ತಿದ್ದಂತೆಯೇ ರತನ್ ಟಾಟಾ ಪಶ್ಚಿಮ ಬಂಗಾಳದಲ್ಲಿ ಸಣ್ಣ ಕಾರುಗಳ ಕಾರ್ಖಾನೆಯನ್ನು ತೆರೆಯಲು ಮುಂದಾಗಿದ್ದಾರೆ. ವಿಶೇಷ ಆರ್ಥಿಕ ವಲಯಗಳೆಂಬ ಕಾರ್ಮಿಕರ ಕಾನೂನುಗಳೆಲ್ಲವನ್ನೂ ಮೀರಿ ನಿಲ್ಲುವ ಬ್ಲ್ಯಾಕ್‌ಹೋಲ್‌ಗಳಂಥ ಕೈಗಾರಿಕಾ ಕೇಂದ್ರಗಳನ್ನು ಸ್ಥಾಪಿಸಲೂ ಪಶ್ಚಿಮ ಬಂಗಾಳ ಮುಂದಾಗಿದೆ. ವಿದೇಶಿ ನೇರ ಬಂಡವಾಳ ಹೂಡಿಕೆಗೆ ಮುಕ್ತದ್ವಾರದ ನೀತಿಯನ್ನು ಸ್ಪಷ್ಟಪಡಿಸಲಾಗಿದೆ. ದೇಶದಲ್ಲಿ ಚಾಲ್ತಿಯಲ್ಲಿರುವ ಆರ್ಥಿಕ ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣದ ಎಲ್ಲ ಪ್ರಕ್ರಿಯೆಗಳೊಡನೆಯೂ ಹೀಗೆ ರಾಜಿಮಾಡಿಕೊಂಡ ಹಾಗಿದೆ. ಬಹುಶಃ ಈಗ ದೇಶದ ಇತರ ಭಾಗಗಳಲ್ಲೂ ಎಡಪಕ್ಷಗಳ ಬಲವರ್ಧನೆಗೆ ಈ ಬೆಳವಣಿಗೆ ಸಹಾಯಕವೂ ಆಗಬಹುದು. ಈಗ ಚುನಾವಣೆಯಲ್ಲಿ ಯಾರು ಗೆದ್ದದ್ದು ? ಯಾವುದು ಗೆದ್ದದ್ದು ? ಉದಾರೀಕರಣ ಇತ್ಯಾದಿ ನೀತಿಗಳ ಕರಾಳ ಚಿತ್ರಕ್ಕೆ ಎಡಪಂಥೀಯರು ಈಗ ಮಾನವೀಯ ಮುಖವನ್ನು ದೊರಕಿಸಿಕೊಟ್ಟಂತಾಗಿರುವುದು ಸ್ಪಷ್ಟವಾದಂತಿದೆ.

ಸಂಯುಕ್ತರಂಗ ಸಿದ್ಧಾಂತದ ಒಂದು ಮುಖ್ಯ ತಳಹದಿಯೆಂದರೆ, ಅದರಲ್ಲಿ ಭಾಗವಹಿಸುವ ಎಲ್ಲ ಅಂಗಪಕ್ಷಗಳೂ ಬೆಳೆಯುತ್ತಾಹೋಗಬೇಕು. ಅಲ್ಲಿ ಬಲಶಾಲಿಗಳು ಕಡಿಮೆ ಶಕ್ತಿ ಉಳ್ಳವರನ್ನು ಅದುಮಿ ಆಪೋಶನ ತೆಗೆದುಕೊಳ್ಳುವ ಕ್ರಮಕ್ಕೆ ಎಡೆಯಿಲ್ಲ. ಎಡಪಕ್ಷಗಳ ಮೈತ್ರಿಕೂಟದ ಆಂತರ್ಯದಲ್ಲಿ ವಿವಿಧ ಪಕ್ಷಗಳ ಬಲಾಬಲಗಳು ಯಥಾಸ್ಥಿತಿಯಲ್ಲೇ ಇರುವಂತೆ ಸ್ಥಾನಗಳ ಹಂಚಿಕೆಯಾಗುತ್ತಿರುವಂತೆ ಕಾಣುತ್ತಿದ್ದು ಈ ತಳಹದಿ ಸಡಿಲವಾಗುತ್ತಿದೆಯೇ ? ಈ ಪ್ರಶ್ನೆ ಯಾಕೆ ಬರುತ್ತಿದೆಯೆಂದರೆ ಈ ಬಾರಿ ಕರುಣಾನಿಧಿಯವರು ತಮ್ಮ ಪಕ್ಷ ತನ್ನದೇ ಬಹುಮತವನ್ನು ಪಡೆಯಲಾಗದ ಅಪಾಯವನ್ನು ಲಕ್ಷಿಸದೆ ಮಿತ್ರ ಪಕ್ಷಗಳ ಬಲ ಬೆಳೆಯುವಂತೆ ನಡೆದುಕೊಂಡು ಸಂಯುಕ್ತರಂಗದ ಮೈತ್ರಿ ಧರ್ಮವನ್ನು ಪಾಲಿಸದಿದ್ದರೆ, ಅಂತಹ ಸಂಯುಕ್ತರಂಗ ರಚಿಸದಿದ್ದರೆ, ಅವರ ಒಕ್ಕೂಟ ಜಯಲಲಿತ ಪಕ್ಷಕ್ಕೆ ಅಪಾಯದ ಪೆಟ್ಟು ನೀಡಲು ಸಾಧ್ಯವಾಗುತ್ತಿರಲಿಲ್ಲ.

ಎಡ ಪಕ್ಷಗಳ ರಾಜೀ ರಾಜಕೀಯದ ಬಗ್ಗೆ ಏನೇ ಅಸಮಾಧಾನವಿರಲಿ, ಈಗಷ್ಟೇ ನಡೆದ ಕೆಲವು ರಾಜ್ಯಗಳ ಚುನಾವಣೆಯ ಫಲಿತಾಂಶಗಳು ಕಳೆದ ಬಾರಿಯ ಲೋಕಸಭೆ ಚುನಾವಣೆಯ ಆಶಯಗಳನ್ನು ಮತ್ತಷ್ಟು ವಿಸ್ತರಿಸುವ ಸ್ವರೂಪದ್ದು ಎಂಬುದನ್ನು ಗಮನಿಸಬೇಕಾಗುತ್ತದೆ. ಆರ್ಥಿಕ ಸುಧಾರಣೆಯ ಮುಸುಕಿನಲ್ಲಿ ನಾಗಾಲೋಟದಲ್ಲಿ ಮುನ್ನುಗ್ಗುತ್ತಿರುವ ಬಂಡವಾಳಶಾಹಿ ವ್ಯವಸ್ಥೆಯು ಜನಸಾಮಾನ್ಯರ ಜೀವನದ ಮೇಲೆ ನಡೆಸುತ್ತಿರುವ ಹತ್ತು ಹಲವು ರೀತಿಯ ಚಿತ್ರಹಿಂಸೆಗೆ ಮತ್ತು ಶೋಷಣೆಗೆ ಒಂದಿಷ್ಟು ಕಡಿವಾಣ ಹಾಕಿ, ಸಾಮಾಜಿಕ ನ್ಯಾಯದ ಆಧಾರದ ಮೇಲೆ ಅಭಿವೃದ್ಧಿಯ ಪ್ರಯೋಜನ ಹಂಚಿಕೆ ತುರ್ತಾಗಿ ಆಗಬೇಕು ಎಂಬುದು ಮುಖ್ಯ. ಈ ದೃಷ್ಟಿಕೋನವನ್ನು ಬಿಂಬಿಸುವ ಏಕೈಕ ರಾಜಕೀಯ ಬಣವಾದ ಎಡಪಕ್ಷಗಳ ಒಕ್ಕೂಟಕ್ಕೆ ಮತ್ತಷ್ಟು ಬೆಂಬಲ ಈ ಚುನಾವಣೆಯಲ್ಲಿ ಪ್ರಕಟವಾಗಿದೆ. ಶ್ರೀ ಚಿದಂಬರಂ ಕೂಡ ರಾಜಕೀಯ ಪಕ್ಷಗಳು ಎರಡು ರೂಪಾಯಿಗೆ ಒಂದು ಕೆಜಿ ಅಕ್ಕಿ ನೀಡುವಂತಹ ಘೋಷಣೆಗಳನ್ನು ಆರ್ಥಿಕವಾಗಿ ಸಮರ್ಥನೀಯವೆಂದು ತಮ್ಮ ಬಂಡವಾಳಪರ ಕಟ್ಟರ್ ಪಂಥವನ್ನು ಸಡಿಲಿಸಿಕೊಂಡು ಒಪ್ಪಿಕೊಳ್ಳುವ ಒತ್ತಡ ಉಂಟಾಗಿದೆ. ಕೇಂದ್ರದ ಯುಪಿಎ ಸರ್ಕಾರ ಕನಿಷ್ಠ ಸಾಮಾನ್ಯ ಕಾರ್ಯಕ್ರಮವನ್ನು ಸಾಕಷ್ಟು ಗಂಭೀರವಾಗಿ ಪರಿಗಣಿಸಿ ಪೂರ್ಣಾವಧಿ ಆಡಳಿತ ನಡೆಸಬಹುದೆಂಬ ಇಂಗಿತ ವ್ಯಕ್ತವಾಗಿದೆ. ಚುನಾವಣಾ ಪ್ರಚಾರದ ಬಿರುಸಿನಲ್ಲಿ ಎಡಪಂಥೀಯ ಒಲವುಗಳ ವಿರುದ್ಧ ನಿರಂತರ ಧಾಳಿ ನಡೆಸಿದ ಮಾಧ್ಯಮಗಳು ಸಾಮಾನ್ಯ ಕನಿಷ್ಠ ಕಾರ್ಯಕ್ರಮವು ಆರ್ಥಿಕ ನೀತಿಯಾಗಿ ಅಸಮರ್ಥನೀಯ, ಅದು ಅಭಿವೃದ್ಧಿ ವಿಮುಖಿ, ಅದನ್ನು ಕೂಡಲೆ ಪುನರ್ವಿಮರ್ಶಿಸಬೇಕೆಂದು ವಾದಿಸುತ್ತಿದ್ದುದನ್ನು ಇಲ್ಲಿ ಸ್ಮರಿಸಬೇಕು.

ಮುಂದಿನ ವರ್ಷದ ಫೆಬ್ರವರಿಯಲ್ಲಿ ಉತ್ತರಪ್ರದೇಶದ ಚುನಾವಣೆ ಬರಲಿದ್ದು, ಯುಪಿಎ ಸರ್ಕಾರದ ಚುಕ್ಕಾಣಿ ಹಿಡಿದವರು ಈ ಪುನರ್ವಿಮರ್ಶೆಯ ಹೆಸರಿನಲ್ಲಿ ಜನಪರ ನೀತಿಗಳನ್ನು ಕೈಬಿಡುವ ಸಾಹಸಕ್ಕೆ ಮುಂದಾಗರು ಎಂದು ನಿರೀಕ್ಷಿಸಬಹುದು. ಈ ಚುನಾವಣೆಯ ಫಲಿತಾಂಶದಿಂದ ಎಡಪಕ್ಷಗಳು ಬೀಗುತ್ತಾ, ಕೇಂದ್ರದ ಮೇಲೆ ಅನೈತಿಕ ಒತ್ತಡ ಬೀರುತ್ತಾರೆಂಬ ಆತಂಕ ವ್ಯಕ್ತಪಡಿಸುವವರು ಜನಾದೇಶಕ್ಕೆ ಯಾವ ಮನ್ನಣೆಯನ್ನೂ ನೀಡದ ಸಂಕುಚಿತ ದೃಷ್ಟಿಯವರಾಗಿರುತ್ತಾರೆ. ಸಶಕ್ತವಾಗಿ ನಿರಂತರ ಸ್ಪಂದಿಸುತ್ತಿರುವ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರಾಜಕೀಯ ಪಕ್ಷಗಳು ತಮ್ಮ ಮಿತಿಯನ್ನು ಗುರುತಿಸಿಕೊಂಡು ವಿನೀತರಾಗಿ ವರ್ತಿಸಬೇಕೆಂಬ ಆಶಯವನ್ನು ಜನತೆ ವ್ಯಕ್ತಪಡಿಸಿದೆ.

ಸ್ವಲ್ಪ ಹೆಚ್ಚುಕಡಿಮೆ ನಿಷ್ಪಕ್ಷಪಾತಿಯೂ ಸಮರ್ಥವೂ ಎಂದೆನಿಸಿಕೊಂಡಿರುವ ನಮ್ಮ ಚುನಾವಣಾ ಆಯೋಗ ಮತ್ತು ವ್ಯವಸ್ಥೆಯೂ ಈ ಸಲದ ಚುನಾವಣೆಯನ್ನು ನಡೆಸಿದ ವೈಖರಿಯನ್ನು ಗಮನಿಸಿದರೆ ಇದೇ ಹಿತನುಡಿಯನ್ನು ಅವರಿಗೂ ಹೇಳಬೇಕೆನಿಸುತ್ತದೆ. ''ವೈಜ್ಞಾನಿಕವಾದ ಮತಗಟ್ಟೆಯ ವಂಚನೆ'' ಎಂಬ ಆಪಾದನೆಯ ಆರ್ಭಟದ ಮಧ್ಯೆ, ಅರೆ ಸೇನಾಪಡೆ ಸಶಸ್ತ್ರ ಪೊಲೀಸರ ವಿಪರೀತ ಸಂಖ್ಯೆಯನ್ನು ಬಳಸಿ, ಈಗ ಅನಗತ್ಯವಾಗಿತ್ತೆಂದು ಸ್ಪಷ್ಟವಾಗಿರುವ ಐದು ದಿನಗಳ ಚುನಾವಣೆ ನಡೆಸಿದ ಮೇಲೆ ವ್ಯಕ್ತವಾದದ್ದು ಇಷ್ಟು. ಅದು ಪಶ್ಚಿಮ ಬಂಗಾಳವೇ ಅಲ್ಲದೆ ಎಲ್ಲೆಡೆ ಮತದಾರರು ತಮ್ಮ ಸಾಮೂಹಿಕ ಹಕ್ಕನ್ನು ರಕ್ಷಿಸಿಕೊಳ್ಳಲೋ ಎಂಬಂತೆ ಹಿಂದೆಂದಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಪ್ರಚಂಡ ಬಹುಮತ ನೀಡುವುದರ ಮೂಲಕ ಈ ಅವೈಜ್ಞಾನಿಕ ಚುನಾವಣಾಕ್ರಮವನ್ನು ಒಂದು ಸವಾಲಾಗಿ ಸ್ವೀಕರಿಸಿ, ಜಯಭೇರಿ ಹೊಡೆದಿದ್ದಾರೆ. ಇದನ್ನು ನಮ್ರತೆಯಿಂದ ಒಪ್ಪಿಕೊಂಡಂತೆ ಈಗ ಆಯೋಗದ ಮುಖ್ಯಸ್ಥರು ರಾಷ್ಟ್ರಪತಿಗೆ ಪತ್ರ ಬರೆದಿದ್ದಾರೆ, ಆಯೋಗದ ಸದಸ್ಯರು ನಿಷ್ಪಕ್ಷಪಾತಿಗಳಾಗಿರುವಂತೆ, ಪಾರದರ್ಶಕವಾಗಿ ಅವರನ್ನು ಆರಿಸಲು ಪ್ರಧಾನಿಯ ನೇತೃತ್ವದಲ್ಲಿ ಸಮಿತಿ ರಚಿಸಬೇಕೆಂದು. ಇದೊಂದು ಸ್ವಾಗತಾರ್ಹ ಬೆಳವಣಿಗೆ.

ಕೇರಳ ಮತ್ತು ಪಶ್ಚಿಮ ಬಂಗಾಳದ ಫಲಿತಾಂಶಗಳಲ್ಲಿ ಅನಿರೀಕ್ಷಿತವಾದದ್ದೇನೂ ಇಲ್ಲ. ಅಲ್ಲಿ ಸೋತವರು ತಾವೇಕೆ ಸೋತೆವೆಂದು ಆತ್ಮಶೋಧನೆ ಮಾಡಿಕೊಳ್ಳುವುದು ಅನಿವಾರ್ಯ. ನಮಗೆ ಮುಖ್ಯವೆನಿಸುವ ಬೆಳವಣಿಗೆಯೆಂದರೆ ಎನ್‌ಡಿಎ ಒಕ್ಕೂಟದ ಅಭ್ಯರ್ಥಿಗಳನ್ನು ಜನತೆ ಸಂಪೂರ್ಣವಾಗಿ ತಿರಸ್ಕರಿಸಿರುವುದು. ನಾವು ಈ ಸ್ಪರ್ಧೆಯಲ್ಲಿ ಇರಲೇ ಇಲ್ಲವೆಂಬ ಅವರ ಹಾರಿಕೆಯ ಮಾತಿನ ಬಗ್ಗೆ ಅನುಕಂಪ ಸೂಚಿಸಬೇಕಷ್ಟೆ. ಮೂರು ರಾಜ್ಯಗಳಲ್ಲಿ ಹೆಸರಿಗೆ ಒಬ್ಬ ಸದಸ್ಯನೂ ಚುನಾಯಿಸಲ್ಪಟ್ಟಿಲ್ಲ. ಅವರ ಮತದ ಪಾಲೂ ಕಡಿಮೆಯಾಗಿದೆ. ತಮಿಳುನಾಡಿನಲ್ಲಿ ದ್ರಾವಿಡ ಸಿದ್ಧಾಂತದ ಪ್ರಯೋಗಕ್ಕೆ ಬೆಂಬಲ ಕುಸಿದಿದೆ. ಆದರೆ ಅಲ್ಲಿಯ ಸಿನೀಮೀಯ ಭ್ರಾಮಕತೆಗೆ ಇನ್ನೂ ಒಂದಿಷ್ಟು ಬೆಂಬಲವಿರುವುದು ವಿಜಯಕಾಂತ್ ಅವರ ಪಕ್ಷ ಸಾಕಷ್ಟು ಮತ ಗಳಿಸಿ, ಡಿಎಂಕೆ ಪಕ್ಷ ತಂತಾನೇ ಬಹುಮತ ಪಡೆಯಲು ಸಾಧ್ಯವಾಗದಂತೆ ಮಾಡಿದೆ. ಕೋಮುವಾದಿಗಳೊಡನೆ ಮುಸುಕಿನ ಗುದ್ದಾಟ ನಡೆಸುತ್ತಾ ಚಂಚಲ ನೀತಿಗಳನ್ನು ರೂಪಿಸುತ್ತಾ ಗೊಂದಲದ ಆಡಳಿತ ನೀಡಿದ ಜಯಲಲಿತಾ ಪಕ್ಷ ಅಧಿಕಾರ ಕಳೆದುಕೊಂಡದ್ದು ಆಶ್ಚರ್ಯವೇನಿಲ್ಲ. ಆದರೂ ಆಕೆಯ ಸೋಲಿಗೆ ಮುಖ್ಯ ಕಾರಣ ವಿರೋಧ ಪಕ್ಷಗಳು ಕೆಲವು ಕಾರ್ಯಕ್ರಮಗಳ ಆಧಾರದ ಮೇಲೆ ರಚಿಸಿಕೊಂಡ ಸಂಯುಕ್ತರಂಗ. ಈ ಬೆಳವಣಿಗೆಗಳು ತಮಿಳುನಾಡಿನ ರಾಜಕೀಯದ ಮೇಲೆ ಉತ್ತಮ ಪ್ರಭಾವ ಬೀರುವ ಸೂಚನೆಗಳಿವೆ. ಜಯಲಲಿತಾ ಎಷ್ಟೇ ಬಯಸಿದರೂ, ಕರುಣಾನಿಧಿ ಈಗಾಗಲೇ ಪ್ರತೀಕಾರಾತ್ಮಕ ರಾಜಕೀಯವನ್ನು ನಡೆಸುವುದಿಲ್ಲವೆಂಬ ಇಂಗಿತ ನೀಡಿ ರಾಜಕೀಯ ಪ್ರಬುದ್ಧತೆಯನ್ನು ಪ್ರಕಟಿಸಿದ್ದಾರೆ. ಇಷ್ಟಕ್ಕೂ ಅವರು ಸಂಯುಕ್ತರಂಗದ ಎಲ್ಲ ಸದಸ್ಯರನ್ನೂ ಒಟ್ಟಿಗೆ ಇರಿಸಿಕೊಂಡರೆ ಮಾತ್ರ ಆಡಳಿತ ಮಾಡಬಲ್ಲರು. ಇನ್ನೊಂದು ಮುಖ್ಯ ವಿಷಯ ಸೈದ್ಧಾಂತಿಕವಾಗಿ ಮತ್ತು ರಾಜಕೀಯವಾಗಿ ಅದರ ಪ್ರಯೋಜನಕ್ಕೆ ಸಂಬಂಧಪಟ್ಟದ್ದು. ಬುದ್ಧದೇವರು ಹೊಸ ನೀತಿಯನ್ನು ಹೇಳಿಲ್ಲ, ೧೯೯೪ರಲ್ಲೇ ನಾವು ಈ ನೀತಿಯನ್ನು ಸ್ಪಷ್ಟಪಡಿಸಿದ್ದೇವೆ ಎಂದು ಜ್ಯೋತಿ ಬಸು ಅವರೂ ಹೇಳಿದ್ದಾರೆ. ಬಂಡವಳಿಗರಿಗೆ ಬಂಡವಾಳದ ಸಮರ್ಥಕರೆಂಬಂತೆ, ಕೃಷಿ ಕಾರ್ಮಿಕರಿಗೆ ಬಡಜನರಿಗೆ ಅವರ ನೇತಾರರಂತೆ ಏಕಕಾಲದಲ್ಲಿ ಕಾಣಿಸಿಕೊಳ್ಳುವ ಈ ರಾಜಕೀಯದ ಮೋಡಿಯ ಬಗ್ಗೆ ಸಿದ್ಧಾಂತದ ಬೆನ್ನುಹತ್ತಿದವರು ನಿಬ್ಬೆರಗಾಗಿದ್ದಾರೆ. ''ಚೀನಾದಲ್ಲಿ ಬದಲಾದ್ದರಿಂದ ನಾವು ಬದಲಾಗುತ್ತೇವೆ'' ಎಂದು ಈ ಬೆಳವಣಿಗೆಯ ಬಗ್ಗೆ ಮಾಧ್ಯಮಗಳು ಕುಹಕವಾಡುತ್ತಿವೆ. ಸೈದ್ಧಾಂತಿಕ ಚಳವಳಿಗಳ ಸರಿತಪ್ಪುಗಳನ್ನು ತುಲನೆ ಮಾಡುವಾಗ ನಾಲ್ಕೈದು ದಶಕಗಳ ಕಾಲಮಾನ ಅಲ್ಪ ಪ್ರಮಾಣದ್ದು. ಅರವತ್ತರ ದಶಕದಲ್ಲಿ ಯಾವ ಮಾರ್ಗವನ್ನು ಸೈದ್ಧಾಂತಿಕವಾಗಿ ಖಂಡಿಸಲಾಗಿತ್ತೋ ಅದಕ್ಕೇ ತೊಂಭತ್ತರ ದಶಕದಲ್ಲಿ ಹಿಂತಿರುಗುವುದಾದರೆ, ಆ ಸಂದರ್ಭದ ನಡವಳಿಕೆ ಅಥವಾ ಇಂದಿನ ಅವಕಾಶವಾದವನ್ನು ಸೈದ್ಧಾಂತಿಕವಾಗಿ ಟೀಕಿಸದೆ ವಿಧಿಯಿಲ್ಲ. ಈ ಟೀಕೆಯ ಉದ್ದೇಶ ಇಷ್ಟೇ: ಎಡಪಕ್ಷಗಳು ಹಲವು ಪಕ್ಷಗಳಾಗಿ ವಿಂಗಡಿಸಿಕೊಂಡಿರುವುದಕ್ಕೆ ಎಂದೂ ಅರ್ಥವಿರಲಿಲ್ಲ, ಇಂದೂ ಇಲ್ಲ. ಬಹುಶಃ ಅವರಲ್ಲಿ ಸೈದ್ಧಾಂತಿಕ ಮತ್ತು ರಾಜಕೀಯ ಒಮ್ಮತ ಉಂಟಾದರೆ, ಜನತೆ ಗೊಂದಲವಿಲ್ಲದೆ ಅವಕ್ಕೆ ಇನ್ನೂ ಹೆಚ್ಚಿನ ಬೆಂಬಲ ನೀಡಿಯಾರು. ಅವರ ನಡುವಿನ ಒಡಕು ಅರ್ಥಹೀನವಾಗಿದ್ದು, ಇಷ್ಟು ಕಾಲ ರಾಜಕೀಯವಾಗಿ ಅವರು ಬೆಳೆಯಲು ಅದು ಅಡಚಣೆಯಾಗಿ, ಅವರ ವಿರೋಧಿಗಳಿಗೆ ಆನಂದ ನೀಡಿತ್ತು. ಕಳೆದ ಎರಡು ಚುನಾವಣೆಗಳೂ ಮೂರನೆಯ ರಂಗ ರಚನೆಗೆ ಇಂಗಿತ ನೀಡಿದ್ದರೆ, ಅದು ಮೊದಲಿಗೆ ಎಡಪಕ್ಷಗಳ ಐಕ್ಯತೆಯಿಂದ ಆರಂಭವಾಗಬೇಕು.

ಚುನಾವಣೆಗೆ ಮುಂಚೆ ಸಂಯುಕ್ತರಂಗವು ಸಂಯುಕ್ತ ಘೋಷಣೆಗಳನ್ನು ರಚಿಸಿಕೊಂಡಿದ್ದರೆ, ಚುನಾವಣೆಯ ನಂತರ ಕೆಲವು ಪಕ್ಷಗಳು ಸರ್ಕಾರ ಸೇರದೆ ಹೊರಗೆ ನಿಲ್ಲುವ ಪರಿಪಾಠ ಮುಂದುವರಿದಿರುವುದು ವಿಷಾದನೀಯ. ಇದು ಮತದಾರರ ಇಂಗಿತಕ್ಕೆ ವಿರೋಧವಾದ ಪ್ರಕ್ರಿಯೆ. ಚುನಾವಣೆಗೆ ಮುಂಚಿತವಾಗಿಯೇ ತಾವು ಸರ್ಕಾರವನ್ನು ಸೇರುವುದಿಲ್ಲವೆಂದು ಹೇಳಿದ್ದರೆ, ಈ ರಂಗಕ್ಕೆ ಇಷ್ಟು ಸ್ಥಾನಗಳು ದೊರಕುತ್ತಿದ್ದವೇ ? ಈ ವರ್ತನೆ ಸಂಯುಕ್ತರಂಗದ ರಾಜಕೀಯ ಸಿದ್ಧಾಂತಕ್ಕೆ ವಿರುದ್ಧವಾದುದು ಎಂದು ಹೇಳಲೇಬೇಕಾಗುತ್ತದೆ.




**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




## ಮೇ ಸಂಚಿಕೆ

**ಸಂ**ಪ್ರತಿ ವಿಷಯಗಳನ್ನು ಗರ್ಭೀಕರಿಸಿಕೊಂಡು ವಿಚಾರ ಪ್ರಚೋದಕ ಹೂರಣ ಉಣಬಡಿಸಿದೆ. ಮುಖ್ಯವಾಗಿ ಬಂಡವಾಳ ಖಾತೆ ಪರಿವರ್ತನೆಗೆ ಸಂಬಂಧಿಸಿದಂತೆ ಡಾ|| ಡಿ. ನರಸಿಂಹರೆಡ್ಡಿ ಅವರ ''ಪ್ರಕಾಶಿಸುವಂಥದ್ದು ಏನೂ ಇಲ್ಲ'' ಮತ್ತು ಡಾ|| ಕೆ. ಎಸ್. ಕೃಷ್ಣಸ್ವಾಮಿ ಅವರ 'ರೂಪಾಯಿ ಮುಕ್ತ ವ್ಯಾಪಾರ ಸೂಕ್ತವೇ ?' ಲೇಖನಗಳು ಅತ್ಯಂತ ಸ್ಪಷ್ಟವಾಗಿ ಸರ್ಕಾರಕ್ಕೆ ಎಚ್ಚರಿಕೆಯ ಗಂಟೆಯನ್ನು ಬಾರಿಸಿವೆ. ಈಗಿರುವ ಪಾರ್ಶ್ವ ಪರಿವರ್ತನೆಯಿಂದ ಏನು ಲಾಭ ಹಾಗೂ ಏನು ನಷ್ಟ ಎನ್ನುವುದನ್ನು ತಾಳೆ ನೋಡಿದರಷ್ಟೇ ಸಾಲದು. ನಮ್ಮ ಆರ್ಥಿಕತೆಯ ಮೂಲಭೂತ ಅಂಶಗಳನ್ನು ಅದರಲ್ಲಿಯೂ 'ಈಕ್ವಿಟಿ' – ಆರ್ಥಿಕ, ಸಾಮಜಿಕ, ರಾಜಕೀಯ, ಶೈಕ್ಷಣಿಕ ಇತ್ಯಾದಿ - ಸಾಧಿಸುವ ಕುರಿತು ಲಕ್ಷ್ಯ ಕೇಂದ್ರೀಕರಿಸಬೇಕು. ಪ್ರಧಾನಮಂತ್ರಿಗಳು ಈ ದಿಶೆಯಲ್ಲಿ ನಿಧಾನದ ಹೆಜ್ಜೆ ಇಡುವುದೇ ಸೂಕ್ತ. ತಾರಪೂರ ಏನೇ ಇದ್ದರೂ ಎಚ್ಚರಿಕೆ ಅವಶ್ಯ.

ಸಂಚಿಕೆಯ ಡಾ|| ಮೂಡ್ನಕೂಡು ಚಿನ್ನಸ್ವಾಮಿ ಅವರ 'ಬೌದ್ಧ ಧರ್ಮ ಹಾಗೂ ಅದರ ಪ್ರಸ್ತುತತೆ' ಮೌಲಿಕವಾಗಿ ಬರೆಯಲಾಗಿದೆ. ಬೌದ್ಧ ಧರ್ಮ ವಾಸ್ತವಿಕ ನೆಲೆಗಟ್ಟಿನ ಮೇಲೆ ನಿಂತಿರುವ ಮೌಢ್ಯತೆಗೆ ಮಣೆ ಹಾಕದೆ ವಿಚಾರಶೀಲ ಪಥದಲ್ಲಿ ಸಾಗಲು ಪ್ರೇರಣೆ ನೀಡುವಂಥದ್ದು.

ಸೇಡಂ **ಬಿ. ಆರ್. ಅಣ್ಣಾಸಾಗರ್**

ಅಣ್ಣ ರಾಜಣ್ಣನವರ ಮುಖಪುಟ ಹೊತ್ತ ಸಂಚಿಕೆ ತುಂಬ ಚೆನ್ನಾಗಿತ್ತು ಹಾಗೂ ಸಮಯೋಚಿತವಾಗಿತ್ತು. ಕನ್ನಡಕ್ಕೆ ಇಬ್ಬರು ಅಣ್ಣ. ಒಬ್ಬರು ಬಸವಣ್ಣ ಮತ್ತೊಬ್ಬರು ರಾಜಣ್ಣ. ನಿಜವಾಗಿಯೂ ಸಹ ರಾಜ್ ಯುಗ ಅಂತ್ಯ ವಾಗಿದೆ. ಸರಳತೆ, ಸಮಯಪಾಲನೆ, ಭಾವನೆ, ತಲ್ಲೀನತೆ, ಭಾಷಾಸ್ಪಷ್ಟತೆ, ಎಲ್ಲ ವಿಚಾರದಲ್ಲೂ ಅಣ್ಣ ಎಲ್ಲರ ಹೃದಯದಲ್ಲಿ ಮನೆ ಮಾಡಿದ್ದಾರೆ. ಅವರನ್ನು ಕಳೆದು ಕೊಂಡು ಕರ್ನಾಟಕ ಬಡವಾಗಿದೆ. ಕಣ್ಣು ಕೊಟ್ಟು ತಮ್ಮ ನುಡಿಯಂತೆ ನಡೆ ಎಂಬ ಮಾತನ್ನು ಸತ್ಯವನ್ನಾಗಿಸಿ ಬಿಟ್ಟರು. ನಿಜವಾಗಿಯೂ ಮುತ್ತುರಾಜ್ ಕರ್ನಾಟಕದ ಮುತ್ತು. ಶರೀರ, ಶಾರೀರ ಎರಡರಲ್ಲೂ ಉನ್ನತ ಮಟ್ಟಕ್ಕೇರಿದ ಅಭಿಮಾನಿ ದೇವರುಗಳ ಅಭಿಮಾನದ ಅಣ್ಣ ಚಿರಂಜೀವಿಯೇ ಸರಿ.

ವಿಠಲಾಪುರ **ಪಾಂಡವಪುರ ಮೃತ್ಯುಂಜಯ**

ಪ್ರೊ|| ಬರಗೂರು ರಾಮಚಂದ್ರಪ್ಪನವರ ಲೇಖನ ''ಡಾ|| ರಾಜ್ ರೂಪದೊಳಗಿನ ರೂಪಕ'' ''ಕಥಾನಾಯಕನ ಕಥೆ'' ಯಂತೆ ಚೆನ್ನಾಗಿ ಮೂಡಿಬಂತು. ಜಿ. ಎಂ. ಶಿರಹಟ್ಟಿಯವರ ''ಔಟ್ ಆಫ್ ಪ್ರಿಂಟ್'' ಪುಸ್ತಕಕ್ಕಾಗಿ ಪ್ರಯಾಸ, ಪ್ರವಾಸವಾದಂಗಿತ್ತು. ಡಾ|| ಸಬಿಹಾ ಭೂಮಿಗೌಡರ 'ಸಂಬಂಧ' ಓದಿಸುತ್ತ ಹೋಗಿತ್ತು.

ಲಕ್ಷ್ಮೇಶ್ವರ **ಬಸವರಾಜ ಶಿ. ಬಾಳೇಶ್ವರಮಠ**

ಪ್ರೊ|| ಬರಗೂರು ರಾಮಚಂದ್ರಪ್ಪರವರು ಬರೆದಿರುವ ''ಡಾ|| ರಾಜಕುಮಾರ್ ರೂಪದೊಳಗಿನ ರೂಪಕ'' ಲೇಖನ ಔಚಿತ್ಯಪೂರ್ಣವಾಗಿತ್ತು. ಲೇಖಕರು ಪ್ರಸ್ತಾಪಿಸಿರುವ ಘಟನೆಗಳು ರಾಜಕುಮಾರ್‌ರವರ ಅಪೂರ್ವ ವ್ಯಕ್ತಿತ್ವ ಅರಿಯಲು ನೆರವಾಗುವಂತಿದೆ. ರಾಜಕುಮಾರ್ ಅವರನ್ನು 'ಬೆವರಿನ ಮನುಷ್ಯ' ಎಂದು ಕರೆದಿರುವುದು ಅರ್ಥ ಪೂರ್ಣವಾಗಿದೆ. ಶ್ರಮ ಜೀವಿಗಳಿಗೆ ಸಂದ ಫಲವಾಗಿ ಅತ್ಯುನ್ನತ ಪದವಿ ರಾಜ್‌ಕುಮಾರ್ ಅವರಿಗೆ ಸಂದಿದೆ.

ಮೇ, ೨೦೦೬ ಸಂಚಿಕೆಯಲ್ಲಿ ರಾಜಣ್ಣನವರ ಭಾವಚಿತ್ರವಿರುವ ಮುಖಪುಟದೊಂದಿಗೆ ಒಳಪುಟದಲ್ಲಿ ಇರುವ ಲೇಖನಗಳು, ಕವನಗಳು ವಿಶಾಲ ಮನೋಭಾವನೆ ಬೆಳೆಸಿಕೊಂಡು, ಸ್ವಚ್ಛಂದವಾಗಿರುವ ಬದುಕನ್ನು ರೂಪಿಸಿಕೊಳ್ಳಲು ಪ್ರೇರಕವಾಗುತ್ತಿವೆ.

ತೆಕ್ಕಲಕೋಟೆ **ಡಾ|| ನೆಲ್ಲಿಕಟ್ಟೆ ಎಸ್. ಸಿದ್ದೇಶ್**




ನನಗೆ ತುಂಬಾ ಇಷ್ಟವಾದ 'ಮಹಿಳೆ' ಕವಿತೆ; ಡಾ|| ಹೇಮಲತ ಅವರ ಅನುವಾದ ತುಂಬಾ ಚೆನ್ನಾಗಿದೆ.

'ಮಹಿಳೆ' ಯನ್ನು ಪ್ರಕೃತಿಯಲ್ಲಿನ ಝರಿ, ನದಿ, ಸಮುದ್ರ, ಜ್ವಾಲೆ, ಕಲ್ಲು, ಗಾಳಿ ಜೊತೆ ಪುಸ್ತಕಕ್ಕೆ ಹೋಲಿಸಿದ್ದು ಕವನದಲ್ಲಿ ಮಹಿಳೆಯ ಆಸೆ, ನೋವು, ನಲಿವು, ತ್ಯಾಗ, ಹಿಂಸೆ, ಸಹನೆಯನ್ನು ಒಂದೊಂದು ಹೋಲಿಕೆಯಲ್ಲಿ ತುಂಬಾ ಸರಳ ಭಾಷೆಯಲ್ಲಿ ಎಲ್ಲರಿಗೂ ಅರ್ಥವಾಗುವಂತೆ ಮಹಿಳೆಯನ್ನು ಕಾವ್ಯದಲ್ಲಿ ಹಿಡಿದಿಟ್ಟಿದ್ದಾರೆ. ಆದ್ದರಿಂದ ಇಷ್ಟವಾಯಿತು.

ಬೆಂಗಳೂರು **ಮಿಡ್ಗೇಶಿ ಶಿವರಾಮ**

''ಬೌದ್ಧ ಧರ್ಮ ಹಾಗೂ ಅದರ ಪ್ರಸ್ತುತತೆ'' ಎಂಬ ಡಾ||ಮೂಡ್ನಾಕೂಡು ಚಿನ್ನಸ್ವಾಮಿಯರ ಲೇಖನಕ್ಕೆ ಸಂಬಂಧಿಸಿ, ಭವಿಷ್ಯದ ಧರ್ಮವೇನಾದರೂ ಇದ್ದರೆ, ಅದು ಬೌದ್ಧ ಧರ್ಮ ಎಂಬುದು ಐನ್‌ಸ್ಟೈನ್ ಎಂಬ ವಿಜ್ಞಾನಿಯ ಮಾತು ಎಂದು ಹೇಳಲಾಗಿದೆ. ಆದರೆ ಇದೇ ಮಾತನ್ನು ಮುಸ್ಲಿಂ ಧರ್ಮದ ಪರವಾಗಿ ಇನ್ನೋರ್ವ ಖ್ಯಾತ ಬುದ್ಧಿಜೀವಿ ಬರ್ನಾರ್ಡ್ ಶಾ ಆಡಿದ್ದರು ಎಂಬುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ಈಗ ಮುಸ್ಲಿಂ ತಾಲಿಬಾನರು ಬೌದ್ಧ ಧರ್ಮ ವಿರೋಧಿಗಳಾಗಿ ಬುದ್ಧನ ವಿಗ್ರಹಗಳನ್ನು ಅಫಘಾನಿಸ್ಥಾನದಲ್ಲಿ ಕೆಡವಿದ್ದು ಒಂದು ವಿಪರ್ಯಾಸದ ಘಟನೆ ಎಂದೆನಿಸುತ್ತಿಲ್ಲವೇ ? ಅದು ಮೌಢ್ಯದ ಪರಮಾವಧಿ ಎಂದು ಕಡೆಗಣಿಸಬಹುದೇ ?

ಸುರತ್ಕಲ್ **ಟಿ. ಸಿ. ಶ್ರೀಯಾನ್**

ಇವತ್ತಿನ ವೈಚಾರಿಕ ಗದ್ಯದ ಯುಗದಲ್ಲಿ ಕಾವ್ಯ ತನ್ನದೇ ಕಾರಣಗಳಿಂದ ತಾತ್ಸಾರ – ನಿರ್ಲಕ್ಷ್ಯಕ್ಕೆ ಒಳಗಾಗುತ್ತಿದೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಂತೂ ಕಾವ್ಯದ ಸೃಷ್ಟಿ ಸರಳ – ಸಲೀಸು ಎಂಬಂತಾಗಿದೆ. ಆದರೆ ಪ್ರತಿ ತಿಂಗಳ 'ಹೊಸತು' ಕೈ ಸೇರಿದ ಕ್ಷಣ ಪುಟ ತೆರೆಯುವುದೇ ನಾನು ಕವಿತೆಗಳಿಗಾಗಿ. ಓದುಗರಲ್ಲಿ ಅಂಥ ನಿರೀಕ್ಷೆ ಕಾಯ್ದುಕೊಂಡಿರುವುದಕ್ಕೆ ಧನ್ಯವಾದಗಳು.

ಮೇನಲ್ಲಿ ಪ್ರಕಟಗೊಂಡಿರುವ ನಮ್ಮದಲ್ಲದ ಊರು, ಸಂಕರಮೂರ್ತಿ, ಹೆಬ್ಬಾಲ, ಎರಡು ಗಜಲುಗಳು-ಸಶಕ್ತ ಕವಿತೆಗಳು. ಡಾ|| ವಸುರವರ 'ಹೆಬ್ಬಾಲ' ರಚನೆ, ಬಂಧ, ಶೈಲಿ, ವಿಷಯದ ತಿರುಳಿನ ರೂಪಕ ತಂತ್ರ ವ್ಯವಸ್ಥೆಯ ಸಂಕಟ – ಸಣ್ಣತನಗಳನ್ನು ತೋರಿಸಿಕೊಡುವಲ್ಲಿ ಯಶಸ್ಸು ಕಂಡಿದೆ. ಕವಿ, ರೂಪಕ ಬಲೆ ಹೆಣೆಯುವ ಸಾಹಸದಲ್ಲಿ ಸಿಲುಕಿ ತನ್ನ ಸೃಷ್ಟಿಯನ್ನು ತಾನೇ ಕಟ್ಟಿ ಹಾಕುತ್ತಾನೆ. ಇಲ್ಲಿ ಇಡೀ ಕವಿತೆಯೇ ರೂಪಕವಾದರೂ, ಒಟ್ಟು ಅರ್ಥ ಗ್ರಹಿಕೆಗೆ ದಕ್ಕುವಂತಾಗಿರುವುದು ವಿಶೇಷವಾಗಿದೆ. ಹಬ್ಬುವ ಪ್ರಜಾಪ್ರಭುತ್ವದ ಹೆಬ್ಬಾಲದ ಮರಕ್ಕೆ ಮುಳ್ಳುಗಳಂತಿರುವ ಕಬ್ಬೆಕ್ಕು, ಕೊಂಡಿಚೇಳು, ಹಾವುರಾಣಿ ಹಾಗೂ ಎಲ್ಲವನ್ನೂ ನುಂಗಿ ನೊಣೆಯುವ ಹೆಬ್ಬಾವು ಅಧಿಕಾರದ ರಾಜಕಾರಣವನ್ನು, ಅದರ ಪೂರಕ ವ್ಯವಸ್ಥೆಯನ್ನು ಸಂಕೇತಿಸುತ್ತವೆ. ರೇಖಾಚಿತ್ರವಂತೂ ರೂಪಕ ಅಭಿವ್ಯಕ್ತಿಗೆ ಮೂರ್ತರೂಪದಂತಿದೆ.

ಕುಶಾಲನಗರ **ಶಿವಪ್ರಕಾಶ ದೊಡ್ಡಗುಣಿ**

ಏಪ್ರಿಲ್ ತಿಂಗಳಿನ 'ಹೊಸತು' ವಿನಲ್ಲಿ ಮೂಡಿಬಂದ ಹಾಸ್ಯ ಮಿಶ್ರಿತ ನಾಟಕ 'ಎಲ್ಲಾರು ಮಾಡುವುದು ಏತಕ್ಕಾಗಿ' ತುಂಬಾ ಚೆನ್ನಾಗಿತ್ತು. ಹಾಸ್ಯದಿಂದ ಕೂಡಿದ್ದರೂ ಸಹ ಅನುಭವದ ಅರ್ಥವಿದೆ. ಗೇಣು ಹೊಟ್ಟೆಗಾಗಿ ಮನುಷ್ಯ ಏನು ಬೇಕಾದರೂ ಮಾಡಲು ಸಿದ್ಧ ಎಂದು ಈ ನಾಟಕದಿಂದ ತಿಳಿಯುತ್ತದೆ. ಇದೆ ರೀತಿ ಹೊಸ ಲೇಖನಗಳು ಮೂಡಿಬರಲೆಂದು ಹಾರೈಸುವೆ.

ವಂದಾಲ **ಎಸ್. ಎಮ್. ತೋಟದ**

೨೦೦೬ರ 'ಗುರುತು' ಮಾಸಿಕದ ಕಥಾ ಸ್ಪರ್ಧೆಯ ಫಲಿತಾಂಶ ಪ್ರಕಟವಾಗಿದೆ. ಮುಂಬಯಿ 'ಬಿಲ್ಲವ ಜಾಗೃತಿ ಬಳಗ'ದ ಪತ್ರಿಕೆ 'ಗುರುತು'. ಡಾ|| ಕೆ. ಎಂ. ಚಂದರ್, ಮೈಸೂರು, ಸಂತಿ ಕಸಲಗೆರೆ, ಮಂಡ್ಯ ಮತ್ತು ಅಲಕ ತೀರ್ಥಹಳ್ಳಿ, ತೀರ್ಥಹಳ್ಳಿ, ಇವರಿಗೆ ಮೊದಲ ಮೂರು ಬಹುಮಾನಗಳು ಬಂದಿವೆ.

*೩ನೇ ಪುಟದಿಂದ (ಈ ತಿಂಗಳು)*

ಸಮಸ್ಯೆಗೆ ಶಾಶ್ವತ ಪರಿಹಾರ ನೀಡಲಾಗಲಿಲ್ಲವೆಂಬುದು ಅವರಿಗೆ ತಿಳಿದಿಲ್ಲವೆ? ಕಾಶ್ಮೀರದ ಜನರಿಗೆ ಸ್ವಾತಂತ್ರ್ಯ ಕೊಡಿಸುತ್ತೇವೆಂದು ಹೇಳುವ ಉಗ್ರಗಾಮಿಗಳು ಅವರಿಗೆ ನೀಡುತ್ತಿರುವುದು ಸಾಯುವ ಸ್ವಾತಂತ್ರ್ಯ! ಕ್ರಮೇಣ ಕಾಶ್ಮೀರದ ಜನರಿಗೂ ಇದರ ತಿಳುವಳಿಕೆ ಉಂಟಾಗುತ್ತಿದೆ. ಈ ಮಧ್ಯೆ ಉಗ್ರಗಾಮಿಗಳೂ ಸೇರಿದಂತೆ ಶ್ರೀನಗರದಲ್ಲಿ ಲೈಂಗಿಕ ಹಗರಣದಲ್ಲಿ ಭಾಗಿಗಳಾಗಿರುವವರ ಪಟ್ಟಿ ದೊಡ್ಡದಾಗಿದೆ. ರಾಜಕೀಯ ನಾಯಕರು, ಪೊಲೀಸರು, ಮಿಲಿಟರಿ ಮಂದಿ, ಎಲ್ಲಾ ಇದರಲ್ಲಿ ಸೇರಿದ್ದಾರೆ. ಮಹಿಳೆಯರನ್ನು ವ್ಯಾಪಾರದ ವಸ್ತುವಾಗಿಸಿರುವ ನಮ್ಮ ನಾಗರಿಕತೆಯಲ್ಲಿ, ಪರಸ್ಪರ ವಿರೋಧಿಗಳು ಈ ಒಂದು ವಿಷಯದಲ್ಲಿ ಸಮಾನರಾಗಿ ಬಿಡುವುದು ನಾಚಿಕೆಗೇಡು, ದುರಂತ. ಮಾಧ್ಯಮಗಳು ಇದನ್ನು ಚಿತ್ರಿಸುವ ವಿಧಾನ ಕೂಡ ಅಷ್ಟೇ ಮಾರಕವಾದುದು. ಇದೆಲ್ಲಾ ಸಹಜಕ್ರಿಯೆಯೆಂಬ ಧೋರಣೆಯನ್ನು ಬುದ್ಧಿವಂತಿಕೆಯಿಂದ ಪ್ರಚುರಪಡಿಸುವುದು ಖಂಡಿತ ಶ್ಲಾಘನೀಯವಲ್ಲ. ಮೀಸಲಾತಿಯನ್ನು ವಿರೋಧಿಸುವ ಧೀಮಂತರಿಗೆ ವಿಶಿಷ್ಟ ಪ್ರಚಾರ ನೀಡುವ ನಮ್ಮ ಕೆಲವು ಮಾಧ್ಯಮ ಪಂಡಿತರು 'ಅರ್ಹತೆ' ಎಂಬುದರ ಮೂಲಭೂತ ಆಯಾಮಗಳನ್ನು ಕುರಿತು ಚಿಂತಿಸುವುದೇ ಇಲ್ಲ. ಅಂತೆಯೇ ಮಹಿಳಾ ಪ್ರಶ್ನೆಯನ್ನು ಸಹ ಕೆಲವು ಮಾಧ್ಯಮಗಳು ರೋಚಕವಾದ ಸಂಗತಿಯೆಂಬಂತೆ ಚಿತ್ರಿಸಿ ಗಂಭೀರ ವಿಶ್ಲೇಷಣೆಯೆಂದರೆ ಇದೇ ಎಂಬ ರೀತಿಯಲ್ಲಿ ವರ್ತಿಸುತ್ತವೆ. ವಿವೇಚನೆ ಇರುವ ಜನಸಾಮಾನ್ಯರು ಇದರ ಒಳಹೊಕ್ಕು ಅರಿವನ್ನು ಬೆಳೆಸಿಕೊಳ್ಳಬೇಕಾಗಿದೆ.

* * *

ಸಚಿನ್ ತೆಂಡುಲ್ಕರ್ ಎಂಬ ಧೀರ ಆಟಗಾರ ಕುಕ್ಕೆಗೆ ಬಂದು ನಾಗದೋಷ ನಿವಾರಣೆ ಮಾಡಿಕೊಂಡನಂತೆ. ಅದರ ಬದಲು ಎಲ್ಲವೂ 'ಪಿಚ್ ದೋಷ' ಎಂದು ಪೆಚ್ಚು ಪೆಚ್ಚಾಗಿ ಹೇಳಿದ್ದರೆ ಸ್ವಲ್ಪ ಹೆಚ್ಚಿನ ಆದರ ಗಳಿಸಿಕೊಳ್ಳಬಹುದಾಗಿತ್ತು. ಮುಂಬೈನ ಫ್ಲೋರಾ ಫೌಂಟನ್ ಬಳಿ ಇರುವ ಆತನ ಹೋಟೇಲಿಗೆ ಏನಿಲ್ಲವೆಂದರೂ ಒಂದು ಸಾವಿರ ಕೋಟಿ ರೂಪಾಯಿ ಬೆಲೆಯಾಗುತ್ತದಂತೆ. ತಾನು ಆಡುತ್ತಲೇ ಇರಬೇಕಾದ್ದು ಅದನ್ನು ವರ್ಧಿಸಿಕೊಳ್ಳುವ ಸಲುವಾಗಿ. ಕೆಲಕಾಲ ತೆಪ್ಪಗಿದ್ದು ವೈದ್ಯರ ಸಲಹೆಯಂತೆ ನಡೆದರೆ ನಾಗದೋಷ ನಿವಾರಣೆ ಬೇಕಾಗುವುದಿಲ್ಲ. ಆದರೆ ಕೋಟಿಗಳ ವ್ಯಾಮೋಹವು ಈತನನ್ನು ಮೂರ್ಖತನದ ಕೂಪಕ್ಕೆ ತಳ್ಳಿದೆ. ಆತ ದೋಷ ನಿವಾರಿಸಿಕೊಂಡರೆ ಆತನ ಅಭಿಮಾನಿಗಳೂ ಕೂಡ ಕುಕ್ಕೆಗೆ ಲಗ್ಗೆಯಿಟ್ಟು ದೋಷ ನಿವಾರಿಸಿಕೊಳ್ಳಬೇಡವೇ ? ಅದಕ್ಕೇ ಅಲ್ಲಿ ನೂಕುನುಗ್ಗಲಂತೆ ! ಒಬ್ಬ ಮೂರ್ಖನನ್ನು ಹುಡುಕ ಹೊರಟರೆ ಸಾವಿರ ಜನ ಸಿಕ್ಕುತ್ತಾರೆಂಬುದಕ್ಕೆ ಇದೊಂದು ನಿದರ್ಶನ.

* * *

ಐ.ಐ.ಟಿ. ಮುಂತಾದ ಸಂಸ್ಥೆಗಳಲ್ಲಿ ಮೀಸಲಾತಿ ಕೂಡದೆಂದು ಆಗ್ರಹ ಪಡಿಸುತ್ತಿರುವವರ ಅವಗಾಹನೆಗೆ ಒಂದಂಶವನ್ನು ತರಬೇಕು : ಅಮೆರಿಕಾ ಮುಂತಾದ ದೇಶಗಳಿಗೆ ಹೋಗಿ ನೆಲೆಸಲು ಅಗಾಧವಾದ ಅರ್ಹತೆ ಇಲ್ಲದವರಿಗೆ ಮಾತ್ರ ಆ ಸಂಸ್ಥೆಗಳಲ್ಲಿ ಪ್ರವೇಶ ನೀಡಬೇಕು; ಏಕೆಂದರೆ, ಆಗ ನಮ್ಮ ದೇಶದ ಸಾರ್ವಜನಿಕರ ಹಣದ ಫಲ ನಮ್ಮ ದೇಶಕ್ಕೇ ದಕ್ಕುತ್ತದೆ. ಈಗ ಆ ಸಂಸ್ಥೆಗಳಲ್ಲಿ ನಮ್ಮ ಹಣದ ಬಲದಿಂದ ವ್ಯಾಸಂಗ ಮಾಡಿ ಬೇರೆಲ್ಲಿಗೋ ತೆರಳಿ 'ಸ್ವರ್ಗಸುಖ' ಕಾಣುವವರೇ ಹೆಚ್ಚು! ಅವರಿಗಾಗಿ ನಾವು ಹಣ ತೆರುವುದರ ಬದಲು ಇಲ್ಲಿಯೇ ಉಳಿಯುವಂಥವರಿಗೆ ಪ್ರವೇಶ ನೀಡುವುದಕ್ಕಾಗಿ ಮೀಸಲಾತಿ ಪದ್ಧತಿಯನ್ನು ಅಳವಡಿಸಿಕೊಳ್ಳಬಹುದು. ದೇಶದಲ್ಲಿ ಉಳಿಯುವುದನ್ನು 'ಮೆರಿಟ್' ಎಂದು ಪರಿಗಣಿಸಬೇಕು. ನಮ್ಮ 'ಮೆರಿಟ್' ಪಟುಗಳು ಇದಕ್ಕೇನೆನ್ನುತ್ತಾರೆ ?

* * *

ಹಿಂದೆ ಕಾಶಿಯಲ್ಲಿ ಚಲನಚಿತ್ರ ನಿರ್ಮಾಣವೊಂದಕ್ಕೆ ನಮ್ಮ ದೇಶದ ಸಂಪ್ರದಾಯ ಪಶುಗಳು ಅಡ್ಡಿಯುಂಟುಮಾಡಿದ್ದರು. ನಂತರ ಪ್ರವಾದಿಯ ಚಿತ್ರದ ಬಗ್ಗೆ ಈಚೆಗೆ ಗುಲ್ಲೆದ್ದಿತು. ಹುಸೇನರ ಚಿತ್ರಗಳು ಕಲಾವಿದನ ಕಲೆಯ ಸೂಚಕವಾಗಿರದೆ ಒಂದು ಧರ್ಮವನ್ನು ತೆಗಳುವ ಕೆಟ್ಟ ಉದ್ದೇಶ ಹೊಂದಿವೆಯೆಂಬ ಆಪಾದನೆ ಆಗಾಗ್ಗೆ ಕೇಳಿಬರುತ್ತಲೇ ಇರುತ್ತದೆ. ಕನ್ನಡದ ಪುಸ್ತಕಗಳೂ ಸೇರಿದಂತೆ ಅನೇಕ ಪುಸ್ತಕಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಒತ್ತಾಯಗಳು ಯಶಸ್ವಿಯಾಗುತ್ತಲೇ ಇವೆ. ಅದು ಇತಿಹಾಸದ ಪಠ್ಯಪುಸ್ತಕಗಳಿಗೆ ಸೀಮಿತವಾಗಿಲ್ಲ. ಈಗ 'ದ ವಿಂಚಿ ಕೋಡ್' ಎಂಬ ಚಲನಚಿತ್ರವನ್ನು ಪ್ರದರ್ಶಿಸಕೂಡದೆಂದು ಕೆಲವು ಕ್ರೈಸ್ತರು ಆಗ್ರಹಿಸುತ್ತಿದ್ದಾರೆ. ಇದು ನಮ್ಮ ದೇಶದ ಕೂಗಾಗಿ ಉಳಿದಿಲ್ಲ, ದಕ್ಷಿಣ ಕೊರಿಯಾ ಮತ್ತು ಫಿಲಿಫೈನ್ಸ್ ಸಹ ಈ ಪಟ್ಟಿಗೆ ಸೇರಿವೆ. ಆ ಹೆಸರಿನ ಪುಸ್ತಕ ಪ್ರಕಟವಾಗಿ ಎಷ್ಟೋ ವರ್ಷಗಳಾಗಿವೆ ಮತ್ತು ಕೋಟಿಗಟ್ಟಲೆ ಜನ ಅದನ್ನು ಓದಿದ್ದಾರೆ. ಅವರೆಲ್ಲಾ ಪುಸ್ತಕವನ್ನು ನೈಜ ಇತಿಹಾಸವೆಂದೇನೂ ಸ್ವೀಕರಿಸಿಲ್ಲ. ಈಗ ಅಷ್ಟೇನೂ ಪ್ರಭಾವಯುತವಲ್ಲದ ಚಲನಚಿತ್ರ ಬಂದಿರುವುದಕ್ಕೆ ತಾವೇ ಕ್ರೈಸ್ತ ಪ್ರತಿನಿಧಿಗಳೆಂದು ಘೋಷಿಸಿಕೊಂಡ ಜೀಸಸ್ - ಮರಿಗಳು ಅಬ್ಬರ ಆರಂಭಿಸಿದ್ದಾರೆ. ಚಿತ್ರ ತೆಗೆದಿರುವವರು ಕ್ರೈಸ್ತ ಮತದವರಲ್ಲ ವೆಂಬಂತೆ ಮಾತನಾಡುವುದು ಮತ್ತು ಯೂರೋಪು, ಅಮೆರಿಕಾಗಳಲ್ಲಿ ಚಿತ್ರವನ್ನು ಕಾಲ್ಪನಿಕವೆಂದು ನೋಡಿರುವುದನ್ನು ಗಮನಿಸದಿರುವುದು ಆಕ್ಷೇಪಾರ್ಹವಾಗಿದೆ. ಇಸ್ಲಾಂ ಧರ್ಮೀಯರು ಮತ್ತು ಹಿಂದುತ್ವವಾದಿಗಳು ಬೀದಿಗೆ ಬಂದು ಕೂಗಾಡುವಾಗ ತಾವೇಕೆ ಹಿಂದುಳಿಯಬೇಕೆಂದು ಕೆಲವು ಕ್ರೈಸ್ತರಿಗೂ ಅನಿಸಿರುವುದು ಒಂದು ಸಾಂಕ್ರಾಮಿಕ ರೋಗದ ಲಕ್ಷಣ. ಒಟ್ಟಿನಲ್ಲಿ, ನಮ್ಮ ಬೌದ್ಧಿಕ ಮತ್ತು ಧಾರ್ಮಿಕ ರಂಗಗಳು ಇಂಥವೇ ವಿಷಯಗಳನ್ನು ದೊಡ್ಡದು ಮಾಡಿಕೊಂಡು ಕಾಲಹರಣ ಮಾಡುವುದಾಗಿದೆ.

* * *

ನೇಪಾಳದ ಜನ ಅವರ ದೊರೆಯ ಕಿರುಕುಳಗಳಿಂದ ಪಾರಾಗಲು ಸಶಕ್ತ ಹೋರಾಟ ನಡೆಸಿ ಸ್ವತಂತ್ರರಾಗಲು ಸಮರ್ಥರಾದರು ಮತ್ತು ನೈಜ ಪ್ರಜಾಪ್ರಭುತ್ವದತ್ತ ಹೆಜ್ಜೆ ಹಾಕಲು ಹಾದಿ ಸುಗಮಗೊಳಿಸಿಕೊಂಡರು. ಹೋರಾಟಗಳ ಕಾಲ ಎಂದೋ ಮುಗಿದುಹೋಯಿತೆಂದು ಸಾರುವ ನಮ್ಮ ಆಧುನಿಕ ಪಾಶ್ಚಾತ್ಯ ಇತಿಹಾಸಕಾರರು ಈಗ ಕಣ್ಣುಬಿಡಬೇಕಾಗಿದೆ; ಅಂತೆಯೇ ನಮ್ಮ ದೇಶದ ಅವರ ಅನುಯಾಯಿಗಳು ಸಹ. ಮಾವೋವಾದಿಗಳನ್ನು ದೂರದಿಂದಲೂ ನೋಡುವುದಿಲ್ಲವೆನ್ನುತ್ತಿದ್ದ ರಾಜಕಾರಣಿಗಳು ಈಗ ಅವರೊಟ್ಟಿಗೆ ಕೆಲಸ ಕೆಲಸಮಾಡಲು ಮುಂದಾಗುತ್ತಿದ್ದಾರೆ. ಜನರು ವಿಜಯಿಗಳಾಗಲು ಯಾವ ಕ್ರಮ ಅಗತ್ಯವೆಂಬುದನ್ನು ನೇಪಾಳದ ಜನ ತೋರಿಸಿಕೊಟ್ಟಿದ್ದಾರೆ.

ಅವರೇನೋ ದೊರೆಯನ್ನು ದೂರಮಾಡಿದರು, ಆದರೆ ಶಿಕ್ಷಣ ಕ್ಷೇತ್ರದ ಖಾಸಗಿ ದೊರೆಗಳನ್ನು ಒದ್ದೋಡಿಸುವುದಿರಲಿ, ನಿಯಂತ್ರಣದಲ್ಲಿಡಲು ಸಹ ನಮ್ಮ ರಾಜ್ಯದ ಸರ್ಕಾರ ಹಾಗೂ ಜನ ಸೋತಿರುವುದು ಈ ವರ್ಷ ಮತ್ತೆ ದಾಖಲಾಗಿದೆ. ಒಂದು ಸಾಮಾನ್ಯ ಸಿ.ಇ.ಟಿ. ಬಿಕ್ಕಟ್ಟನ್ನು ಪರಿಹರಿಸಲಾಗದ ಸರ್ಕಾರ ನಮ್ಮದು; ಅದಕ್ಕೆ ನೇಪಾಳೀ ಜನರ ಸಾಮರ್ಥ್ಯ ಎಲ್ಲಿಂದ ಬಂದೀತು ! ಯಡಿಯೂರಪ್ಪ- ಶಂಕರಮೂರ್ತಿ ಬಳಗವು ಕಳೆದ ವರ್ಷ ಸರ್ಕಾರವನ್ನು ಮೂದಲಿಸಿ, ತಾವಾಗಿದ್ದರೆ ಖಾಸಗಿ ದೊರೆಗಳಿಗೆ ಬುದ್ಧಿ ಕಲಿಸಿ, ವಿದ್ಯಾರ್ಥಿಗಳನ್ನು ರಕ್ಷಿಸುವುದರಲ್ಲಿ ಯಶಸ್ಸು ಗಳಿಸುತ್ತಿದ್ದುದಾಗಿ ಹೇಳಿದ್ದನ್ನು ಮರೆತಿರಬಹುದು. ಆದರೆ ಜನರು ಮರೆತಿಲ್ಲ. ಈಗ ತಾವೇ ಅಧಿಕಾರದಲ್ಲಿದ್ದುಕೊಂಡು ಕ್ಯಾಪಿಟೇಷನ್ ದೊರೆಗಳನ್ನು ಮಣಿಸಲು ಯಾವ ಪ್ರಯತ್ನವನ್ನೂ ಮಾಡುತ್ತಲೇ ಇಲ್ಲವೆಂಬುದು ಯಡಿಯೂರಪ್ಪನವರಿಗೆ ತಿಳಿದಿರಬೇಕು. ಗಂಟಿನ ಪ್ರಭಾವ ಎಷ್ಟು ಗಹನವೆಂಬುದನ್ನು ಈಗ ಅವರು ಮನವರಿಕೆ ಮಾಡಿಕೊಳ್ಳುತ್ತಿದ್ದಾರೋ ಅಥವಾ ಗಂಟಿನಲ್ಲಿ ಒಂದು ಭಾಗವನ್ನು ಪಡೆಯಲು ತುದಿಗಾಲಲ್ಲಿ ನಿಂತಿದ್ದಾರೋ ಎಂಬುದನ್ನು ತಿಳಿಯಲು ಸಾರ್ವಜನಿಕರಿಗೆ ಕುತೂಹಲವಿರುತ್ತದೆ. ವೈದ್ಯಕೀಯ ಮತ್ತು ತಾಂತ್ರಿಕ ಶಿಕ್ಷಣ ನೀಡುವುದಾಗಿ ಹೇಳಿಕೊಳ್ಳುವ ಕಾಲೇಜುಗಳಿಗೆ ಮಾನ್ಯತೆ ಕೊಡುವ ಮುನ್ನವೇ ಸರ್ಕಾರವು ಸಿ.ಇ.ಟಿ. ವಿದ್ಯಾರ್ಥಿಗಳ ಪ್ರವೇಶದ ಬಗ್ಗೆ ಷರತ್ತು ವಿಧಿಸಬೇಕು. ಖಾಸಗಿ ವೈದ್ಯಕೀಯ ಕಾಲೇಜುಗಳು ಸರ್ಕಾರಿ ಆಸ್ಪತ್ರೆಗಳನ್ನು ಉಪಯೋಗಿಸಿಕೊಂಡಿರುವುದರ ಬಾಬ್ತು ಅವು ಕೊಡದೆ ಬಾಕಿ ಉಳಿಸಿಕೊಂಡಿರುವ ಹಣವನ್ನು ಕೂಡಲೇ ಕೊಡುವಂತೆ ಆಜ್ಞೆ ಹೊರಡಿಸಬೇಕು. ಆಗ ಈ ಖಾಸಗಿ ಶಿಕ್ಷಣ ದೊರೆಗಳು ನೇಪಾಳದ ಕ್ರೂರ ದೊರೆಯಂತೆ ಮಣ್ಣುಪಾಲಾಗಿ ಸಾರ್ವಜನಿಕರ, ವಿದ್ಯಾರ್ಥಿಗಳ ಹಿತದ ರಕ್ಷಣೆಯಾಗುತ್ತದೆ.

ಪ್ರತಿಯೊಂದು ಗ್ರಾಮಕ್ಕೆ ಪಡಿತರ ಅಂಗಡಿ

"ನಮ್ಮೂರಲ್ಲಿ 'ಪಂಡಿತರ ಅಂಗಡಿ' ಇದೆಯಲ್ಲ ಮಾರಾಯ್ರೇ....!!

> ಗಂಗೂಬಾಯಿಯವರ ಗಾಯನ ಬಹಳ ಪ್ರಬುದ್ಧ, ಸಮೃದ್ಧ ಹಾಗೂ ಸಂಪ್ರದಾಯ ಬದ್ಧ. ತಮ್ಮ ಗುರುಗಳಾದ ಸವಾಯಿ ಗಂಧರ್ವರ ಶೈಲಿ ಹಾಗೂ ಚೌಕಟ್ಟಿನಿಂದ ಸ್ವಲ್ಪವೂ ಆಚೀಚೆ ಸರಿದವರಲ್ಲ. ಬೇರೆಯ ಹಾಗೂ ಸಮಕಾಲೀನ ಶೈಲಿ ಹಾಗೂ ಘರಾನೆಗಳಿಂದ ಪ್ರಭಾವಿತರಾಗಲಿಲ್ಲ. ತಮ್ಮ ಪರಂಪರೆ ಹಾಗೂ ಸ್ವಂತಿಕೆಯ ಛಾಪು ಮೊದಲಿಂದಲೂ ಉಳಿದು – ಬೆಳೆದುಕೊಂಡು ಬಂದಿದೆ. ಅವರ ಕಾರ್ಯಕ್ರಮಗಳಲ್ಲಿ 'ಶುದ್ಧ ಶಾಸ್ತ್ರೀಯ'ವಲ್ಲದೆ ಬೇರೆ ಏನನ್ನೂ ಹಾಕುವುದಿಲ್ಲ. ಇದರ ಅರ್ಥ ಅವರಿಗೆ ಬೇರೆ ಪ್ರಕಾರಗಳ ಬಗ್ಗೆ ಗೌರವ ಇಲ್ಲವೆಂದಲ್ಲ.

# ಸಂಪ್ರದಾಯಬದ್ಧ ಗಾಯನ ಗಂಗೆ



ವಿವಿಧತೆಯಲ್ಲಿ ಏಕತೆ ಭಾರತೀಯ ಸಂಸ್ಕೃತಿಯ ಜೀವಾಳ. ಅಂತೆಯೇ ಸಂಗೀತ ವಿಶ್ವದಲ್ಲಿ. ವಿಶ್ವಾದ್ಯಂತ ಸಂಗೀತದಲ್ಲಿ ಏಳೇ ಸ್ವರಗಳಿದ್ದರೂ ನಮ್ಮಲ್ಲಿ ಕರ್ನಾಟಕ-ಹಿಂದೂಸ್ತಾನೀ ಪರಂಪರೆ ಬೆಳೆದುಬಂದಿರುವುದು, ಭಾರತೀಯರ ಸಾಂಸ್ಕೃತಿಕ ಸಮೃದ್ಧಿಯ ಸಂಕೇತ.

ವಿಶ್ವದಿಂದ ದೇಶಕ್ಕೂ, ದೇಶದಿಂದ ರಾಜ್ಯಕ್ಕೂ ಬಂದಾಗ, ಈ ಎರಡೂ ಶೈಲಿಗಳು ಹೆಮ್ಮರವಾಗಿ ಬೆಳೆದುನಿಂತಿರುವ ಏಕೈಕ ರಾಜ್ಯ ಕರ್ನಾಟಕ. ಸವಾಯಿ ಗಂಧರ್ವ, ಪಂಚಾಕ್ಷರ ಗವಯಿಗಳು, ಮಲ್ಲಿಕಾರ್ಜುನ ಮನ್ಸೂರ್, ಗಂಗೂಬಾಯಿ ಹಾನಗಲ್, ಭೀಮಸೇನ ಜೋಷಿ, ಪುಟ್ಟರಾಜ ಗವಯಿಗಳು, ಕುಮಾರ ಗಂಧರ್ವ, ಹೀಗೇ ಕಲಾವಿದರ ಪಟ್ಟಿ ಬೆಳೆಯುತ್ತದೆ.

ಮೈಸೂರು ಮಹಾರಾಜರ ಆಹ್ವಾನದ ಮೇರೆಗೆ ಆಗಮಿಸುತ್ತಿದ್ದ ಉಸ್ತಾದ್ ಅಬ್ದುಲ್ ಕರೀಂ ಖಾನ್ - ಕಿರಾನ ಸಂಪ್ರದಾಯದ ವಿಭೂತಿ ಪುರುಷ, ಸವಾಯಿ ಗಂಧರ್ವರಿಗೆ ತಾಲೀಮು ನೀಡಿದರು. ಈ ಸವಾಯಿ ಗಂಧರ್ವರ ಶಿಷ್ಯ ಪರಂಪರೆಯಲ್ಲಿ ಗಂಗೂಬಾಯಿ ಹಾನಗಲ್ - ಭೀಮಸೇನ ಜೋಷಿ ಪ್ರಮುಖರು.

ಹುಬ್ಬಳ್ಳಿಯಿಂದ ಕುಂದಗೋಳಕ್ಕೆ, ೭೦ ವರ್ಷಗಳ ಹಿಂದೆ ರೈಲಿನಲ್ಲಿ ಪಯಣಿಸಿ ಸಂಗೀತ ಕಲಿತದ್ದು, ಗಂಗೂಬಾಯಿಯವರ ಆಸೆ, ದೃಢ ನಿರ್ಧಾರದ ಸಂಕೇತವಾಗಿದೆ. ಅವರ ತಾಯಿ ಸ್ವತಃ ಕರ್ನಾಟಕ ಸಂಗೀತ ಕಲಿತಿದ್ದರೂ, ಎರಡೂ ಶೈಲಿಯ ಪ್ರಭಾವ, ಕಲಸುಮೇಲೋಗರವಾಗಬಾರದೆಂದು, ತಾಯಿ ಹಾಡು ನಿಲ್ಲಿಸಿದಳು, ಮಗಳ ಸಲುವಾಗಿ... ಎಂತಹ ತ್ಯಾಗ... !

ನಮ್ಮ ಹಳೆಯ ತಲೆಮಾರಿನ ದಿಗ್ಗಜರೆಲ್ಲ ಸಂಗೀತ ಕಲಿತದ್ದು, ಹಾಡಿದ್ದು, ಕಲಿಸಿದ್ದು, ಸಂಪೂರ್ಣವಾಗಿ ಕಲೆಯ ಮೇಲಿನ ಪ್ರೀತಿಗಷ್ಟೇ. ಅಂದು ಟಿ.ವಿ. ಇರಲಿಲ್ಲ, ಪ್ರಾಯೋಜಕರಿರಲಿಲ್ಲ (ಶಾಸ್ತ್ರೀಯ ಸಂಗೀತಕ್ಕೆ ಇಂದೂ ಇಲ್ಲ!). ಆದಾಗ್ಯೂ, ಒಬ್ಬ ಹೆಂಗಸು ದೇಶ, ಹೊರದೇಶದಲ್ಲಿ ಸುತ್ತಾಡಿ ಇತಿಹಾಸ ನಿರ್ಮಿಸಿದ್ದು ನಮಗೆಲ್ಲ ಹೆಮ್ಮೆಯ ವಿಷಯ.

೧೯೮೫ರಿಂದ ಗಂಗೂಬಾಯಿಯವರನ್ನು ನಾನು ಸಮೀಪದಿಂದ ಬಲ್ಲೆ. ಅವರ ಸರಳತನ, ವ್ಯಕ್ತಿತ್ವ, ಸೌಜನ್ಯ, ಕಳಕಳಿ ಎಂತಹವರಿಗೂ ಅನುಕರಣೀಯ. ಸವಾಯಿ ಗಂಧರ್ವರ ಹೆಸರಲ್ಲಿ ನಡೆಯುವ ಸಂಗೀತ ಸ್ಪರ್ಧೆಯಲ್ಲಿ ನಾನೊಮ್ಮೆ ಭಾಗವಹಿಸಿದ್ದೆ. ಅಲ್ಲಿ ಗಂಗೂಬಾಯಿಯವರು ತೀರ್ಪುಗಾರರು. 'ಮಿಯಾ ಮಲ್ಹಾರ್' ರಾಗದ 'ಕರೀಮ ನಾಮ ತೇರೋ' ಚೀಸ್ ಹಾಡಿದೆ. ೨೦ ನಿಮಿಷದ ಗಾಯನದಲ್ಲಿ, ಬಂದಿಷ್‌ನ ಬೇರೆ ಶಬ್ದಗಳನ್ನೂ ಔಚಿತ್ಯಪೂರ್ಣವಾಗಿ ಬೆಳೆಸಿದೆ. ಸತತವಾಗಿ ಕರೀಮ ನಾಮವನ್ನೂ ಬಳಸಿ ಹಾಡಿದ್ದೆ. ಹಾಡಿದ್ದಕ್ಕೆ ಮೊದಲನೇ ಬಹುಮಾನ ಕೊಟ್ಟರೂ, ಗಂಗೂಬಾಯಿಯವರು ನನ್ನನ್ನು ಕರೆದು ''ತಮ್ಮಾ, ಚೀಜ್‌ನ್ಯಾಗ ಬ್ಯಾರೇ ಶಬ್ದ ಇರ್ತಾವಲ್ಲ, ಅದನ್ನೂ ಉಳಸಬೇಕಪಾ, ಗಾನಾ ಛಲೋ ಆಗ್ತದ'' ಎಂದು ಕಿವಿಮಾತು ಹೇಳಿದ್ದರು.

ಗಂಗೂಬಾಯಿಯವರ ಹಾಡು, ಮಗಳು ಕೃಷ್ಣ ಅವರ ಸಹಗಾಯನ, ಪಂ. ಶೇಷಗಿರಿ ಹಾನಗಲ್ ಅವರ ತಬಲ ಇದೊಂದು ಅವಿಭಕ್ತ, ಅವಿಭಾಜ್ಯ ಅಂಗ. ೧೯೭೬ರಲ್ಲಿ ಬೆಂಗಳೂರಿನ ಒಂದು ಕಾರ್ಯಕ್ರಮಕ್ಕೆ ಬಂದಾಗ, ಶೇಷಗಿರಿ ಹಾನಗಲ್ ಅವರು ಬಂದಿರಲಿಲ್ಲ. 'ಅಕ್ಕಾ' ಅವರು ಗ್ರೀನ್ ರೂಮಲ್ಲಿ ಇದ್ದರು. ನಾನು ಹೋಗಿ ನಮಸ್ಕಾರ ಮಾಡಿ ಉಭಯ ಕುಶಲೋಪರಿ ವಿಚಾರಿಸಿದೆ. ''ನಾಗರಾಜ ಬಂದೆಯಲ್ಲಪಾ, ಛೊಲೋ ಆತು, ಸ್ವಲ್ಪ ತಂಬೂರಿ ಕೂಡಿಸಿಕೊಡು'' ಅಂತ ಕೇಳಿದ್ರು. ಆ ಘಟನೆಯನ್ನು ನನಗೆ ಸಂದ ದೊಡ್ಡ ಸನ್ಮಾನ ಅಂತ ಅಂದ್ಕೊಂಡಿದೀನಿ.

ಗಂಗೂಬಾಯಿಯವರ ಗಾಯನ ಬಹಳ ಪ್ರಬುದ್ಧ, ಸಮೃದ್ಧ ಹಾಗೂ ಸಂಪ್ರದಾಯ ಬದ್ಧ. ತಮ್ಮ ಗುರುಗಳಾದ ಸವಾಯಿ ಗಂಧರ್ವರ ಶೈಲಿ ಹಾಗೂ ಚೌಕಟ್ಟಿನಿಂದ ಸ್ವಲ್ಪವೂ ಆಚೀಚೆ ಸರಿದವರಲ್ಲ. ಬೇರೆಯ ಹಾಗೂ ಸಮಕಾಲೀನ ಶೈಲಿ ಹಾಗೂ ಘರಾನೆಗಳಿಂದ ಪ್ರಭಾವಿತರಾಗಲಿಲ್ಲ. ತಮ್ಮ ಪರಂಪರೆ ಹಾಗೂ ಸ್ವಂತಿಕೆಯ ಛಾಪು ಮೊದಲಿಂದಲೂ ಉಳಿದು - ಬೆಳೆದುಕೊಂಡು ಬಂದಿದೆ. ಅವರ ಕಾರ್ಯಕ್ರಮಗಳಲ್ಲಿ 'ಶುದ್ಧ ಶಾಸ್ತ್ರೀಯ'ವಲ್ಲದೆ ಬೇರೆ ಏನನ್ನೂ ಹಾಕುವುದಿಲ್ಲ. ಇದರ ಅರ್ಥ ಅವರಿಗೆ ಬೇರೆ ಪ್ರಕಾರಗಳ ಬಗ್ಗೆ ಗೌರವ ಇರಲಿಲ್ಲವೆಂದಲ್ಲ. ಒಬ್ಬ ಸಂಗೀತ ವಿಮರ್ಶಕರು ''ನೀವ್ಯಾಕೆ ದಾಸರ ಪದ, ವಚನ, ಭಕ್ತಿಗೀತೆ ಹಾಡುವುದಿಲ್ಲ?'' ಎಂದು ಕೇಳಿದಾಗ... ''ನಾನು ಹಾಡೋದೆಲ್ಲ ಭಕ್ತಿ, ಶ್ರದ್ಧೆಯಿಂದ ಶುದ್ಧವಾಗೇ ಹಾಡ್ತೀನಲ್ಲ...'' ಎಂದು ಉತ್ತರಿಸಿದ್ದರು.

ಹಲವಾರು ಪ್ರಶಸ್ತಿ, ಪುರಸ್ಕಾರಗಳ ಮಹಾಪೂರವೇ ಅವರೆಡೆ ಹರಿದುಬಂದಿದ್ದರೂ, ಅವರ ವ್ಯಕ್ತಿತ್ವದಲ್ಲಿ ಯಾವುದೇ ಬದಲಾವಣೆ ಬರಲಿಲ್ಲ. ಅವರ ಸರಳತನಕ್ಕೆ ಒಂದು ನಿದರ್ಶನ ಇಲ್ಲಿದೆ. ನನ್ನ ಮಾವನವರಾದ ಕೆ. ರಾಘವೇಂದ್ರರಾವ್, ವೃತ್ತಿಯಿಂದ ಇಂಜಿನಿಯರ್, ಅತ್ಯಂತ ಸಂಗೀತ ಪ್ರೇಮಿ ಕಲ್ಕತ್ತಾದಲ್ಲಿ ವಾಸವಾಗಿದ್ದರು. ಅಲ್ಲಿಗೆ ಬಂದು ಹೋಗುವ ಎಲ್ಲ ಕಲಾವಿದರು, ಅದರಲ್ಲೂ ಕರ್ನಾಟಕ ಮೂಲದ ಕಲಾವಿದರಿಗೆ ಅವರ ಮನೆ ತಂಗುದಾಣವಾಗಿತ್ತು. ಪಂ|| ಭೀಮಸೇನ ಜೋಷಿ, ಪಂ|| ಪಂಚಾಕ್ಷರಿ ಸ್ವಾಮಿ ಮತ್ತು ಗಟ್ಟಿ (ನನ್ನ ಗುರುಗಳು ಹಾಗೂ ಮಲ್ಲಿಕಾರ್ಜುನ ಮನ್ಸೂರರ ಶಿಷ್ಯಂದಿರು), ಕರ್ನಾಟಕದ ಏಕೈಕ ರುದ್ರ ವೀಣಾವಾದಕ ಡಾ|| ಬಿಂದು ಮಾಧವ ಪಾಠಕ್, ಹೀಗೆ ಹತ್ತು

ಡಾ|| ನಾಗರಾಜರಾವ್ ಹವಾಲ್ದಾರ್

ಹಲವಾರು ಕಲಾವಿದರೆಲ್ಲ ಅವರ ಮನೆಗೆ ಬಂದು, ಆತಿಥ್ಯ ಸ್ವೀಕರಿಸಿದ್ದಕ್ಕೆ ನಾನೇ ಜೀವಂತ ಸಾಕ್ಷಿ.

ಒಂದು ದಿನ ಮುಂಜಾನೆ ೬ ಗಂಟೆಗೆ ರಾಘವೇಂದ್ರ ರಾಯರ ಮನೆಯ 'ಕಾಲಿಂಗ್ ಬೆಲ್' ಮೊಳಗಿತು. ಬಾಗಿಲು ತೆಗೆದು ನೋಡಿದರೆ ಗಂಗೂಬಾಯಿ, ಕೃಷ್ಣ ಹಾಗೂ ಶೇಷಗಿರಿ ಹಾನಗಲ್ ನಿಂತಿದ್ದಾರೆ. ನಮಗೆಲ್ಲ ಆಶ್ಚರ್ಯ, ಸಂತೋಷ. ಒಳಗೆ ಬಂದು ಕೂತ್ಕೊಂಡರು, ಉಭಯ ಕುಶಲೋಪರಿ, ಚಹಾ ಎಲ್ಲಾ ಆಯಿತು. ನನ್ನ ಅತ್ತೆ, ಪ್ರೇಮಾರಾವ್ ಅವರಿಗೆ ಗಡಿಬಿಡಿ, ಆತಂಕ. ಸಂಭ್ರಮ ದಿಂದ 'ತಿಂಡಿ ಮಾಡ್ತೀನಿ' ಎಂದು ಅಡಿಗೆ ಮನೆ ಕಡೆ ಹೊರಟರು. ಆಗ ಗಂಗೂಬಾಯಿಯವರು ''ಪ್ರೇಮ ಅವರೆ, ಬರ್ರಿ ಇಲ್ಲಿ, ನಾನೇ ಕೈಯ್ಯಾರ ಮಾಡಿದ ಉಂಡಿ, ಅವಲಕ್ಕಿ ಎಲ್ಲಾ ತಂದೇನಿ. ಇದನ್ನ ತಿನ್ನೋಣ ಬರ್ರಿ'' ಎಂದು ಗಂಟು ಬಿಚ್ಚಿದರು.



**ಪಂ ॥ ಮಾಧವ ಗುಡಿಯವರ ಗುರುಪೂಜೆ 'ಗಂಡಾ ಸಮಾರಂಭದ ಅಪರೂಪದ ಚಿತ್ರ' : ಭಾಷಣ ಮಾಡುತ್ತಿರುವ ವರಕವಿ ಡಾ॥ ದ. ರಾ. ಬೇಂದ್ರೆ, ಪಂ॥ ಭೀಮಸೇನ ಜೋಶಿ, ವಿದುಷಿ ಗಂಗೂಬಾಯಿ ಹಾನಗಲ್, ಮುಂತಾದವರಿದ್ದಾರೆ. ಯುವಪೀಳಿಗೆಗೆ ಪ್ರೋತ್ಸಾಹ ಮತ್ತು ಘರಾನೆಯ ಐಕ್ಯತೆಯ ಸಂಕೇತ ಈ ಚಿತ್ರ.**

ತಮ್ಮ ಕಾಲದ ಸಮಕಾಲೀನ ಕಲಾವಿದರ ಬಗ್ಗೆ, ವಯಸ್ಸು - ಘರಾನೆಗಳ ಬಂಧನವಿಲ್ಲದೆ ಗಂಗೂಬಾಯಿಯವರದು ತುಂಬು ಹೃದಯದ ಪ್ರಶಂಸೆ - ಪ್ರೋತ್ಸಾಹ. ಅವರ ಗುರುಬಂಧುಗಳಾದ ಭೀಮಸೇನ ಜೋಷಿಯವರು, ಗಂಗೂಬಾಯಿಯವರನ್ನು ಅಕ್ಕರೆಯಿಂದ ''ಅಕ್ಕಾ'' ಎಂದೇ ಕರೆಯುವುದು. ೧೯೮೬ರಲ್ಲಿ ಹುಬ್ಬಳ್ಳಿಯ ಸವಾಯಿ ಗಂಧರ್ವ ಹಾಲ್‌ನಲ್ಲಿ ಗಂಗೂಬಾಯಿಯವರ ೭೫ನೇ ಹುಟ್ಟುಹಬ್ಬದ ಸಂಗೀತ ಕಾರ್ಯಕ್ರಮಗಳು ೩ ದಿನ ನಡೆದವು. ಪಂ॥ ಜೋಷಿಯವರು, ಪಂ॥ ಜಸರಾಜ್, ಕೃಷ್ಣ ಹಾನಗಲ್, ವಯೋಲಿನ್ ವಾದಕಿ ಸಂಗೀತಾ ಶಂಕರ್, ಕಲ್ಕತ್ತಾದ ಮಷಕೂರ್ ಅಲಿ ಖಾನ್ ಹೀಗೆ ಹಲವಾರು ಹೆಸರಾಂತ ಕಲಾವಿದರು ಭಾಗವಹಿಸಿದ್ದರು. ಮಷಕೂರ್ ಅಲಿ ಅವರ ಹಾಡು ನಡೆದಿತ್ತು. ಪಂ॥ ಜೋಷಿಯವರು ಪುಣೆಯಿಂದ ಕಾರಿನಿಂದ ಬಂದವರು, ನೇರವಾಗಿ ಸಭಾಂಗಣಕ್ಕೆ ಬಂದರು. ಗಂಗೂಬಾಯಿಯವರು ಮುಂದಿನ ಸಾಲಿನಲ್ಲಿ ಏಕಾಗ್ರಚಿತ್ತರಾಗಿ ಹಾಡು ಕೇಳುತ್ತ ತನ್ಮಯರಾಗಿದ್ದರು. ನಾನು ಅವರ ಹಿಂದಿನ ಸಾಲಿನಲ್ಲೆ ಕುಳಿತಿದ್ದೆ, ಪಂ॥ ಜೋಷಿಯವರು ಅಕ್ಕನವರಿಗೆ ನಮಸ್ಕಾರ ಮಾಡಿದರು. ಆದರೆ ಗಂಗೂಬಾಯಿಯವರು ಅವರನ್ನು ಗಮನಿಸಿರಲಿಲ್ಲ. ಒಂದು ನಿಮಿಷದ ನಂತರ ಜೋಷಿಯವರು ''ಅಕ್ಕಾ ನೋಡು, ನಾನು ಭೀಮಸೇನ ಬಂದೀನಿ'' ಎಂದರು. ಆಗ ಗಂಗೂಬಾಯಿಯವರು ''ಓ ಭೀಮಣ್ಣ, ಯಾವಾಗ ಬಂದ್ಯಪಾ... ಏಳು'' ಎಂದು ಆಶೀರ್ವದಿಸಿದರು. ಎರಡು ಮಹಾನ್ ಕಲಾವಿದರ, ಗುರು ಬಂಧುಗಳ ಪರಸ್ಪರ ಆತ್ಮೀಯತೆಗೆ ಇದಕ್ಕಿಂತ ನಿದರ್ಶನ ಬೇಕೇ... ?

ನಾನು ಇತ್ತೀಚೆಗೆ ಗಂಗೂಬಾಯಿಯವರನ್ನು ಭೇಟಿ ಮಾಡಿದ್ದು ಡಿಸೆಂಬರ್ ೨೩-೨೪, ೨೦೦೫ರಲ್ಲಿ ಧಾರವಾಡದಲ್ಲಿ ರಹಿಮತ್ ಖಾನರ ಪುಣ್ಯತಿಥಿಯ ಸಂಗೀತ ಕಾರ್ಯಕ್ರಮದಲ್ಲಿ. ಅಂದು ಅವರಿಗೆ ಸ್ವಲ್ಪ ಜ್ವರವಿತ್ತು. ಆದರೂ ಸಮಾರಂಭದ ಮುಖ್ಯ ಅತಿಥಿಯಾಗಿ ಬಂದಿದ್ದರು. 'ಗ್ರೀನ್ ರೂಂ'ನಲ್ಲಿ ಅವರನ್ನು ಭೇಟಿ ಮಾಡಿ, ನಮಸ್ಕರಿಸಿ ಉಭಯ ಕುಶಲೋಪರಿ ವಿಚಾರಿಸಿದೆ. ''ವಯಸ್ಸಾತಪಾ, ಆರೋಗ್ಯ ಒಮ್ಮೆ ಹಂಗ, ಒಮ್ಮೆ ಹಿಂಗ, ನೋಡು ಜ್ವರ ಇದೆ'' ಎಂದು ಕೈ ಮುಂದೆ ಮಾಡಿದರು: ಚಿಕ್ಕ ಮಗು ಡಾಕ್ಟರ್ ಮುಂದೆ ಕೈ ನೀಡಿದಂತೆ. ಹಾಗೆಯೇ ಧಾರವಾಡ ಆಕಾಶವಾಣಿಯಿಂದ ಬಿತ್ತರಗೊಂಡ ನನ್ನ ಸಂಗೀತ ಕೇಳಿ ಸಂತೋಷಪಟ್ಟಿದ್ದನ್ನೂ ಹಂಚಿಕೊಂಡರು. ''ನೀವೆಲ್ಲಾ ನಮ್ಮ ಘರಾನೆ ಉಳಿಸ್ತೀರಿ, ಬೆಳಸ್ತೀರಿ'' ಎಂದು ಆಶೀರ್ವದಿಸಿದರು. ನನಗೆ ಕಣ್ಣಲ್ಲಿ ನೀರು ಬಂದಿತ್ತು.


**ಡಾ॥ ನಾಗರಾಜರಾವ್ ಹವಾಲ್ದಾರ್**
ಸುಕೃತಿ ನಿವಾಸ, ಐ.ಟಿ.ಐ ಲೇಔಟ್
ಬನಶಂಕರಿ ಮೂರನೇ ಹಂತ
ಬೆಂಗಳೂರು - ೫೬೦ ೦೮೫



## 'ಹೊಸತು' ಚಂದಾ ನೋಂದಣಿಗೆ ಮತ್ತು ಸದಭಿರುಚಿಯ ಪುಸ್ತಕಗಳಿಗೆ ಕೆಳಕಂಡ ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜಿಲ್ಲಾ ನ್ಯಾಯಾಲಯದ ಎದುರು, ಕೋರ್ಟ್ ರಸ್ತೆ, ಉಡುಪಿ - ೫೭೬ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಸರ್ಕಾರಿ ಉರ್ದು ಶಾಲೆಯ ಆವರಣ, ಮುಖ್ಯರಸ್ತೆ, ಚಿತ್ರದುರ್ಗ - ೫೭೭ ೫೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ನಗರ ಕೇಂದ್ರ ಗ್ರಂಥಾಲಯದ ಆವರಣ, ಜಗತ್ ವೃತ್ತ, ಗುಲ್ಬರ್ಗಾ - ೫೮೫ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜಿಲ್ಲಾ ಕೇಂದ್ರ ಗ್ರಂಥಾಲಯ ಆವರಣ, ಬಿ.ಎಚ್. ರಸ್ತೆ, ತುಮಕೂರು - ೫೭೨ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಿತ್ತೂರ್ರ ಕಾಂಪ್ಲೆಕ್ಸ್, ದೇನಾ ಬ್ಯಾಂಕ್ ಬಳಿ, ಜೂಬಿಲಿ ಸರ್ಕಲ್, ಧಾರವಾಡ - ೫೮೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಎನ್. ಜಿ. ಒ. ಹಾಲ್ ಎದುರು, ತಹಶೀಲ್ದಾರ್ ಕಛೇರಿ ಬಳಿ, ಮಂಗಳೂರು - ೫೭೫ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ವಿಶ್ವೇಶ್ವರಯ್ಯ ವಸ್ತು ಸಂಗ್ರಹಾಲಯ, ಮೊದಲನೇ ಮಹಡಿ, ಕಸ್ತೂರಬಾ ರಸ್ತೆ, ಬೆಂಗಳೂರು - ೫೬೦ ೦೦೧



ವಾಲ್ಟರ್ ದ ಲ ಮಾರ್ ಎಂಬ ಆಂಗ್ಲಕವಿ ಬರೆದ ಅಬೂ ಬೆನ್ ಆಡಮ್ ಎಂಬ ಪದ್ಯದಲ್ಲಿ, ಒಂದು ದೇವತೆ ಅಬೂವಿನ ಶಾಂತ ನಿದ್ರೆಯ ಮಧ್ಯೆ ತನ್ನ ಬೆಳಕಿನಿಂದ ಅವನನ್ನು ಎಬ್ಬಿಸುತ್ತದೆ. ದೇವರನ್ನು ಪ್ರೀತಿಸುವವರ ಹೆಸರುಗಳನ್ನು ಬರೆಯುತ್ತಿದ್ದೇನೆ ಎಂದು ಅದು ಹೇಳಿದಾಗ, ನನ್ನ ಹೆಸರು ಆ ಪಟ್ಟಿಯಲ್ಲಿದೆಯೇ ಎಂದು ಅಬೂ ಕೇಳಿದರು. ಇಲ್ಲವಲ್ಲಾ ಎಂದಿತು ದೇವತೆ. ಹಾಗಾದರೆ ನಾನು ಎಲ್ಲಾ ಮನುಷ್ಯರನ್ನು ಪ್ರೀತಿಸುವವನು ಎಂದಾದರೂ ಬರೆದುಕೊಳ್ಳಿ ಎಂದು ಅಬೂ ಹೇಳಿದರು. ದೇವತೆ ಮಾಯವಾಗಿ ಮರು ರಾತ್ರಿ ಮತ್ತೆ ಬಂದಿತು. ದೇವರು ಪ್ರೀತಿಸುವವರ ಪಟ್ಟಿ ಇಲ್ಲಿದೆ, ಅದರಲ್ಲಿ ನಿನ್ನದೇ ಮೊದಲನೆಯ ಹೆಸರು ಎಂದು ಅಬೂಗೆ ಹೇಳಿತು. ಅಮೂಲ್ಯ ರೆಡ್ಡಿ ಅಬು ಬೆನ್ ಆಡಮ್ ಅಂತಹ ವ್ಯಕ್ತಿ .

# ನಾ ಕಂಡ ಅಮೂಲ್ಯ

**ಕ**ಳೆದ ಮೇ ೭ರಂದು ನಮ್ಮನ್ನಗಲಿದ ಅಮೂಲ್ಯ ರೆಡ್ಡಿಯವರು ತಮ್ಮ ಹೆಸರಿಗೆ ತಕ್ಕಂತೆ ಒಬ್ಬ ವಿಶೇಷ ವ್ಯಕ್ತಿಯಾಗಿದ್ದರು.

* ವಿಜ್ಞಾನಿಗಳು ತಮ್ಮ ಸಂಶೋಧನೆಯಿಂದ ಆಗಬಹುದಾದ ಕೆಟ್ಟ ಪರಿಣಾಮಗಳ ಬಗ್ಗೆ ಚಿಂತಿಸಿ ನೈತಿಕ ಜವಾಬ್ದಾರಿ ವಹಿಸಬೇಕೆಂದು ನಂಬಿದ್ದರು.

* ಬೈಜಿಕ ಶಕ್ತಿಯ ಉಪಯೋಗ, ದುರುಪಯೋಗ ಎರಡಕ್ಕೂ ಕಡು ವಿರೋಧಿಯಾಗಿದ್ದರು. ಬೈಜಿಕ ಶಕ್ತಿಯಿಂದ ವಿದ್ಯುತ್ ತಯಾರಿಸುವುದು ಅಪಾಯಕಾರಿಯಲ್ಲದೆ, ಅಗ್ಗವೂ ಅಲ್ಲ ಎಂದು ವಾದಿಸಿದರು – ಪೋಖ್ರಾನ್ (II) ಸ್ಫೋಟನೆಯ ವಿರೋಧವಾಗಿ ಧ್ವನಿ ಎತ್ತಿದ ಕೆಲವೇ ವಿಜ್ಞಾನಿಗಳಲ್ಲಿ ಅವರೊಬ್ಬರು.

* ಸುಪ್ರಸಿದ್ಧ ಪ್ರೊಫೆಸರ್ ಬಾಕ್ರಿಸ್‌ರವರೊಂದಿಗೆ ೨೦೦೦ ಪುಟಗಳಿಗೂ ಮೀರಿದ 'ಆಧುನಿಕ ವಿದ್ಯುತ್ ರಸಾಯನ ಶಾಸ್ತ್ರ' ಎಂಬ ಎರಡು ಸಂಪುಟಗಳಿಂದ ಕೂಡಿದ ಮಹಾಗ್ರಂಥವನ್ನೂ ಬರೆದು, ೧೫ ವರ್ಷಗಳ ಕಾಲ ಕೆಲಸ ಮಾಡಿದ ವಿದ್ಯುತ್ ರಸಾಯನ ಕ್ಷೇತ್ರವನ್ನು ತ್ಯಜಿಸಿ, ಗ್ರಾಮೀಣ ಜನರ ದಾರಿದ್ರ್ಯ ಪರಿಹಾರಕ್ಕೆ ಸೂಕ್ತವಾದ ತಂತ್ರಜ್ಞಾನವನ್ನು ರೂಪಿಸುವ ಕಾರ್ಯರಂಗಕ್ಕೆ ಇಳಿದರು.

* ಪ್ರಪಂಚದ, ಅದರಲ್ಲೂ ಹಿಂದುಳಿದ ದೇಶಗಳ, ಶಕ್ತಿ ಅಗತ್ಯಗಳನ್ನು ಪೂರೈಸಲು, ಪರಿಸರವನ್ನು ಕಾಪಾಡಿಕೊಂಡು, ಶಕ್ತಿಯನ್ನು ಒದಗಿಸುವ ಬಗ್ಗೆ ಹೊಸ ವಿಶ್ಲೇಷಣಾ ಕ್ರಮವನ್ನು ಬಳಸಿದರು – ಮೂರು ಖಂಡಗಳ ನಿವಾಸಿಗಳಾದ ಮೂರು ಮಿತ್ರರೊಂದಿಗೆ (ಬ್ರೆಜಿಲ್, ಸ್ವೀಡನ್, ಅಮೆರಿಕಾ) ಈ ವಿಷಯದಲ್ಲಿ ಉತ್ತಮ ಗ್ರಂಥವನ್ನು ಬರೆದರು (Energy for a Sustainable World, 1988). ಈ ನಾಲ್ವರ ಸಾಧನೆಗಾಗಿ ೨೦೦೦ದ ಅಕ್ಟೋಬರ್‌ನಲ್ಲಿ ಅವರೆಲ್ಲರಿಗೂ ಸುಪ್ರಸಿದ್ಧ ವೋಲ್ವೋ ಪ್ರಶಸ್ತಿ ಕೊಡಲಾಯಿತು.

* ೧೯೯೧ರಲ್ಲಿ ಭಾರತ ವಿಜ್ಞಾನ ಮಂದಿರದಿಂದ ನಿವೃತ್ತಿಹೊಂದಿದ ಮೇಲೂ, ಸುಮ್ಮನೆ ಕುಳಿತುಕೊಳ್ಳದೆ, ಶಕ್ತಿ ಅಗತ್ಯಗಳ ವಿಶ್ಲೇಷಣೆಗಾಗಿ, ತನ್ನ ಮೂವರು ಮಿತ್ರರೊಂದಿಗೆ 'ಇಂಟರ್‌ನ್ಯಾಷನಲ್ ಎನರ್ಜಿ ಇನಿಷಿಯೇಟಿವ್ (IEI)' ಎಂಬ ಪ್ರತಿಷ್ಠಾನವನ್ನು ಅದರ ಮೂಲಕ, ೧೯೯೪ರಿಂದ 'ಊರ್ಜಿತವಾಗುವ ಬೆಳವಣಿಗೆಗೆ ಶಕ್ತಿ' ಎಂಬ ಪತ್ರಿಕೆಯನ್ನು ಪ್ರಕಟಿಸಿದ್ದಾರೆ.

* ಈ ಎಲ್ಲ ವಿಷಯಗಳ ಮೇಲೂ ಅವರು ಬರೆದು, ಪ್ರಕಟಿಸಿದ, ಸುಮಾರು ೩೦೦ ಲೇಖನಗಳನ್ನು ಬಿಟ್ಟುಹೋಗಿದ್ದಾರೆ.

ಅಮೂಲ್ಯ ಒಬ್ಬ ಸಂಪೂರ್ಣ 'ಸೆಕ್ಯುಲರಿಸ್ಟ್'. ನಮ್ಮ ಆಗುಹೋಗುಗಳಲ್ಲಿ ಯಾವುದೇ ಅಲೌಕಿಕ ಶಕ್ತಿಯ ಕೈವಾಡವಿಲ್ಲವೆಂಬ ತಿಳುವಳಿಕೆಯಿಂದ ಬಾಳುತ್ತಾ, ಎಲ್ಲ ಧರ್ಮದವರನ್ನು ಒಂದೇ ಸಮನಾಗಿ ಕಾಣುತ್ತಾ, ನೈತಿಕ ಕಟ್ಟುಪಾಡುಗಳಿಂದ ಕೂಡಿದ ಮಾನವೀಯತೆಯನ್ನು ಆಚರಿಸುತ್ತಿದ್ದರು.

ಅವರ ಹಿರಿಯ ಅಳಿಯ ನಮ್ಮ ದೇಶದ ಪಾರಸಿ, ಎರಡನೆಯ ಅಳಿಯ ಬಾಂಗ್ಲಾದೇಶದ ಮುಸ್ಲಿಂ, ಕೊನೆಯ ಅಳಿಯ ಅಮೆರಿಕಾದ ಯೆಹೂದಿ. ಅವರ ಪತ್ನಿ ವಿಮಲಾ ಮರಾಠಾ ಮನೆತನದಿಂದ ಬಂದವರೆಂದು ಯಾರೂ ಊಹಿಸಲಾರರು – ಏಕೆಂದರೆ, ದಂಪತಿಗಳು ತಮ್ಮ ತಮ್ಮಲ್ಲಿ ಸೊಗಸಾದ ತೆಲುಗಿನಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಅವರ ಮೂರು ಹೆಣ್ಣುಮಕ್ಕಳು ಇಷ್ಟಪಟ್ಟು ಆರಿಸಿದ್ದ ಯುವಕರನ್ನು ಅಮೂಲ್ಯ ದಂಪತಿಗಳು ಸಂತೋಷದಿಂದ ಸ್ವಾಗತಿಸಿದರು. ಅವರ ಆರು ಮೊಮ್ಮಕ್ಕಳು ಅವರ ಮನೆಯಲ್ಲಿ ಸೇರಿದಾಗ ಅವರ ಆನಂದ ಅಷ್ಟಿಷ್ಟಲ್ಲ. ಅವರ ಹಿರಿಯ ಮಗಳ ಮೊಮ್ಮಗಳನ್ನೂ ಅವರು ಕಂಡರು.

ಸೋದರಮಾವ ಸಿ.ಜಿ.ಕೆ. ಅವರನ್ನು ಕಂಡರೆ ಅಮೂಲ್ಯರವರಿಗೆ ಬಹಳ ಗೌರವ. ಅವರ ಮೂಲಕ, ರಾಮ ಮನೋಹರ್ ಲೋಹಿಯಾ ಮುಂತಾದ ಸಮಾಜವಾದಿ ನಾಯಕರ ಪರಿಚಯವಾಯಿತು. ಅಮೂಲ್ಯ ಒಬ್ಬ ಯುವ ಸಮಾಜವಾದಿಯಾದರು. ಸೆಂಟ್ರಲ್ ಕಾಲೇಜಿನ ರಸಾಯನಶಾಸ್ತ್ರದ ವಿಭಾಗದಲ್ಲಿ ಅವರು ವಿದ್ಯಾರ್ಥಿಯಾಗಿ ಸೇರಿದಾಗ, ಜೆ.ಆರ್.ಲಕ್ಷ್ಮಣರಾವ್ ಮತ್ತು ಎಂ.ಎ. ಸೇತುರಾವ್ ಇಬ್ಬರೂ ಅವರ ಉಪಾಧ್ಯಾಯರಾಗಿದ್ದರು. ಅವರಿಂದ ಮಾರ್ಕ್ಸ್‌ವಾದದ ಪರಿಚಯವೂ ಆಯಿತು.

ಅಮೂಲ್ಯ ಮತ್ತು ನಾನು ಸ್ನೇಹಿತರಾಗಿದ್ದಕ್ಕೆ ಕಾರ್ಲ್ ಮಾರ್ಕ್ಸ್ ಕಾರಣ. ನಮ್ಮಿಬ್ಬರಲ್ಲಿ ಯಾರೊಬ್ಬರಿಗಾದರೂ ಮಾರ್ಕ್ಸ್‌ವಾದದಲ್ಲಿ ಆಸಕ್ತಿ ಇಲ್ಲದಿದ್ದ ಪಕ್ಷದಲ್ಲಿ ನಾವು ಪರಿಚಿತರಾಗುವ ಸಾಧ್ಯತೆಯೇ ಇರಲಿಲ್ಲ. ನಾನು ಅಮೂಲ್ಯರಿಗಿಂತ ೭ ವರ್ಷಗಳ ಹಿರಿಯನಾಗಿದ್ದು, ಅವರು ಸೆಂಟ್ರಲ್ ಕಾಲೇಜಿಗೆ ಸೇರುವ ಹೊತ್ತಿಗೆ, ನ್ಯಾಷನಲ್ ಕಾಲೇಜಿನಲ್ಲಿ ರಸಾಯನಶಾಸ್ತ್ರದ ಅಧ್ಯಾಪಕನಾಗಿದ್ದೆ. ಮಾರ್ಕ್ಸ್‌ವಾದದ ಅಧ್ಯಯನಕ್ಕಾಗಿ ನಾವು ಪ್ರತಿ ಭಾನುವಾರವೂ ಸೇರುತ್ತಿದ್ದ ಕೂಟಕ್ಕೆ ಅಮೂಲ್ಯ ಸೇರಿದ್ದರಿಂದ ನಮ್ಮಿಬ್ಬರ ಪರಿಚಯವಾಗಿ ಮೈತ್ರಿ ಬೆಳೆಯಿತು.

ಅಮೂಲ್ಯ ಹಾಸ್ಯಪ್ರಿಯರು – ನಾನು ತಾತಾ ವಿಜ್ಞಾನ ಮಂದಿರದಲ್ಲಿ ಪಿಎಚ್.ಡಿ.ಗಾಗಿ ಸಂಶೋಧನೆ ಮಾಡುತ್ತಿದ್ದಾಗ, ಒಂದು ದಿನ ಪ್ರಯೋಗಕ್ಕಾಗಿ ಸಲಕರಣೆಗಳನ್ನು ಜೋಡಿಸುತ್ತಿದ್ದೆ – ಅದನ್ನು ಅನೇಕ ಬಾರಿ ಮಾಡಿದ್ದ ನನಗೆ ಅದು ನೀರು ಕುಡಿಯುವಷ್ಟು ಸುಲಭವಾಗಿತ್ತು. ''ಹಾಗಲ್ಲ ಅದನ್ನು ಮಾಡುವುದು'' ಎಂದು ಯಾರೋ ಬಾಗಿಲಿನಿಂದ ಹೇಳಿದ್ದು ಕೇಳಿಸಿತು. ತಿರುಗಿ ನೋಡಿದೆ, ನಗುತ್ತಾ ಅಮೂಲ್ಯ ಅಲ್ಲಿ ನಿಂತಿದ್ದರು – ಪಿಎಚ್.ಡಿ. ಪಡೆದು ಆಗತಾನೇ ಇಂಗ್ಲೆಂಡಿನಿಂದ ಹಿಂತಿರುಗಿದ್ದರು.

ಅವರ ೭೫ನೆಯ ಜನ್ಮದಿನಕ್ಕಾಗಿ ಅವರ ಮಕ್ಕಳು World Space ರೇಡಿಯೋವನ್ನು ಅವರಿಗೆ ಕೊಟ್ಟಿದ್ದರು. ಅದರ ಮೂಲಕ ಗದ್ದಲರಹಿತ ಶುದ್ಧ ಸಂಗೀತವನ್ನು ಯಾವಾಗ ಬೇಕಾದರೂ ಕೇಳಬಹುದೆಂದು ನನಗೆ ಎರಡು ಮೂರು ಸಲ ಹೇಳಿದ್ದರು. ನಾನೂ ಅದನ್ನು ಹಾಕಿಸಿಕೊಳ್ಳಬೇಕೆಂದು ಅವರ ಮನಸ್ಸಿನಲ್ಲಿದ್ದಿರಬಹುದು. ಆದರೆ ನಾನು ಜಗ್ಗಲಿಲ್ಲ. ಒಂದು ದಿನ (ಫೋನಿನಲ್ಲಿ) ಆರು ಸಾವಿರ ರೂಪಾಯಿ ಒದಗಿಸಬಲ್ಲೆಯಾ ಎಂದು ಕೇಳಿದರು. ಯಾರಿಗೋ ಸಹಾಯ ಮಾಡುವ ಅಗತ್ಯವಿದೆಯೆಂದು ತಿಳಿದು, ಯಾರಿಗೆ ಕಳುಹಿಸಿಕೊಡಬೇಕು ಹೇಳಿ ಎಂದೆ. ಆಮೇಲೆ ಹೇಳುತ್ತೇನೆ ಎಂದು ಸುಮ್ಮನಾದರು. ಮಾರನೆಯ ದಿನ World Space ರೇಡಿಯೋ ಕಾರ್ಯಕರ್ತರು ರೇಡಿಯೋದೊಂದಿಗೆ ನಮ್ಮ ಮನೆಗೆ ಬಂದು, ನಿಮ್ಮ ಮನೆಯಲ್ಲಿ ಈ ರೇಡಿಯೋವನ್ನು ಜೋಡಿಸಬೇಕೆಂದು ಹೇಳಿದ್ದಾರೆ ಎಂದರು. – ಇದು ಅಮೂಲ್ಯ ಅವರ ಕೆಲಸ ಎಂದು ಕೂಡಲೇ ಹೊಳೆಯಿತು. – ಸರಿ ಎಂದು ಅವರಿಗೆ ಕೊಡಬೇಕಾದ ಹಣವನ್ನು ಕೊಟ್ಟು ಕಳುಹಿಸಿದೆ. ಆದರ ಸಂಗೀತವನ್ನೂ ಕೇಳಿ ಆನಂದಪಟ್ಟು, ನನ್ನನ್ನು ಈ ರೀತಿ ''ಟ್ರಿಕ್'' ಮಾಡಬಹುದೇ ಎಂದು ಅಮೂಲ್ಯರಿಗೆ ಹೇಳಿದಾಗ, ಇನ್ನು ಹೇಗೆ

ಡಾ|| ಕೆ. ಶ್ರೀನಿವಾಸನ್

ತಾನೇ ನೀವು ರೇಡಿಯೋ ಹಾಕಿಸಿಕೊಳ್ಳುವಂತೆ ಮಾಡುವುದು ಎಂದು ಉತ್ತರವಿತ್ತರು.

ತಾವೇ ಒಳ್ಳೆಯ ಕ್ರಿಕೆಟ್ ಆಟಗಾರರಾಗಿದ್ದರಿಂದ, ದೂರದರ್ಶನದಲ್ಲಿ ಒಳ್ಳೆಯ ಒಂದು ದಿನದ ಕ್ರಿಕೆಟ್ ಪಂದ್ಯಗಳನ್ನು ನೋಡುತ್ತಿದ್ದರು– ಮಾರನೆಯ ದಿನ ದೋಣಿ, ದ್ರಾವಿಡ್, ಸೇವಾಗ್ ಇವರ ಆಟಗಳ ಬಗ್ಗೆ ನಮ್ಮಿಬ್ಬರ ಅಭಿಪ್ರಾಯ ವಿನಿಮಯವಾಗುತ್ತಿತ್ತು.

ಒಳ್ಳೆಯ ಸಂಗೀತದಿಂದ ಪರವಶರಾಗುತ್ತಿದ್ದರು. ಒಂದು ಸಂಜೆ ಫೋನ್ ಮಾಡಿ ನೀವು ಕೊಟ್ಟ ಲತಾ ಮಂಗೇಶಕರ್ C.D.ಯ heavenly ಸಂಗೀತವನ್ನು ಆನಂದದಿಂದ ಕೇಳುತ್ತಿದ್ದೇನೆ – ಎಂದರು. ಆ C.D.ಯಲ್ಲಿ ಸೈಗಾಲ್, ಮುಕೇಶ್ ಮುಂತಾದವರು ಹಾಡಿದ್ದ ಹಾಡುಗಳನ್ನು ಲತಾ ಹಾಡಿದ್ದರು.

ಅವರ ಕೊನೆಯ ವರ್ಷಗಳಲ್ಲಿ ಅವರ ದೇಹವನ್ನು ಬಾಧಿಸಿದ ತೊಂದರೆ ಒಂದೊಂದಲ್ಲ– ಹೃದಯದ ಬೈಪಾಸ್ ಶಸ್ತ್ರಚಿಕಿತ್ಸೆ ಆಯಿತು, ಅನಂತರ ಮೂತ್ರ ಪಿಂಡಗಳು ಕೆಲಸ ಮಾಡದೆ, ದಿನಕ್ಕೆ ೫ ಸಲ ವಿನಿಮಯದ ರೀತಿಯಲ್ಲಿ ರಕ್ತಶುದ್ಧೀಕರಣ ಮಾಡಿಕೊಳ್ಳ ಬೇಕಾಯಿತು. ಆದರೂ ಅವರು ಸ್ವಲ್ಪವಾದರೂ ಸ್ವಾನುಕಂಪವನ್ನು ತೋರಿಸಲಿಲ್ಲ. ಕಂಪ್ಯೂಟರ್ ಮುಂದೆ ಕುಳಿತು ಲೇಖನಗಳನ್ನು ಓದುವುದು, ಬರೆಯುವುದು ಕೊನೆಯವರೆಗೂ ನಿಲ್ಲಲಿಲ್ಲ.

ಅವರು ಕಂಪ್ಯೂಟರ್ – ಇಂಟರ್‌ನೆಟ್‌ಗಳ ಭಕ್ತರಾಗಿದ್ದರೆನ್ನಬಹುದು. ಒಂದು ಕಡೆ ಹೀಗೆ ಬರೆದಿದ್ದಾರೆ: ''ಬೆಂಗಳೂರಿನಲ್ಲಿ ನನ್ನ ಕಂಪ್ಯೂಟರ್ ಮುಂದೆ ಕುಳಿತು (ಟೆಲಿಫೋನ್ ಸಂಬಂಧವಿರುವ ಒಂದು ಹಳ್ಳಿಯಲ್ಲೂ ಇದು ಸಾಧ್ಯ) ಪ್ರತಿದಿನವೂ ನ್ಯೂಯಾರ್ಕ್ ಟೈಂಸ್, ಲಾಸ್ ಎಂಜಲಿಸ್ ಟೈಂಸ್ ಪತ್ರಿಕೆಗಳಲ್ಲಿ ಕ್ಯಾಲಿಫೋರ್ನಿಯಾದ ಶಕ್ತಿ ಪರಿಸ್ಥಿತಿಯ ಬಗ್ಗೆ ಬರುತ್ತಿದ್ದ ಸುದ್ದಿ– ವಿಶ್ಲೇಷಣೆಗಳನ್ನು ಓದಿ, ಕ್ರಮೇಣ ಅಮೆರಿಕಾದ ಸೌಲಭ್ಯಶಾಲಿಗಳಾದ ವಿಶ್ಲೇಷಕರಿಗಿದ್ದ ವಿಷಯ ಜ್ಞಾನವನ್ನು ನಾನೂ ಪಡೆಯಲು ಸಾಧ್ಯವಾಯಿತು.''

ಅಮೂಲ್ಯ ಸ್ಥಾಪಿಸಿದ 'ಅಸ್ತ್ರ' ಬಗ್ಗೆ (ಗ್ರಾಮಾಂತರ ಪ್ರದೇಶಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಅಳವಡಿಸುವುದಕ್ಕಾಗಿರುವ ಸಂಸ್ಥೆ) ಎರಡು ಮಾತು. ಭೌತ ವಿಜ್ಞಾನ ಮಂದಿರದ ವಿವಿಧ ವಿಭಾಗಗಳಿಂದ ಮುಂದೆ ಬಂದ ಉತ್ಸಾಹೀ ವಿಜ್ಞಾನಿ -ಇಂಜಿನೀಯರುಗಳಿಂದ ನಿರ್ಮಾಣವಾದ ಅಸ್ತ್ರಾದವರು, ಹಳ್ಳಿಗಾಡಿನ ಜನರ ಬಗ್ಗೆ ಅಧ್ಯಯನ ನಡೆಸಿ, ಅನೇಕ ಲೇಖನಗಳನ್ನು ಪ್ರಕಟಿಸಿದ್ದಲ್ಲದೆ, ತುಮಕೂರು ಜಿಲ್ಲೆ ಕುಣಿಗಲ್ ತಾಲೂಕಿನ ಪುರ ಎಂಬ ಹಳ್ಳಿಯಲ್ಲಿ ಪ್ರಯೋಗ ರೀತಿಯಲ್ಲಿ ಸೂಕ್ತ ತಂತ್ರಜ್ಞಾನದ ಸಾಧ್ಯತೆಯನ್ನು ನಿರೂಪಿಸಿದರು. ಸಗಣಿಯನ್ನು ಆಮ್ಲಜನಕರಹಿತ ವಾತಾವರಣದಲ್ಲಿ ಹುದುಗಿಸುವುದರಿಂದ ಬರುವ ಅನಿಲವನ್ನು ಉಪಯೋಗಿಸಿ, ಅದರ ಮೂಲಕ ವಿದ್ಯುಚ್ಛಕ್ತಿಯನ್ನು ತಯಾರಿಸಿ, ಆ ಹಳ್ಳಿಗೆ ನೀರನ್ನೂ ಬೆಳಕನ್ನೂ ಒದಗಿಸಿದರು. ಇದು ಹಲವಾರು ವರ್ಷಗಳು ಯಶಸ್ವಿಯಾಗಿ ನಡೆಯಿತು. ಅದೃಷ್ಟವಶಾತ್ ಆ ಹಳ್ಳಿಯ ಜನರಲ್ಲಿ ಬಹುಮಂದಿ ಸಹಕರಿಸಿದರು. ಎಲ್ಲ ಹಳ್ಳಿಗಳಲ್ಲೂ ಇಂತಹ ಅನುಕೂಲವಾದ ಪರಿಸ್ಥಿತಿ ಇರುತ್ತದೆಂದು ಹೇಳಲಾಗುವುದಿಲ್ಲ. ದಲಿತರ ಸಮಸ್ಯೆ, ಕೃಷಿ ಕೂಲಿಗಾರರ, ಬಡ ರೈತರ ಸಮಸ್ಯೆ, ಇವುಗಳಿಂದಲೂ ಜಾತಿ ಭೇದದಿಂದಲೂ ಉಂಟಾಗುವ ವೈಷಮ್ಯ ಇವುಗಳೆಲ್ಲ ಅಮೂಲ್ಯ ರೆಡ್ಡಿಯವರ ಕಲ್ಪನೆಯ ಆಚರಣೆಗೆ ಅಡ್ಡಿಬರುವುದು ಸಹಜ. ಇವೆಲ್ಲವನ್ನೂ ನಿವಾರಿಸಬೇಕಾದರೆ, ಬಲಯುತವಾದ ಜನತಾ ಸಂಘಟನೆ ಹಳ್ಳಿಗಳಲ್ಲಿ ನಿರ್ಮಾಣವಾಗುವುದೂ, ನಿಜವಾಗಿಯೂ ಬಡವರಿಗಾಗಿ ಕೆಲಸ ಮಾಡುವ ಸರ್ಕಾರ ಅಧಿಕಾರದಲ್ಲಿರುವುದೂ ಅತ್ಯಾವಶ್ಯಕ. ಅಮೂಲ್ಯ ರೆಡ್ಡಿ ಒಬ್ಬ ರಾಜಕಾರಣಿಯಲ್ಲ, ಅವರು ವಿಜ್ಞಾನಿ -ತಂತ್ರಜ್ಞಾನಿ, ಹಳ್ಳಿಯ ಸಮಸ್ಯೆಗಳಿಗೆ ಸೂಕ್ತ ಹಾದಿಯನ್ನು ತೋರಿಸಬಲ್ಲರು ಅಷ್ಟೆ. ಮುಂದೆ ಈ ಕಲ್ಪನೆಯು ಜನತಾ ಸಂಘಟನೆ ಮತ್ತು ಬಡಜನರ ಸರ್ಕಾರ ಇವುಗಳ ಮೂಲಕ ಆಚರಣೆಗೆ ಬಂದಾಗ ಅಮೂಲ್ಯ ರೆಡ್ಡಿಯ ಪ್ರಾರಂಭದ ಪ್ರಯತ್ನವು ನೆನಪಿಗೆ ಬಂದೇ ಬರುತ್ತದೆ.

ಕೊನೆಯ ಬಾರಿ ಆಸ್ಪತ್ರೆಗೆ ಹೋಗುವುದಕ್ಕೆ ಮುಂಚೆ ನನಗೆ ಫೋನ್ ಮಾಡಿದಾಗ, ಭಾನುವಾರದ ಹಿಂದೂ ಪತ್ರಿಕೆಯಲ್ಲಿ ಬಂದಿರುವ 'A requiem for a river' ಎಂಬ ಲೇಖನವನ್ನು ಓದಿದೆಯಾ ಎಂದು ಕೇಳಿದರು. ಶಿರೋನಾಮೆಯನ್ನು ನೋಡಿದೆ, ಆದರೆ ಲೇಖನ ಓದಿಲ್ಲ ಎಂದು ಹೇಳಿದೆ. ಖಂಡಿತವಾಗಿಯೂ ಓದಿ, ಸ್ಫೂರ್ತಿದಾಯಕವಾದ ಲೇಖನ ಎಂದು ಹೇಳಿದರು. ಅವೇ ನನಗೆ ಅವರು ಆಡಿದ ಕೊನೆಯ ಮಾತುಗಳು. ಆ ಲೇಖನದಲ್ಲಿ ನರ್ಮದಾ ನದಿಗೆ, ಅಣೆಕಟ್ಟುಗಳಿಂದ ಉಂಟಾಗಿರುವ ದುಃಸ್ಥಿತಿಯನ್ನು ಹೃದಯಂಗಮವಾಗಿ ವರ್ಣಿಸಿದ್ದಾರೆ. ಈಗ ನಾನು ಅಮೂಲ್ಯ ರೆಡ್ಡಿಗೆ ರೆಕ್ವಿಯಂ – ಬರೆಯಬೇಕಾಗಿದೆ.

ಅಮೂಲ್ಯ ರೆಡ್ಡಿಯವರ ಅಂತ್ಯಕ್ರಿಯೆಗೆ ಮುಂಚೆ ಅವರ ಮಗಳು ಓದಿದ ಒಂದು ಪದ್ಯದ ಸಾರಾಂಶವನ್ನು ಕೊಟ್ಟು, ಈ ಶ್ರದ್ಧಾಂಜಲಿಯ ಲೇಖನವನ್ನು ಮುಗಿಸುತ್ತೇನೆ. ವಾಲ್ಟರ್ ದ ಲ ಮಾರ್ ಎಂಬ ಆಂಗ್ಲಕವಿ ಬರೆದ ಅಬೂ ಬೆನ್ ಆಡಮ್ ಎಂಬ ಆ ಪದ್ಯದಲ್ಲಿ, ಒಂದು ದೇವತೆ ಅಬೂವಿನ ಶಾಂತ ನಿದ್ರೆಯ ಮಧ್ಯೆ ತನ್ನ ಬೆಳಕಿನಿಂದ ಅವನನ್ನು ಎಬ್ಬಿಸುತ್ತದೆ. ದೇವರನ್ನು ಪ್ರೀತಿಸುವವರ ಹೆಸರುಗಳನ್ನು ಬರೆಯುತ್ತಿದ್ದೇನೆ ಎಂದು ಅದು ಹೇಳಿದಾಗ, ನನ್ನ ಹೆಸರು ಆ ಪಟ್ಟಿಯಲ್ಲಿದೆಯೇ ಎಂದು ಅಬೂ ಕೇಳಿದರು. ಇಲ್ಲವಲ್ಲಾ ಎಂದಿತು ದೇವತೆ. ಹಾಗಾದರೆ ನಾನು ಎಲ್ಲಾ ಮನುಷ್ಯರನ್ನು ಪ್ರೀತಿಸುವವನು ಎಂದಾದರೂ ಬರೆದುಕೊಳ್ಳಿ ಎಂದು ಅಬೂ ಹೇಳಿದರು. ದೇವತೆ ಮಾಯವಾಗಿ ಮರುರಾತ್ರಿ ಮತ್ತೆ ಬಂದಿತು. ದೇವರು ಪ್ರೀತಿಸುವವರ ಪಟ್ಟಿ ಇಲ್ಲಿದೆ, ಅದರಲ್ಲಿ ನಿನ್ನದೇ ಮೊದಲನೆಯ ಹೆಸರು ಎಂದು ಅಬೂಗೆ ಹೇಳಿತು. ಅಮೂಲ್ಯ ರೆಡ್ಡಿ ಅಬು ಬೆನ್ ಆಡಮ್ ಅಂತಹ ವ್ಯಕ್ತಿ.

**ಡಾ|| ಕೆ. ಶ್ರೀನಿವಾಸನ್**
ರಸಾಯನಶಾಸ್ತ್ರದ ಪ್ರೊಫೆಸರ್ (ನಿವೃತ್ತ), ೧೧೭, ೪ನೇ ಅಡ್ಡರಸ್ತೆ
ಹನುಮಂತನಗರ, ಬೆಂಗಳೂರು - ೫೬೦ ೦೧೯

ಎಲ್. ಎಸ್. ಶ್ಯಾಮಸುಂದರ ಶರ್ಮ
ಎಲ್ಲಿಂದ ಬಂತು ಬೂಸ್ಟ್?
(ಜೀವವಿಜ್ಞಾನ)
ಸುಣ್ಣದಿಂದ ಅಮೃತಶಿಲೆ

ಪುಟಗಳು : 72 ರೂ. 60
ಪುಟಗಳು : 64 ರೂ. 55
ಪುಟಗಳು : 64 ರೂ. 55

**ಶಾಖೆಗಳು**
ಗಾಂಧಿನಗರ
ಬೆಂಗಳೂರು - ೯
✆ ೨೨೨೫೧೩೮೨

ಕೆ.ಎಸ್.ರಾವ್ ರಸ್ತೆ
ಮಂಗಳೂರು - ೧
✆ ೨೪೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೨೪
✆ ೨೪೨೪೯೧೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೨
✆ ೨೨೪೩೦೨

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧ ದೂರವಾಣಿ : ೨೨೨೦೩೫೮೦, ೩೦೫೭೮೮೦೨೨




## ಮೊಹಮ್ಮದ ಅಬ್ದಿಲ್ ವಲಿ, ಯೆಮೆನ್

**ಹೊ**ರಗೆ ಭರದಿಂದ ಗಾಳಿ ಬೀಸುತ್ತಿದೆ. ಒಳಗೆ ಬಾ ಮಗು, ಹತ್ತಿರ ಬಾ. ನಾನು ನಿನಗೊಂದು ಕಥೆ ಹೇಳುತ್ತೇನೆ. ಕಿವಿಗೊಟ್ಟು ಕೇಳು. ಈ ಕಥೆಯನ್ನು ನಾನೂ ನನ್ನ ಬಾಲ್ಯದಲ್ಲೇ ಕೇಳಿದ್ದು. ಈಗಂತೂ ಈ ಹಳ್ಳಿಯ ಹುಡುಗರೆಲ್ಲ ಈ ಕಥೆಯನ್ನು ಕೇಳಿ ಬಲ್ಲರು. ಇದು ನಮ್ಮ ವಿಜಯದ ಕಥೆ. ನಮ್ಮೂರಿನ ಪಕ್ಕದ ಬೆಟ್ಟದಲ್ಲಿ ವಾಸವಾಗಿದ್ದ ಒಂದು ಕ್ರೂರ ಪಿಶಾಚಿಯ ಕಥೆ. ಈ ಕಥೆ ಯಾವಾಗ ಆರಂಭವಾಯಿತೋ ನನಗೆ ಗೊತ್ತಿಲ್ಲ. ಆ ಪಿಶಾಚಿ ನಮ್ಮೂರಿನ ಪಕ್ಕದ ಬೆಟ್ಟದ ಮೇಲಿರುವ ಒಂದು ಭಯಂಕರ ಕಗ್ಗತ್ತಲ ಗವಿಯಲ್ಲಿ ಬಂದು ಆಸರೆ ಪಡೆದಿದ್ದನೆಂದು ಜನ ಹೇಳುತ್ತಾರೆ. ಈ ಹೊತ್ತು ಮಾತ್ರ ಆ ಗುಹೆ ಪ್ರೇಮಿಗಳ ಮಿಲನ ಸ್ಥಾನವೆನಿಸಿಬಿಟ್ಟಿದೆ. ಮಗು, ನಾನು ನನ್ನ ಕೈ ಹಿಡಿದವಳನ್ನು ಮೊದಲ ಸಲ ಪ್ರೀತಿಸಿದ್ದೂ ಅದೇ ಗುಹೆಯಲ್ಲಿ!

ಈ ಭಯಂಕರ ಗುಹೆಯಲ್ಲಿ ಆ ಭಯಂಕರ ಪಿಶಾಚಿ ವಾಸವಾಗಿದ್ದನಂತೆ! ಅವನು ಎಲ್ಲಿಂದ ಬಂದ, ಯಾಕೆ ಬಂದ, ಹೇಗೆ ಬಂದ – ಯಾರಿಗೂ ತಿಳಿಯದು. ಆತ ಯಾವಾಗ ಯಾರ ಬಲಿ ತೆಗೆದುಕೊಳ್ಳುತ್ತಿದ್ದ ಎಂಬುದೂ ಜನಕ್ಕೆ ತಿಳಿಯುತ್ತಲೇ ಇರಲಿಲ್ಲ. ಆದರೆ ಆತ ಸೇವಿಸಿ ಬಿಟ್ಟ ಅವಶೇಷಗಳು – ಅವನ ಪಾಪಕೃತ್ಯದ ಗುರುತುಗಳು – ಮಾತ್ರ ನಮ್ಮೂರಿನಿಂದ ಆ ಬೆಟ್ಟದವರೆಗೂ ದಾರಿಯಲ್ಲಿ ನೋಡಲು ಸಿಗುತ್ತಿದ್ದವು. ನಮ್ಮ ಹಳ್ಳಿಯ ಜನರ ಬಾಯಲ್ಲಿ ಅವನ ಕುರಿತಾದ ಬಗೆಬಗೆಯ ಕಟ್ಟುಕಥೆಗಳು ಹುಟ್ಟಿಕೊಂಡು ಬಾಯಿಂದ ಬಾಯಿಗೆ ಸಂಚರಿಸಿದವು. ಅವನಿಗೆ ಮರಣವೆಂಬುದೇ ಇರಲಿಲ್ಲವಂತೆ. ಅವನಿಗೆ ಕತ್ತಿ - ಕೋವಿಗಳ ಭಯವೂ ಇರಲಿಲ್ಲವಂತೆ. ನಮ್ಮ ಹಳ್ಳಿಯ ಜನರ ಮೇಲೆ ದೇವರು ಮುನಿದುಕೊಂಡ ಕಾರಣ ಅವರ ಮೇಲೆ ಸೇಡು ತೀರಿಸಿಕೊಳ್ಳಲು ಆ ಪಿಶಾಚಿ ಬಂದಿದ್ದನಂತೆ – ಇಂಥವೇ ಹಲವೊಂದು ಕಥೆಗಳು !

ಇವೆಲ್ಲಾ ಹುಚ್ಚುಚ್ಚಾರ ಕಥೆಗಳೆಂದು ಅನಿಸುತ್ತವಲ್ಲವೇ? ಆದರೆ ಅವು ಮನೆ - ಮನೆಗೂ ಹರಡಿಕೊಂಡದ್ದು ಮಾತ್ರ ನಿಜ. ಆ ಕಥೆಗಳನ್ನು ಕಟ್ಟಿದ ನಮ್ಮ ಹಳ್ಳಿಯ ಜನರನ್ನು ಕ್ಷಮಿಸಬೇಕು. ಯಾಕೆಂದರೆ ಅವರು ಮುಗ್ಧರು ; ಅಜ್ಞಾನಿಗಳು. ಒಬ್ಬೊಬ್ಬರೇ ಇದ್ದಾಗ ಹೆದರಿ ಸಾಯುವ ಈ ಜನ ಗುಂಪಿನಲ್ಲಿದ್ದಾಗ ಮಾತ್ರ ಬಲು ಧೈರ್ಯವಂತರಂತೆ ಕಾಣುತ್ತಾರೆ. ಇಂಥ ಮುಗ್ಧ ಜನರನ್ನು ಹೆದರಿಸಿಬಿಡುವ ಹಲವೊಂದು ಕಥೆಗಳು ಹುಟ್ಟಿಕೊಂಡು ಚಲಾವಣೆ ಪಡೆದವು. ಅವೆಲ್ಲ ನಿನ್ನ ಕಲ್ಪನೆಗೂ ನಿಲುಕದ ಕಥೆಗಳು !

ಅಂಥ ಕಥೆಗಳನ್ನು ಕಟ್ಟಿದವರೂ ಜನರೇ, ನಂತರ ಅವುಗಳನ್ನು ನಂಬಿದವರೂ ಜನರೇ! ಈ ಜನರು ಅಂಜುಗುಳಿಗಳೆಂದರಿತ ಆ ಪಿಶಾಚಿ ತಾನೇ ಸರ್ವಶಕ್ತ ಸಾಮ್ರಾಟನಂತೆ ಮೆರೆಯಲಾರಂಭಿಸಿದ್ದ. ಪ್ರತಿದಿನ ಅವನ ದವಡೆಗೆ ಸಿಲುಕಿದ ನಿಸ್ಸಹಾಯಕ ಬಲಿಪಶುಗಳ ಎಲುಬುಗಳು ಅವನ ಗುಹೆಯ ಮುಂಭಾಗದಲ್ಲಿ ಚಲ್ಲಾಪಿಲ್ಲಿಯಾಗಿ ಬಿದ್ದುಕೊಂಡಿರುತ್ತಿದ್ದವು. ರಾತ್ರಿಯ ಕಾಳ ಕತ್ತಲಲ್ಲಿ ಆ ಪಿಶಾಚಿ ನಮ್ಮೂರಲ್ಲಿ ಹೊಕ್ಕು, ಯಾರ ಯಾರದೋ ದನದ ಕೊಟ್ಟಿಗೆಗೆ ನುಗ್ಗಿ ದನಗಳನ್ನು ಅಪಹರಿಸಿಕೊಂಡು ಹೋಗಿ ಅವುಗಳ ಕಥೆ ಮುಗಿಸಿಬಿಡುತ್ತಿದ್ದ. ಅವನ ಕ್ರೂರ ಕೃತ್ಯವನ್ನು ತಡೆಯುವುದೇ ಸಾಧ್ಯವಿರಲಿಲ್ಲ. ತನ್ನ ಮನಸ್ಸಿಗೆ ಬಂದಾಗ, ಮನಸ್ಸಿಗೆ ಬಂದಂತೆ ಮಾಡಿಯೇಬಿಡುತ್ತಿದ್ದನೆಂಬ ಬಗ್ಗೆಯೂ ಅನೇಕ ದಂತಕಥೆಗಳುಂಟು.

ಆ ಪಿಶಾಚಿಗೆ ಮರಣವೆಂಬುದೇ ಇರಲಿಲ್ಲವೆಂದು ಹೇಳಿದೆನಷ್ಟೆ? ಹಾಗಿದ್ದ ಮೇಲೆ ಅವನಿಗೆ ಯಾರೇನು ಮಾಡಲು ಸಾಧ್ಯ? ಆ ಕ್ರೂರ ಸ್ಥಿತಿಯ ಬಗ್ಗೆ ಪ್ರತಿಭಟಿಸಿಯಾದರೂ ಏನು ಪ್ರಯೋಜನ? ಜನರೇ ಕಟ್ಟಿದ ಕಥೆಗಳನ್ನು ಅವರೇ ಹೇಗೆ ಅಳಿಸಿಹಾಕಿಯಾರು ?

ದಿನಗುರುಳಿದಂತೆ ಪಿಶಾಚಿಯ ದರ್ಪ ಬೆಳೆಯುತ್ತಲೇ ಹೋಯಿತು. ಅದರೊಡನೆ ಅವನ ಬಲಿಪಶುಗಳ ಸಂಖ್ಯೆಯೂ ಬೆಳೆಯುತ್ತಾ ಹೋಯಿತು. ಆತ ಬರಬರುತ್ತ ಬೆಟ್ಟದ ಮೇಲೆ ಮಾತ್ರವಲ್ಲ, ನಮ್ಮ ಹಳ್ಳಿಯ ಜನರ ಮೇಲೆಯೂ ತನ್ನ ದಬ್ಬಾಳಿಕೆ ನಡೆಸಿದ. ಅವನಿಗೆ ಶರಣು ಬಂದವರಿಗೂ ಮರಣ ತಪ್ಪುವಂತಿರಲಿಲ್ಲ. ನಿತ್ಯವೂ ಅವನ ಘೋರ ಕೃತ್ಯಗಳ ಕುರಿತು ಹಳ್ಳಿಯ ಹಳೆಯ ಮುದುಕಿಯರು ಹೊಸ ಹೊಸ ಕಥೆಗಳನ್ನು ಹೊಸೆಯುತ್ತಲೇ ಇದ್ದರು. ಮನೆಮನೆಯ ಮಕ್ಕಳೂ ಆ ಕಥೆಗಳನ್ನು ಹೇಳುತ್ತಿದ್ದರು. ಹಳ್ಳಿಯ ಕಿರಿಕಿರಿಯರೆಲ್ಲ ಊರಾಚೆಯ ಬೆಟ್ಟದ ಮೇಲೆ ಏನೆಲ್ಲಾ ನಡೆಯುತ್ತದೆಂದು ತಿಳಿದುಕೊಳ್ಳಲು ಹವಣಿಸುತ್ತಿದ್ದರು.

ಮಗು, ಗಾಳಿ ಜೋರಾಗಿಯೇ ಬೀಸುತ್ತಿದೆ. ಇಷ್ಟರಲ್ಲೇ ಬಿರುಗಾಳಿ ಬೀಸಿದರೂ ಬೀಸಬಹುದು. ಒಲೆಯಲ್ಲಿ ಬೆಂಕಿಯೂ ಇಲ್ಲ. ಉರಿಸಬೇಕೆಂದರೆ ಕಟ್ಟಿಗೆಯೂ ಇಲ್ಲ. ನೀನೇ ಇನ್ನಷ್ಟು ಹತ್ತಿರ ಬಾ ಮಗು.

ಆ ಪಿಶಾಚಿಯ ಒಂದೊಂದು ಕೆಲಸವೂ ಭಯಂಕರವಾಗಿತ್ತು; ಅಸಹನೀಯವಾಗಿತ್ತು; ಅಸಂಬದ್ಧವಾಗಿತ್ತು. ಅವನಿಂದಾಗಿ, ಇಡಿಯ ಬೆಟ್ಟವೇ ಗೂಢ ಗುಹೆಯಾಗಿ ಪರಿಣಮಿಸಿತು. ಮನುಷ್ಯರ ನಿಯಂತ್ರಣವೆಂಬುದೇ ನಡೆಯದ ಪರಿಸ್ಥಿತಿಯುಂಟಾಯಿತು. ಈಗ ಭರದಿಂದ ಬೀಸಲಾರಂಭಿಸಿದ ಈ ಚಳಿಗಾಳಿಯಂಥ ಅಂದಿನ ವಾತಾವರಣದಲ್ಲಿ ನಮ್ಮ ಹಳ್ಳಿಯ ಜನ ಹೆದರಿ ನಡುಗುತ್ತ ತಮ್ಮ ತಮ್ಮ ಮನೆ ಸೇರಿ ಬಾಗಿಲಿಗೆ ಅಗಳಿ ಹಾಕಿಬಿಡುತ್ತಿದ್ದರು.

ಆ ಪಿಶಾಚಿಯ ದಬ್ಬಾಳಿಕೆಯ ದಿನಗಳಲ್ಲಿ ನಮ್ಮೂರಿನಲ್ಲಿ ಒಬ್ಬ ಸಾಮಾನ್ಯ ಮಹಿಳೆ ವಾಸವಾಗಿದ್ದಳು. ತನ್ನಷ್ಟಕ್ಕೆ ತಾನೆಂಬಂತೆ ಬದುಕಿಕೊಂಡಿದ್ದ ತಾಯಿ. ಆಕೆಯ ಹೆಸರು ಹಿಂದ್. ಆಕೆಯ ಕಡೆಗೆ ಯಾರೂ ಅಷ್ಟಾಗಿ ಗಮನವೀಯುತ್ತಿರಲಿಲ್ಲ. ಆಕೆ ಬಡವಿ. ಬಡವರ ಬಗ್ಗೆ ಯಾರು ಅಷ್ಟು ಕಾಳಜಿ ವಹಿಸುತ್ತಾರೆ? ಅವಳ

ಕೈಯಲ್ಲಿ ಒಂದು ಕಾಸೂ ಇರಲಿಲ್ಲ. ಅವಳಿಗೆ ಒಬ್ಬನೇ ಒಬ್ಬ ಮಗ. ಸಕತ್ ಕಾಯಿಲೆಯಿಂದ ಬಳಲುತ್ತಿದ್ದ. ಅವನ ಔಷಧೋಪಚಾರಕ್ಕಾಗಿ ಆಕೆ ತನ್ನ ಬಳಿಗಿದ್ದ ವಸ್ತು- ಒಡವೆ- ಹಣ-ಕಾಸು ಎಲ್ಲವನ್ನೂ ವ್ಯಯ ಮಾಡಿ ಬರಿಗೈಯವಳಾಗಿಬಿಟ್ಟಿದ್ದಳು.

ಹೌದು ಮಗು, ಆ ಮಹಿಳೆಗೆ ಹತ್ತು ವರ್ಷದ ಒಬ್ಬ ಮಗನಿದ್ದ. ಅವಳ ಪತಿ ನೌಕಾಯಾನಕ್ಕೆ ಹೋದವ ಮರಳಿ ಬಂದಿರಲೇ ಇಲ್ಲ. ಆತ ನಮ್ಮ ನಾಡಿನ ಒಬ್ಬ ಧೈರ್ಯಶಾಲೀ ನಾವಿಕನೆಂದೇ ಹೆಸರಾಗಿದ್ದ. ಅವನಂತೆ ನಮ್ಮ ಅನೇಕ ಶೂರ ನಾವಿಕರು ಬಲು ದೊಡ್ಡ ಇತಿಹಾಸವನ್ನೇ ನಿರ್ಮಿಸಿ ಹೋದರು. ಆದರೆ ಅವರ ಸಾಹಸಗಾಥೆ ಅವರು ಬಳಸುತ್ತಿದ್ದ ಸಮುದ್ರದ ಹೊರತಾಗಿ ಈಗ ಬೇರಾರಿಗೂ ನೆನಪೇ ಇಲ್ಲ. ಎಂಥಾ ದುರ್ದೈವ! ತಮ್ಮ ಹಿಂದೆ ಎಷ್ಟೆಲ್ಲ ದುರಂತ ಕಥೆಗಳನ್ನು ಬಿಟ್ಟುಹೋದ ಆ ಜನ ಎಷ್ಟೊಂದು ದೊಡ್ಡವರು!

ತನ್ನ ಮಡದಿ ಹಾಗೂ ಎಳೆವಯಸ್ಸಿನ ಮಗನನ್ನು ಬಿಟ್ಟು ಆ ನಾವಿಕ ತೀರಿಹೋಗಿದ್ದ. ಆ ಮಗ ದಿನಗಳೆದಂತೆ ಕಾಯಿಲೆಯಿಂದ ನರಳಲಾರಂಭಿಸಿದ. ಅವನ ತಾಯಿ ಹಿಂದ್ ತನ್ನ ಮಗನ ಆರೈಕೆಗಾಗಿ ತನ್ನ ಬಳಿಗಿದ್ದುದನ್ನೆಲ್ಲಾ ಮಾರಿ ಬರಿಗೈಯಾದಳು. ಫಲ ದೊರೆಯಲಿಲ್ಲ. ಆಕೆ ನಿಸ್ಸಹಾಯಕಳಾಗಿ ದೇವರಲ್ಲಿ ಮೊರೆಹೊಕ್ಕಳು. ಪ್ರಾರ್ಥನೆಯ ಮೇಲೆ ಪ್ರಾರ್ಥನೆ ಸಲ್ಲಿಸಿದಳು. ಹರಕೆಯನ್ನೂ ಹೊತ್ತಳು. ಪ್ರಯೋಜನವಾಗಲಿಲ್ಲ. ಮುಂದೇನು ಮಾಡಬೇಕೆಂದೇ ಅವಳಿಗೆ ಹೊಳೆಯದಾಯಿತು.

ಕೈಯಲ್ಲಂತೂ ಏನೂ ಉಳಿದಿರಲಿಲ್ಲ. ಇದ್ದದ್ದು ಒಂದೇ: ಅವಳ ಬಡಕಲು ದೇಹ. ಅದನ್ನೂ ಆಕೆ ಗುಲಾಮರ ಮಾರುಕಟ್ಟೆಯಲ್ಲಿ ಮಾರಿಕೊಳ್ಳಬೇಕೆಂದು ಯೋಚಿಸಿದಳು. ಆದರೆ, ನಮ್ಮಂಥ ಸಣ್ಣ- ಪುಟ್ಟ ಹಳ್ಳಿಗಳಲ್ಲಿ ಗುಲಾಮರ ಪೇಟೆಯೆಂಬುದೇ ಇರುವುದಿಲ್ಲ. ಇದ್ದರೂ, ಅಲ್ಲಿ ಯಾರಾದರೂ ಮನಸ್ಸು ಮಾಡಿಕೊಳ್ಳಬಹುದಾದಷ್ಟು ಸೌಂದರ್ಯವೂ ಅವಳಲ್ಲಿರಲಿಲ್ಲ.

ಓ ದೇವರೇ, ಅವಳೊಬ್ಬ ಸಾಮಾನ್ಯ ಮಹಿಳೆಯಾಗಿದ್ದಳು; ಯಾವ ಆಕರ್ಷಣೆಯೂ ಇಲ್ಲದ ಅತಿ ಸಾಮಾನ್ಯ ಮಹಿಳೆ. ಅವಳ ಬಳಿಗಿದ್ದುದೆಂದರೆ ಅವಳ ಹೃದಯ, ಅವಳ ಪರಿಶ್ರಮ ಹಾಗೂ ಹೋರಾಟದ ಛಲ. ಆಕೆಗೀಗ ಬೇರಾವ ಆಸೆಯೂ ಉಳಿದಿರಲಿಲ್ಲ. ಕಾಮಾಲೆಯಿಂದ ಬಳಲುತ್ತಿದ್ದ ತನ್ನ ಮಗನ ಬದಿಯಲ್ಲಿ ಕುಳಿತು, ಅವನ ಬಿಳುಚಿಕೊಂಡ ಮುಖವನ್ನು ಆಗಾಗ ತನ್ನ ಕಣ್ಣೀರಿನಿಂದ ತೊಳೆಯುವ ಹೊರತು ಮತ್ತೇನೂ ಮಾಡುವುದು ಅವಳಿಂದ ಸಾಧ್ಯವಿರಲಿಲ್ಲ.

ಹೊರಗಿನ ಗಾಳಿಯಂತೂ ಜೋರಾಗಿಯೇ ಬೀಸುತ್ತಿದೆಯಲ್ಲವೇ ಮಗು? ನಾನು ಹೇಳುವ ಕಥೆ ಇನ್ನೂ ಮುಗಿದೇ ಇಲ್ಲ. ದೊಡ್ಡವರು ಮಾಡುವ ಕೆಲಸವೆಲ್ಲಾ ಹೀಗೇ. ಕೆಲಸಕ್ಕೆ ಕೈ ಹಾಕುವ ಮೊದಲು ಒಂದು ಯೋಜನೆ ಹಾಕಿಕೊಳ್ಳುವುದೇ ಇಲ್ಲ.

ಹಿಂದ್ ವಸ್ತುಸ್ಥಿತಿ ಮತ್ತು ಭ್ರಮೆಗಳ ನಡುವೆ ತೊಳಲಾಡಲು ಶುರು ಮಾಡಿದಳು. ಅವಳ ಕಣ್ಣೀರ ಕೋಡಿಯೊಡನೆಯೇ ಅವಳ ಮನಸ್ಸು ಏನೇನೋ ಯೋಚಿಸತೊಡಗಿತು. ತನ್ನ ಮಗನಿಗೆ ಬೇಕಾದ ಮದ್ದು ಆ ಪಿಶಾಚಿಯ ಗುಹೆಯಲ್ಲಿರಬಹುದು; ಅದೆಷ್ಟೋ ಜೀವಗಳ ರಕ್ತ ಹೀರಿ ಕೊಬ್ಬಿದ ಆ ಪಿಶಾಚಿಯ ಕಪ್ಪು ಹೃದಯದಲ್ಲೇ ತನ್ನ ಮಗನ ಮದ್ದು ದೊರೆಯಬಹುದು.

ಹಿಂದ್ ಮತ್ತೆ ಹೆಚ್ಚು ಯೋಚಿಸಲೇ ಇಲ್ಲ. ಅವಳು ಕನಸಿನೊಳಗೆಂಬಂತೆ ಎದ್ದು ಸರಸರನೆ ನಡೆದು ಗುಹೆಯ ಮುಂಭಾಗಕ್ಕೆ ಹೋಗಿ ನಿಂತಳು. ಸರಳವಾದ ಶಬ್ದಗಳ ಹಿಡಿತಕ್ಕೆ ಸಿಗದ ತಾಯ್ತನದ ತುಡಿತದ ಮಹಾಶಕ್ತಿಯೊಂದು ಅವಳನ್ನು ಅಲ್ಲಿಗೆ ಎಳೆದೊಯ್ದಿತ್ತು. ನಮ್ಮೂರ ಜನರೆಲ್ಲರ ಹೃದಯಗಳಲ್ಲಿ ಹಾಹಾಕಾರವೆಬ್ಬಿಸಿದ್ದ ಆ ದುಷ್ಟ ಪಿಶಾಚಿಯ ಬಾಗಿಲಿಗೆ ಒಬ್ಬಂಟಿಯಾಗಿ ಬಂದು ನಿಂತವಳು ತನ್ನ ಬದುಕಿನಲ್ಲಿದ್ದ ಒಂದೇ ಒಂದು ಆಶಾಕಿರಣವೇ ಆರದಂತೆ ಅದನ್ನು ಉಳಿಸಿಕೊಳ್ಳಲು ತಡಬಡಿಸುತ್ತಿದ್ದ ಬಡಕಲು ಶರೀರದ ಆ ಬಡ ತಾಯಿ! ಈ ಓಟದಲ್ಲಿ ಆಕೆ ಪಿಶಾಚಿಯ ಕುರಿತಾದ ಒಂದೊಂದು ದಂತಕಥೆಯನ್ನೂ ತುಳಿತುಳಿದು ಮುಂದೆ ಸಾಗಿದ್ದ ಹಾಗಿತ್ತು.

ಪಿಶಾಚಿಗೆ ಮಹದಾಶ್ಚರ್ಯ! ಒಬ್ಬ ಮಹಿಳೆ ತನ್ನ ಗುಹೆಯ ಗಡಿ ದಾಟಿ ತನ್ನ ಬಾಗಿಲಿಗೆ ಬಂದು ನಿಲ್ಲುವುದೆಂದರೆ! ಅದು ಅವನ ಮಮಕಾರ ಹಾಗೂ ಅಧಿಕಾರಕ್ಕೆ ಒಂದು ಮಹಾ ಆಹ್ವಾನ ನೀಡಿದಂತೆಯೇ ಆಗಿತ್ತು. ಆ ಪಿಶಾಚಿ ಸಿಡಿದೆದ್ದು ನಿಂತ. ಆ ಬಡಪಾಯಿ ಮಹಿಳೆ ಒಂದು ಕ್ಷಣ ಗಡಗಡ ನಡುಗಿದಳು. ಅವಳಿಗೆ ನೆಟ್ಟಗೆ ನಿಲ್ಲಲಾಗದೆ ಕೆಳಗುರುಳಿ ಬೀಳುವ ಹಾಗೆನಿಸಿತು. ಅದನ್ನು ನೋಡಿ ಆ ಪಿಶಾಚಿಯ ಪಿತ್ತ ಮತ್ತಿಷ್ಟೂ ನೆತ್ತಿಗೇರಿದಂತಾಯಿತು. ತನ್ನ ಗುಹೆಯ ಮುಂದೆ ಬಂದು ನಿಂತದ್ದು ಮತ್ತಾವ ಬಲಿಷ್ಠ ವ್ಯಕ್ತಿಯಾಗಿರದೆ ಈ ಅರೆಸತ್ತ ಹೆಣ್ಣೇ! ಪಿಶಾಚಿಯ ಮರ್ಮಸ್ಥಾನಕ್ಕೆ ಯಾರೋ ಪೆಟ್ಟು ಹಾಕಿದ ಹಾಗೆನಿಸಿತು. ಆದರೆ, ಹಿಂದ್ ಹೆದರಲಿಲ್ಲ; ಹಿಂದೆ ಸರಿಯಲಿಲ್ಲ. ಆ ಕೆಟ್ಟ ಮುಸುಡಿಯ ಪಿಶಾಚಿಯನ್ನು ಕಂಡಾಕ್ಷಣ ಅವಳ ಮೈ ಉರಿಯಲಾರಂಭಿಸಿತ್ತು. ಅವಳ ಕೈ ಕಾಲುಗಳಲ್ಲಿ ಎಲ್ಲಿಲ್ಲದ ಬಲ ತುಂಬಿಕೊಂಡಂತಾಯಿತು. ತಾನು ಬಂದ ಉದ್ದೇಶ ಈಡೇರದೆ ಅಲ್ಲಿಂದ ಕದಲುವ ಪ್ರಶ್ನೆಯೇ ಇಲ್ಲವೆಂದು ಆಕೆ ದೃಢ ಸಂಕಲ್ಪ ಮಾಡಿದಳು. ಆಕೆ ಅಲ್ಲಿಗೆ ಬಂದದ್ದೇ ಆ ಪಿಶಾಚಿಯ ಹೃದಯಾಪಹರಣಕ್ಕೆ! ಆ ಧೀರ ಮಹಿಳೆ ತನ್ನ ದೈವವನ್ನೂ ಆ ಪಿಶಾಚಿಯ ಕುರಿತಾಗಿ ಅವರಿವರು ಕಟ್ಟಿದ ದಂತಕಥೆಗಳನ್ನೂ ಧಿಃಕರಿಸಿ ನಿಂತ ಬಗೆಯನ್ನು ಪುಷ್ಟೀಕರಿಸುವಂತೆ, ನೆತ್ತಿಯ ಮೇಲಿನ ಸೂರ್ಯ ಮತ್ತಿಷ್ಟೂ ಥಳ ಥಳ ಹೊಳೆಯಲಾರಂಭಿಸಿದ; ಗಿಡಮರಗಳು ಹಿಗ್ಗಿ ಕುಣಿದಾಡಲಾರಂಭಿಸಿದವು; ಹಕ್ಕಿಗಳು ದನಿದೆಗೆದು ಹಾಡಲಾರಂಭಿಸಿದವು.

''ಏಯ್ ಮುದುಕೀ, ಇಲ್ಲಿಗೇಕೆ ಬಂದೆ?'' ಪಿಶಾಚಿ ಅಬ್ಬರಿಸಿದ.

''ಎಲೇ ಪಿಶಾಚೀ, ನೀನು ಯಾರೇ ಆಗಿರಲಿ, ಎಂಥ ಶಕ್ತಿವಂತನೇ ಆಗಿರಲಿ, ನಾನು ನನ್ನ ಮಗನಿಗಾಗಿ ಮದ್ದು ಹುಡುಕುತ್ತ ಇಲ್ಲಿಗೆ ಬಂದ ಒಬ್ಬ ತಾಯಿ! ನಿನ್ನ ಹೃದಯದಲ್ಲೇ ಆ ಮದ್ದಿದೆಯೆಂದು ನನಗೆ ಗೊತ್ತು. ನೀನು ಒಪ್ಪಲಿ ಬಿಡಲಿ ನಿನ್ನ ಹೃದಯವನ್ನು ಕಿತ್ತೊಯ್ಯಲಿಕ್ಕೆಂದೇ ನಾನಿಲ್ಲಿ ಬಂದದ್ದು!'' ಎಂದಳು ಮಹಿಳೆ.

ಆ ಛಲಗಾತಿಯ ಮಾತು ಕೇಳಿ ಇಡಿಯ ವಿಶ್ವದ ಕೋಪವೆಲ್ಲ ಆ ಪಿಶಾಚಿಯ ಮೊಗದಲ್ಲೇ ಮಡುಗಟ್ಟಿದಂತೆ ಅದು ಕೆಂಪುಕೆಂಪಾಯಿತು!

''ಏಯ್ ಮುದುಕೀ, ಇಲ್ಲಿ ಕೇಳು. ನನ್ನ ಶಾಂತಿಭಂಗ ಮಾಡಿ ನನ್ನ ಸಾಮರ್ಥ್ಯಕ್ಕೆ ಆಹ್ವಾನ ನೀಡಿದವಳು – ನೀನೇ ಮೊದಲಿಗಳು! ನಾನು ನಿನ್ನನ್ನು ನಾಶಗೊಳಿಸಿಬಿಡಬಲ್ಲೆ; ಈ ಭೂಮಿಯ ಮೇಲೆ ನಿನ್ನದೊಂದೂ ಅವಶೇಷ ಉಳಿಯದಂತೆ ಮುಗಿಸಿಬಿಡಬಲ್ಲೆ, ತಿಳೀತೇ!''

ಆ ಪಿಶಾಚಿಯ ಭ್ರಮೆಯನ್ನೆಲ್ಲ ತೊಡೆದುಹಾಕಲು ಪಣ ತೊಟ್ಟಂತೆ ಗುಹೆಗೆ ಬಂದು ತಲುಪಿದ್ದ ಹಿಂದ್ ತನ್ನ ಮಗನಿಗಾಗಿ ಹೋರಾಡಲು ಸಿದ್ಧಳಾಗಿಯೇ ನಿಂತಿದ್ದಳು. ಆಕೆ ಈಗ ಹೆದರಿಕೊಂಡರೆ ಅಥವಾ ಕ್ಷಮೆಯಾಚನೆ ಮಾಡಿದರೆ ಅವಳ ಕಥೆ ಮುಗಿದಂತೆಯೇ. ಅಂತೆಯೇ ಆಕೆ ಆ ಪಿಶಾಚಿ ಅರಚಿಕೊಂಡದ್ದನ್ನು ಕೇಳಿಯೂ ಕೇಳದಂತೆ ಎದೆಯುಬ್ಬಿಸಿಕೊಂಡೇ ನಿಂತಿದ್ದಳು. ಆಕೆ ಆ ವಿಕರಾಳ ಪಿಶಾಚಿಯತ್ತ ಮುಖ ಮಾಡಿ ಗಹಗಹಿಸಿ ನಕ್ಕಳು. ಅವಳ ನಿರ್ಭಯ ನಿಲುಮೆಯಿಂದ ಅವಳ ಕಣ್ಣಿನ ಕಾಂತಿಯೂ ಹೆಚ್ಚಿದಂತಾಗಿತ್ತು. ಆಕೆ ಗುಡುಗಿದಳು:

''ನೀನೊಬ್ಬ ಕ್ಷುಲ್ಲಕ ಜೀವಿ; ನಮ್ಮ ಜನರ ಪೊಳ್ಳು ನಂಬಿಕೆಯ ಮೇಲೆ ಬದುಕಿದ ಪ್ರಾಣಿ. ನಾನಂತೂ ನೀನು ಒಪ್ಪಲಿ, ಬಿಡಲಿ ನಿನ್ನ ಹೃದಯವನ್ನು ಕಿತ್ತುಕೊಳ್ಳದೆ ಇಲ್ಲಿಂದ ಕದಲುವಂಥವಳಲ್ಲ!''

ಪಿಶಾಚಿ ನಗಲು ಪ್ರಯತ್ನಿಸಿದ. ಅವನ ನಗೆ ಗಂಟಲಲ್ಲೇ ಸಿಕ್ಕಿಕೊಂಡಂತಾಯಿತು. ಅವನಿಗೆ ಗರಬಡಿದ ಹಾಗಾಗಿತ್ತು. ಈ ಹೆಂಗಸಿನ ಕೆಂಗಣ್ಣಿನೆದುರು ತತ್ತರಿಸಿ ಬೀಳುವ ಮೊದಲೇ ಏನಾದರೂ ಉಪಾಯ ಮಾಡಲೇಬೇಕೆಂದು ಒಳಗೊಳಗೇ ಚಡಪಡಿಸಿದ. ಆದರೂ ತನಗೇನೂ ಆಗಿಯೇ ಇಲ್ಲವೆಂಬಂತೆ ಆತ ಮತ್ತೊಮ್ಮೆ ಅರಚಿದ: ''ಏಯ್ ಮುದಿಗೂಬೆ, ನಿನ್ನ ಶಕ್ತಿಯ ಸರಿಯಾದ ಅಂದಾಜು ನಿನಗೇ ತಿಳಿದಿಲ್ಲ. ನಿನ್ನ ಮರುಳುತನ ನಿನ್ನನ್ನು ಈ ಸಾಹಸಕ್ಕೆ ಇಳಿಸಿರಬೇಕು. ಇದೊಂದು ಬಾರಿ ನಾನು ನಿನ್ನನ್ನು ಕ್ಷಮಿಸಿ ಬಿಡುತ್ತೇನೆ, ಆಯ್ತಾ? ಎಲ್ಲ ಜನರೂ ನನ್ನನ್ನು ಕಂಡು ಹೆದರಿ ನಡುಗುತ್ತಾರೆ. ನಾನೆಂದರೆ... ಅದ್ಭುತ ಪರಾಕ್ರಮಿ... ಸಮಸ್ತರಿಗೂ ಸಿಂಹಸ್ವಪ್ನ... ಈ ಬೆಟ್ಟ ಹಾಗೂ ನಿಮ್ಮ ಹಳ್ಳಿಯ ಸರ್ವಶಕ್ತ ದೊರೆ... ಸದಾ ವಿಜಯಶಾಲಿ... ಸಾವನ್ನೇ ಕಂಡರಿಯದ ಅಮರಜೀವಿ...''

೧೬ನೇ ಪುಟಕ್ಕೆ...





# 'ಹೊಸರುಚಿ' ಕಾಲಂ

**ಭೋಜರಾಜ ಸೊಪ್ಪಿಮಠ**

**ಕೊ**ನೆಗೂ ಆಸೆಯು ಕೈಗೂಡಿತು ಎಂದು ನಿಶ್ಚಿಂತನಾಗಿದ್ದೆ. ಬಹಳ ದಿನಗಳಿಂದಲೂ ನಾನೊಂದು ಪತ್ರಿಕೆಯನ್ನು ಪ್ರಾರಂಭಿಸಬೇಕೆಂದಿದ್ದೆ. ಹಾಗೂ ಹೀಗೂ ಏನೋ ಕಷ್ಟಪಟ್ಟು ಕೊನೆಗೂ ಪ್ರಾರಂಭಿಸಿದೆ. ಮೊದಮೊದಲು ತೊಂದರೆಯಾದರೂ ನಂತರದಲ್ಲಿ ಸರಿಹೋಯಿತು. ಜನರ ಅಪೇಕ್ಷೆಯ ಮೇರೆಗೆ ಕೆಲವು ಅಂಕಣಗಳನ್ನು ಸೃಷ್ಟಿಸಿ ಒಳ್ಳೆಯ ರೀತಿಯಲ್ಲಿ ನಡೆದುಕೊಂಡು ಹೋಯಿತು.

ಹೀಗಿರುವಾಗ ಮಹಿಳೆಯರ ಬಗ್ಗೆ ಒಂದಷ್ಟು ಯೋಚನೆ ಬಂದಿತು. ಅವರಿಗಾಗಿ ಏನೇನು ಅಂಕಣಗಳನ್ನು ಪ್ರಾರಂಭಿಸಬಹುದೆಂದು ಹೆಂಡತಿ ಪ್ರೇಮಿಯೊಂದಿಗೆ ಚರ್ಚಿಸಿದೆ. ಅವಳು ಕೂಡಲೇ ನನಗೆ ನೀಡಿದ ಸಲಹೆ 'ಹೊಸರುಚಿ' ಅಂಕಣವನ್ನು ಪ್ರಾರಂಭಿಸಬೇಕೆಂದು. ಆ ಪರಿಸ್ಥಿತಿಯಲ್ಲಿ ಅದು ಸರಿ ಕಾಣಿಸಿತು. ಆ ವಾರದಿಂದಲೇ 'ಹೊಸರುಚಿ' ಅಂಕಣ ಪ್ರಾರಂಭವಾಯಿತು.

ಪ್ರಾರಂಭದಲ್ಲಿ ನನ್ನ ಹೆಂಡತಿ ಒಂದಷ್ಟು ಹೊಸರುಚಿಗಳ ಬಗ್ಗೆ ಬರೆದಳು. ಓದುಗರು ಕೂಡಾ ಹೊಸ ರುಚಿಯ ಬಗ್ಗೆ ಬರೆಯತೊಡಗಿದರು. ಕ್ರಮೇಣ ಅದಕ್ಕಾಗಿ ಬರುವ ಪತ್ರಗಳ ಸಂಖ್ಯೆಯೂ ಜಾಸ್ತಿಯಾಗತೊಡಗಿತು. ಹೀಗೆಯೇ ಇದು ನಡೆದಿದ್ದರೆ ಚೆನ್ನಾಗಿರುತ್ತಿತ್ತು. ಆದರೆ ಇದಕ್ಕೆ ಸಂಬಂಧಿಸಿದ ದೂರುಗಳು, ಸಂದೇಹಗಳು, ಸಲಹೆಗಳು, ಪ್ರಶ್ನೆಗಳು ಬರತೊಡಗಿದ್ದರಿಂದ ಅವುಗಳಿಗೆ ಉತ್ತರಿಸುವುದೊಂದು ದೊಡ್ಡ ತಲೆನೋವಿನ ಕೆಲಸವಾಯಿತು.

'ಪರಸ್ಪರ' ಅಂಕಣಕ್ಕೆ ಬರುವ ಹೊಸರುಚಿಯ ಬಗೆಗಿನ ಕೆಲವು ಪತ್ರಗಳನ್ನು ಇಲ್ಲಿ ಪ್ರಕಟಿಸಿದ್ದೇನೆ. ಇಂತಹ ಪತ್ರಗಳಿಗೆ ಉತ್ತರಿಸುವುದಕ್ಕಿಂತ ಆ ಅಂಕಣವನ್ನು ನಿಲ್ಲಿಸಿಬಿಡಬೇಕೆಂದು ನಿರ್ಧರಿಸಿದ್ದೇನೆ. ಕಾರಣ ಓದುಗರು ಆ ಪತ್ರಗಳನ್ನು ನೋಡಿ 'ಹೊಸರುಚಿ' ಅಂಕಣವನ್ನು ಮುಂದುವರೆಸಬೇಕೋ ಅಥವಾ ನಿಲ್ಲಿಸಿ ಬಿಡಬೇಕೋ ಎಂಬ ನಿಮ್ಮ ಅಭಿಪ್ರಾಯಕ್ಕೆ ಕಾತರದಿಂದ ಕಾಯುತ್ತಿದ್ದೇನೆ.

*　　*　　*

ಸ್ವಾಮಿ ಸಂಪಾದಕರೇ,

ನಿಮ್ಮ ಪತ್ರಿಕೆಯ ಬಗ್ಗೆ ನಾನು ತುಂಬಾ ಅಭಿಮಾನವಿರಿಸಿಕೊಂಡಿದ್ದೆ. ಆದರೆ ಈಗ ಅದು ನಶಿಸಿಹೋಗುತ್ತಿದೆ. ಈ ದುಬಾರಿಯ ದಿನಮಾನಗಳಲ್ಲಿ ಹಣಕೊಟ್ಟು ಪತ್ರಿಕೆ ಕೊಂಡು ಓದುವುದೇ ಕಷ್ಟದ ಕೆಲಸವಾಗಿರುವಾಗ ನಮ್ಮ ಹೊಟ್ಟೆ ಉರಿಸುವಂತೆ, ನಮ್ಮನ್ನು ಪರೀಕ್ಷಿಸಲೆಂಬಂತೆ 'ಹೊಸರುಚಿ' ಅಂಕಣವನ್ನು ಪ್ರಾರಂಭಿಸಿ ನಮ್ಮನ್ನೇಕೆ ಅಗ್ನಿಪರೀಕ್ಷೆಗೆ ಒಳಪಡಿಸಿದ್ದೀರಿ ? ನನ್ನ ಹೆಂಡತಿ ಅವುಗಳಲ್ಲಿ ಒಂದನ್ನಾದರೂ ಮಾಡಲೇಬೇಕು. ಕಾರಣ ದಯವಿಟ್ಟು ಆ ಅಂಕಣ ನಿಲ್ಲಿಸಿಬಿಡಿ.

ಭಟ್ಕಳ　　— **ಶಾಂತೇಶ್ ಸರಳವಂತ**

*　　*　　*

ಮಹಾಶಯರೇ,

ತಮ್ಮ ಪತ್ರಿಕೆಯನ್ನು 'ಹೊಸರುಚಿ' ಅಂಕಣ ಪ್ರಾರಂಭವಾದಾಗಿನಿಂದ ಓದುತ್ತಲೇ ಬಂದಿದ್ದೇನೆ. ಅದರಲ್ಲಿ ಬರೀ ಅರೆ ಪಾವು, ಪಾವು ಕಿಲಾ ಎಂದು ಕೇವಲ ಒಬ್ಬಿಬ್ಬರಿಗೆ ಸಾಕಾಗುವಷ್ಟು ರುಚಿಯ ಬಗ್ಗೆ ತಿಳಿಸುತ್ತೀರಿ. ನಾನೊಬ್ಬ ಅಡುಗೆಭಟ್ಟ. ಮದುವೆ, ಮುಂಜಿಯಂತಹ ಸಮಾರಂಭಗಳಲ್ಲಿ ದೊಡ್ಡ ದೊಡ್ಡ ಅಡುಗೆಗಳನ್ನು ಮಾಡುತ್ತಿರುತ್ತೇನೆ. ಕಾರಣ ಇಷ್ಟು ದೊಡ್ಡ ಅಡುಗೆಗೆ ಬೇಕಾಗುವ ಪದಾರ್ಥಗಳ ಪಟ್ಟಿ ಕೊಡಿ. ನನಗೆ ಪ್ರಯತ್ನಿಸಲು ಸಾಧ್ಯವಾಗುತ್ತದೆ. ಇದರ ಬಗ್ಗೆ ತೀವ್ರ ಗಮನ ಹರಿಸುವಿರೆಂದುಕೊಂಡಿದ್ದೇನೆ.

ಉಡುಪಿ　　— **ವಿಷ್ಣು ಭಟ್ಟ ಐತಾಳ**

*　　*　　*

ಮಾನ್ಯರೇ,

ನೀವು ಪ್ರತಿವಾರವೂ 'ಹೊಸರುಚಿ'ಗಾಗಿ ಎರಡು ಪುಟಗಳನ್ನು ಮೀಸಲಾಗಿಡುತ್ತೀರಿ. ಸಂತೋಷದ ವಿಷಯ. ಆದರೆ ತಮಗೆ ಒಂದು ಸಲಹೆ. ಪ್ರತಿವಾರವೂ 'ಹೊಸರುಚಿ'ಯನ್ನು ದಯವಿಟ್ಟು ಪ್ರಕಟಿಸಬೇಡಿ. ತಿಂಗಳಿನ ಪ್ರಥಮ ಸಂಚಿಕೆಯಲ್ಲಿ ಮಾತ್ರ ಪ್ರಕಟಿಸಿ. ಏಕೆಂದರೆ ನಮ್ಮವರಿಗೆ ತಿಂಗಳಿಗೊಂದೇ ಸಾರಿ ಸಂಬಳ. ಅದೂ ಮೊದಲ ವಾರದಲ್ಲಿ. ಅದಕ್ಕಾಗಿ ಈ ಕೋರಿಕೆ. ಇಲ್ಲದಿದ್ದರೆ ನನ್ನ ಸಂಬಳವೆಲ್ಲಾ ನಿನ್ನ 'ಹೊಸರುಚಿ' ಪರೀಕ್ಷೆಗಾಗಿ ಕಳೆದುಹೋಗುತ್ತದೆ ಎಂದು ಗದರುತ್ತಿರುತ್ತಾರೆ. ಈಗಿನ ದುಬಾರಿಯ ದಿನಮಾನದಲ್ಲಿ ಒಂದು ವಾರದಲ್ಲಿ ಅಷ್ಟೂ ರುಚಿಯಾಗಿರುವ ಖಾದ್ಯಗಳನ್ನು ಮಾಡಲು ಸಾಧ್ಯವಾಗುವುದಿಲ್ಲ.

ಕುಣಿಗಲ್　　— **ಎಮ್. ವಿಶಾಲಾಕ್ಷಮ್ಮ**

*　　*　　*

ಶ್ರೀಯುತರೇ,

ಕಳೆದ ಎರಡು ವಾರದಲ್ಲಿ 'ಹೊಸರುಚಿ'ಯ ಅಂಕಣವೇ ಇರಲಿಲ್ಲ. ದಯಮಾಡಿ ಹೀಗೆ ಮಾಡಬೇಡಿ. ನಾನು ನಿಮ್ಮ ಪತ್ರಿಕೆಯನ್ನು ಹಣಕೊಟ್ಟು ಖರೀದಿಸುತ್ತಿರುವುದು ಹೊಸರುಚಿಗಾಗಿ. ಇಲ್ಲದಿದ್ದರೆ ಪತ್ರಿಕೆಯನ್ನು ಕೊಳ್ಳುವುದನ್ನೇ ನಿಲ್ಲಿಸಿಬಿಡುತ್ತೇನೆ.

ರಾಯಬಾಗ್　　— **ಪ್ರಸಾದ, ಪ್ರಿಯ ಹಾಗೂ ಮನೆಯವರು**

*　　*　　*

ಉದ್ದಿನ ವಡೆ ತಯಾರಿಸಲು ಒಂದು ಕಂತೆ ಕೊತ್ತಂಬರಿ ಬೇಕೆಂದು ತಿಳಿಸಲಾಗಿದೆ (ಸಂಚಿಕೆ ಯಾವುದೆಂದು ನೆನಪಿಲ್ಲ). ಆದರೆ ಒಂದು ಸಂದೇಹ. ಒಂದು ಕಂತೆ ಎಂದರೆ ಎಷ್ಟು? ನಗರಗಳಲ್ಲಾದರೆ ಚಿಕ್ಕ ಚಿಕ್ಕ ಕಂತೆಗಳಿದ್ದರೆ ಹಳ್ಳಿಗಳಲ್ಲಿ ದೊಡ್ಡದಾಗಿರುತ್ತವೆ. ಹೀಗಾಗಿ ಎಷ್ಟು ಕೊತ್ತಂಬರಿ ಕಡ್ಡಿಗಳು ಎಂಬುದನ್ನು

ಲೇಖಕಿ ವಿವರವಾಗಿ ತಿಳಿಸಬೇಕಾಗಿತ್ತು.

ಜೇವರ್ಗಿ — ಚೌಕಾಸಿ ಚನ್ನಮ್ಮ

* * *

ಕಳೆದ ಸಂಚಿಕೆಯಲ್ಲಿ 'ಹೊಸರುಚಿ' ಅಂಕಣ ಇರಲೇ ಇಲ್ಲ. ಸಿಟ್ಟಿನಿಂದ ನಿಮ್ಮ ಪತ್ರಿಕೆ ವಾಪಸ್‌ಕೊಡಲು ಬುಕ್ ಸ್ಟಾಲ್‌ಗೆ ಹೋದರೆ ಅವನು ವಾಪಸ್ ತೆಗೆದುಕೊಳ್ಳಲಿಲ್ಲ. ಹೀಗಾಗಿ ಅವನೊಂದಿಗೆ ದೊಡ್ಡ ಜಗಳ. ನಿಮ್ಮಿಂದಾಗಿ ನನಗೆ ಹತ್ತು ರೂ. ನಷ್ಟ. ಮುಂದಿನ ಸಂಚಿಕೆಯಲ್ಲಿ 'ಹೊಸರುಚಿ' ಪ್ರಕಟವಾಗುತ್ತದೆಯೋ ಇಲ್ಲವೋ ಎಂಬುದನ್ನು ಹಿಂದಿನ ಸಂಚಿಕೆಯಲ್ಲಿಯೇ ಪ್ರಕಟಿಸಿರಿ. ಪತ್ರಿಕೆ ಕೊಳ್ಳಬೇಕೋ ಬೇಡವೋ ಎಂಬ ಜಿಜ್ಞಾಸೆ ನಮಗೆ ತಪ್ಪುತ್ತದೆ.

ಪ್ರಶಾಂತನಗರ, ಗಂಗಾವತಿ — ದುರ್ಗಾಶ್ರೀ

* * *

ಮೋಸಂಬಿ ಹಣ್ಣಿನ ಸಿಪ್ಪೆಯಿಂದ ಉಪ್ಪಿನಕಾಯಿಯನ್ನು ತಯಾರಿಸಬಹುದೆಂದು 'ಹೊಸರುಚಿ'ಯಲ್ಲಿ ಓದಿದಾಗ ನನ್ನ ಮೈ ಉರಿದೇ ಹೋಯಿತು. ಏಕೆಂದರೆ ಈಗ್ಗೆ ಒಂದೆರಡು ವಾರದ ಹಿಂದೆ ಆಸ್ಪತ್ರೆಯಲ್ಲಿ ಹುಷಾರಿಲ್ಲದೇ ಮಲಗಿದ್ದಾಗ ಸಿಕ್ಕಾಪಟ್ಟೆ ಮೋಸಂಬಿ ತಿಂದು ಸಿಪ್ಪೆಗಳನ್ನು ಬಿಸಾಡಿದ್ದೆ. ಮೊದಲೇ ಗೊತ್ತಾಗಿದ್ದರೆ ಉಪ್ಪಿನಕಾಯಿ ಹಾಕಬಹುದಿತ್ತು. ಮೊದಲೇ ಪ್ರಕಟಿಸದಿರುವ ನಿಮ್ಮ ಪ್ರಮಾದದಿಂದಾಗಿ ನನ್ನ ಮೋಸಂಬಿ ಸಿಪ್ಪೆಯ ಉಪ್ಪಿನಕಾಯಿ ತಪ್ಪಿತು. ಇಂಥ ವಿಷಯಗಳನ್ನು ಮೊದಲೇ ಪ್ರಕಟಿಸಿ.

ಶಿಕಾರಿಪುರ — ವಿಶಾಲವಂತ ಪರಂಧಾಮಯ್ಯ

* * *

'ಹೊಸರುಚಿ' ಅಂಕಣಕ್ಕಾಗಿ ಪುಟಗಳ ಸಂಖ್ಯೆ ಜಾಸ್ತಿಯಾಗಲಿ. ಏಕೆಂದರೆ ನಮ್ಮ ಪಕ್ಕದ ಮನೆಯಾಕೆ ತಾನು ತಯಾರಿಸಿದ ಹೊಸ ರುಚಿಯನ್ನು ತಾನು ಮಾಡಿದ್ದೇನೆಂಬ ಹೆಮ್ಮೆಯಿಂದ ನನಗೂ ತಂದು ಕೊಡುತ್ತಿರುತ್ತಾಳೆ. ನಾವು ಹೊಗಳಿದಂತೆಲ್ಲ ಅವಳಲ್ಲಿನ ಆಸೆಗಳು ಬಲಗೊಳ್ಳುತ್ತಲಿವೆ. ನಮಗೂ ಉಚಿತವಾಗಿ ಹೊಸರುಚಿ ಸಿಗುತ್ತಿರುತ್ತದೆ.

ಬಾಗೇಪಲ್ಲಿ — ಪಕ್ಕದ್ಮನೆ ಪದ್ಮಕ್ಕ

ಅಂಬೋಡೆಯನ್ನು ಮಾಡಬೇಕಾದರೆ ಅಕ್ಕಿ ಹಾಗೂ ತೊಗರಿಬೇಳೆಯನ್ನು ಒಟ್ಟಿಗೆ ಎರಡು ಗಂಟೆಗಳ ಕಾಲ ನೆನೆಯಿಸಬೇಕು ಎಂದು ತಿಳಿಸಲಾಗಿದೆ. ಆದರೆ ಬೇರೆ ಪತ್ರಿಕೆಯಲ್ಲಿ ಇದೇ ರುಚಿಯನ್ನು ಮಾಡಬೇಕಾದರೆ ಒಂದೂವರೆ ಗಂಟೆ ನೆನೆಯಿಸಬೇಕೆಂದು ತಿಳಿಸಿದ್ದಾರೆ. ಇದರಲ್ಲಿ ಯಾವುದು ಸರಿ ? ನಿಮ್ಮಿಂದ ಉತ್ತರ ಬಂದ ನಂತರದಲ್ಲಿ ಈ ರುಚಿ ಮಾಡಲು ನಿರ್ಧರಿಸಿದ್ದೇವೆ. ಬೇಗನೇ ಉತ್ತರಿಸಿ.

ಹಿರೇಕೆರೂರು — ನೀರಜಾಕ್ಷಿ ಸಂದೇಹಿ

* * *

ನೀವು ತಿಳಿಸಿದಂತೆ ಆಲೂಗಡ್ಡೆಯ ಮುದ್ದೆ ಮಾಡಲು ಪ್ರಯತ್ನಿಸಿದೆ. ಚೆಂಡಿನಾಕಾರದ ಆ ಮುದ್ದೆ ಈಗ ನನ್ನ ಮಗನ ಕ್ರಿಕೆಟ್‌ಗೆ ಬಳಕೆಯಾಗುತ್ತಿದೆ. ಅದು ಒಡೆಯುತ್ತಲೇ ಇಲ್ಲ. ಈ ರೀತಿಯ ಕ್ರಿಕೆಟ್ ಬಾಲ್ ತಯಾರಿಸುವುದು ದುಬಾರಿ. ನಮ್ಮಂಥ ಮಧ್ಯಮವರ್ಗದವರಿಗೆ ಇಂತಹ ಮಾರ್ಗದರ್ಶನ ನೀಡಬೇಡಿ.

ಕಡೂರು — ಕಪಿಲ್‌ದೇವ್ ಬಲದೇವ್

* * *

ಪ್ರಿಯ ಓದುಗರೇ,

ಇಷ್ಟೆಲ್ಲಾ ಪತ್ರಗಳನ್ನು ಓದಿದ ಮೇಲೆ 'ಹೊಸರುಚಿ' ಅಂಕಣವನ್ನು ಮುಂದುವರೆಸಬೇಕೋ ಅಥವಾ ಇಲ್ಲಿಗೇ ನಿಲ್ಲಿಸಿಬಿಡಬೇಕೋ ಎಂದು ತಮ್ಮ ಅಭಿಪ್ರಾಯದ ಮೇಲೆ ಅವಲಂಬಿತನಾಗಿದ್ದೇನೆ. ಕಾರಣ, ತಮ್ಮ ಅಭಿಪ್ರಾಯ ಬರೆದು ತಿಳಿಸಬೇಕೆಂದು ಕೇಳಿಕೊಳ್ಳುತ್ತಿದ್ದೇನೆ.

— ಸಂಪಾದಕ


**ಭೋಜರಾಜ ಸೊಪ್ಪಿಮಠ**
ಕಿರಿಯ ತರಬೇತಿ ಅಧಿಕಾರಿ, ಶ್ರೀ ಜಗದ್ಗುರು ತೋಂಟದಾರ್ಯ
ಕೈಗಾರಿಕಾ ತರಬೇತಿ ಸಂಸ್ಥೆ, ಮಂಡಲಗಿರಿ - ೫೮೩ ೨೩೨
ಯಲಬುರ್ಗಾ ತಾಲೂಕು, ಕೊಪ್ಪಳ ಜಿಲ್ಲೆ


*೧೪ನೇ ಪುಟದಿಂದ (ಪಿಶಾಚಿ)*

ಇದೆಲ್ಲಾ ಸುಳ್ಳೆಂದು ಸ್ವತಃ ಪಿಶಾಚಿಗೂ ತಿಳಿದಿತ್ತು. ಹಿಂದ್‌ಳಿಗೂ ತಿಳಿದಿತ್ತು. ಆಕೆ ಬಲು ಬಿರುಸಿನಿಂದ ಪ್ರಶ್ನಿಸಿದಳು :

''ನಮ್ಮನ್ನೆಲ್ಲ ಹೆದರಿಸಿಕೊಂಡಿರಲಿಕ್ಕೆ ನೀನಾರು ? ನಾವೇಕೆ ನಿನಗೆ ಶರಣು ಬರಬೇಕು ? ನಾವೇಕೆ ನಿನ್ನ ತುಳಿತಕ್ಕೆ ನಮ್ಮ ತಲೆಗೊಡಬೇಕು ??''

ಹೀಗೆ ಅರಚುತ್ತ ಹಿಂದ್ ಪಿಶಾಚಿಯ ಹತ್ತಿರ - ಹತ್ತಿರವೇ ಸರಿಯತ್ತ ಹೋದಳು – ಅವನ ಹೃದಯಸ್ಥಾನಕ್ಕೆ ಹತ್ತಿರ ! ಭಯದಿಂದ ಪಿಶಾಚಿಯ ಮುಖದ ಮೇಲೆಲ್ಲ ಬೆವರೊಡೆಯಿತು. ಆತನೀಗ ಗುಡುಗುವ ಬದಲು ನಡುಗಲಾರಂಭಿಸಿದ. ಅವನ ಧೈರ್ಯವೆಂಬುದೆಲ್ಲ ಉಡುಗಿ ಹೋಗಿತ್ತು.

ಕೊನೆಯ ಉಪಾಯವೆಂದು ಪಿಶಾಚಿ ಹಿಂದ್‌ಳ ಮೈಮೇಲೇರಿ ದಾಳಿ ಮಾಡಲು ಪ್ರಯತ್ನಿಸಿದ. ಹಿಂದ್ ಹೆದರಲಿಲ್ಲ, ಹಿಂದೆ ಸರಿಯಲಿಲ್ಲ. ಇನ್ನೂ ಮುಂದೆ ನುಗ್ಗಿ ಅವನನ್ನು ಬಲು ಗಟ್ಟಿಯಾಗಿ ಅಮುಕಿ ಹಿಡಿದಳು. ಆ ಗಳಿಗೆಯಲ್ಲಿ ಅವಳ ಕಣ್ಣಿನೊಳಗೊಂದು ಕಿಡಿ ಮಿಂಚುತ್ತಿತ್ತು. ಅನೇಕ ಜನರ ಬದುಕಿಗೆ ನೆಮ್ಮದಿಯ ಭರವಸೆಯೊಡನೆ ಮುಂಬರಲಿದ್ದ ನಾಳೆಗಾಗಿ ಆಕೆ ಅವಡುಗಚ್ಚಿ ಹೋರಾಡಲು ನಿಂತ ಪರಿ ಕಣ್ಣಾರೆ ನೋಡುವ ಹಾಗಿತ್ತು !

ಓ ನನ್ನ ಮುದ್ದು ಮಗಳೇ, ತನ್ನ ಮಗನ ಭವಿಷ್ಯತ್ತಿಗಾಗಿ ಹಿಂದ್ ಆ ಪಿಶಾಚಿಯ ಕುರಿತಾದ ದಂತಕಥೆಗಳನ್ನೆಲ್ಲ ಹೊಸಕಿಹಾಕಿ ಸ್ವತಃ ಅವನೊಡನೆ ಮುಖಾಮುಖಿಯಾದ ಆ ಸನ್ನಿವೇಶವನ್ನು ನೀನು ನೋಡಿದ್ದರೆ...

ಇಡಿಯ ವಾತಾವರಣವೇ ಪ್ರಶ್ನಿಸುತ್ತ ನಿಂತಂತಿತ್ತು: ''ಮುಂದೇನು ? ಈ ಖಣಾಖಣಿಯಲ್ಲಿ ಗೆಲುವು ಯಾರಿಗೆ – ಪಿಶಾಚಿಗೋ, ಮನುಷ್ಯಜೀವಿಗೋ ?''

ಬೆಟ್ಟದ ಮೇಲಿನ ಹಕ್ಕಿಗಳೆಲ್ಲ ಹಾಡುವುದನ್ನೇ ನಿಲ್ಲಿಸಿದವು ; ಸೂರ್ಯನು ತನ್ನ ಉಸಿರು ಬಿಗಿಹಿಡಿದಂತೆ ಅವನ ಮುಖ ಬಿಳುಪಾದಂತೆ ಗೋಚರಿಸಿತು; ಗಿಡಮರಗಳು ಸ್ತಬ್ಧವಾಗಿ ನಿಂತುಬಿಟ್ಟವು; ಗಾಳಿ ಕೂಡ ತನ್ನ ಚಲನೆಯನ್ನೇ ನಿಲ್ಲಿಸಿಬಿಟ್ಟಿತು. ಆ ಪಿಶಾಚಿ ವಾಸವಾಗಿದ್ದ ಬೆಟ್ಟ ಕೂಡ ಪಿಶಾಚಿಯ ಜೀವವುಳ್ಳ ಹೃದಯದ ಮುಕ್ತಿಯ ಕ್ಷಣಕ್ಕಾಗಿ ಸಿದ್ಧಗೊಂಡು ನಿಂತಹಾಗಿತ್ತು.

ಪ್ರಿಯ ಚಿನ್ನಾ, ಹಿಂದಳ ಧಾಳಿಯಿಂದಾಗಿ ನೋಡುನೋಡುವಷ್ಟರಲ್ಲಿ ಪಿಶಾಚಿಯ ಎದೆಯಿಂದ ರಕ್ತದ ಚಿಲುಮೆ ಚಿಮ್ಮಿತು ! ಪಿಶಾಚಿಯೇ ಸೋತು, ಚಿಟ್ಟನೇ ಚೀರಿ, ಜೀವ ಬಿಟ್ಟು, ನೆಲಕ್ಕೆ ದೊಪ್ಪೆಂದು ಉರುಳಿಬಿಟ್ಟ ! ನಿಸರ್ಗವೆಲ್ಲ ಮುಕ್ತಿಯ ಮಧುರ ಗಾನದೊಡನೆ ತಲೆದೂಗಿ ಕುಣಿಯಿತು. ಅದು ಅದ್ಭುತ ವಿಜಯದ ಅನುಪಮ ಗಾನ. ಆ ವಿಜಯದ ಸಂತಸದಲ್ಲಿ ಬೀಸಿ ಬೀಸಿ ಬಂದ ಗಾಳಿಯಲೆಗಳ ತಾಳಕ್ಕೆ ತಕ್ಕಂತೆ ಬೆಟ್ಟವು ಕೂಡ ಕುಣಿಯಲಾರಂಭಿಸಿತು. ಪಕ್ಷಿಸಂಕುಲವೆಲ್ಲ ಬೆಟ್ಟದ ಕುಣಿತಕ್ಕೆ ಹಿಮ್ಮೇಳವೊದಗಿಸಿತು. ಸೂರ್ಯನ ಕಿರಣಗಳು ಒಂದೊಂದಾಗಿ ಬಂದು ಹಿಂದಳ ವಿಜಯಧ್ವಜಕ್ಕೆ ನಮನ ಸಲ್ಲಿಸಿದವು !

ಹಿಂದ್ ಮೈಕೊಡವಿ ಮೇಲೆದ್ದಳು. ಮೈಮೇಲಿನ ಅವಳ ಕಪ್ಪು ಬಟ್ಟೆಗಳೆಲ್ಲ ಹರಿದು ಹೋಗಿದ್ದವು . ಮೈಮೇಲೆಲ್ಲ ರಕ್ತದ ಕಲೆಗಳು ಹರಡಿಕೊಂಡಿದ್ದವು. ಆ ಗಳಿಗೆಯಲ್ಲಿ ಆಕೆ ತುಂಬ ಸುಂದರ ಹಾಗೂ ಮಹಾಶಕ್ತಿಶಾಲಿಯಾಗಿ ಕಾಣುತ್ತಿದ್ದಳು. ಎಂದಿನಿಂದಲೋ ಎಣ್ಣೆಯನ್ನೇ ಕಾಣದ ಅವಳ ಕಡ್ರನೆಯ ನೀಳ್ಗೂದಲು ಅವಳ ಹೆಗಲುಗಳ ಆಚೀಚೆ ಹರಡಿಕೊಂಡಿದ್ದವು. ಆ ಕೂದಲುಗಳಿಂದ ಒಂದೊಂದೇ ಹನಿ ರಕ್ತ ಒಸರುತ್ತಲಿತ್ತು. ಆಕೆ ಪಿಶಾಚಿಯ ಹೃದಯವನ್ನು ತನ್ನ ಅಂಗೈಗಳಲ್ಲಿ ಹಿಡಿದುಕೊಂಡು ಒಂದು ಕ್ಷಣ ಆಚೀಚೆ ದೃಷ್ಟಿ ತೂರಿದವಳೇ, ತನ್ನ ಮನೆಯಲ್ಲಿ ಹಾಸಿಗೆ ಹಿಡಿದಿದ್ದ ಮಗನನ್ನು ನೆನೆಯುತ್ತ ಸರಸರನೆ ಹೆಜ್ಜೆ ಹಾಕಿದಳು. ಅವಳ ಆಸುಪಾಸಿನ ಒಂದೊಂದು ವಸ್ತುವೂ ಹಾಡಿ ಹಾಡಿ ಕುಣಿಯುತ್ತ ಅವಳನ್ನು ಹಿಂಬಾಲಿಸಿದಂತೆ ಭಾಸವಾಗುತ್ತಲಿತ್ತು. ಆ ಗುಹೆಯ ಮುಂಭಾಗದಲ್ಲಿ ಹಿಂದೊಮ್ಮೆ ಈ ನಾಡನ್ನಾಳಿದ ದೊರೆ ಚಿರನಿದ್ರೆಯಲ್ಲಿದ್ದರೆ, ಹಳ್ಳಿಯ ಮೂಲೆಯೊಂದರಲ್ಲಿದ್ದ ಮುರುಕು ಮನೆಯಲ್ಲಿ ನಾಳಿನ ಮನುಷ್ಯ ಮೇಲೇಳಲು ಚಡಪಡಿಸುತ್ತಿದ್ದ...

ಮಗಳೇ, ಬಿರುಗಾಳಿ ನಿಂತಂತೆ ಕಾಣುತ್ತದೆ. ಸರಿ, ನನ್ನ ಕಥೆಯೂ ಮುಗಿಯಿತು. ಬಾ ಇನ್ನು, ಕೈಯಲ್ಲಿ ಕೈ ಹಾಕಿ ಕುಣಿಯೋಣ. ಇದು ನಮ್ಮದೇ ವಿಜಯ ತಾನೇ ? ಅಗೋ ನೋಡು, ನಮ್ಮ ಬೆಟ್ಟದ ಮೇಲೆ ಸೂರ್ಯನ ಸ್ವರ್ಣಕಿರಣಗಳು ಆನಂದದಿಂದ ನರ್ತಿಸುತ್ತಿವೆ. ಮೇಲಿನ ವಿಶಾಲ ಆಕಾಶವೂ ಪ್ರಸನ್ನಗೊಂಡು ಕಿಲ ಕಿಲ ನಗುತ್ತಿದೆ. ಬಾ, ನಾವೂ ನಗೋಣ; ನಲಿಯೋಣ.


ಅರಬ್ಬೀ ಮೂಲ : **ಮೊಹಮ್ಮದ ಅಬ್ದುಲ್ ವಲಿ, ಯೆಮೆನ್**
ಇಂಗ್ಲಿಷ್ ಮೂಲಕ ಕನ್ನಡಕ್ಕೆ : **ಡಾ|| ಬಿ.ಎ. ಸನದಿ**
ಹೆರವಟ್ಟಾ, ಕುಮಟಾ (ಉ.ಕ.) - ೫೮೧ ೩೩೨

ನನ್ನೂರು ಮೇಗರವಳ್ಳಿಯಲ್ಲಿ ಪ್ರತಿವರ್ಷ ವಿಜಯದಶಮಿಯ ದಿನದಂದು ಊರಹೊರಗಿನ ಮಲ್ಲಿಕಾರ್ಜುನ ಬೆಟ್ಟದಲ್ಲಿ ಬನ್ನಿಪೂಜೆ ಮಾಡಿದ ಮೇಲೆ ಮಕ್ಕಳು ಗಾಳಿಪಟ ಹಾರಿಸುತ್ತಾರೆ. ಯಾರು ಗಾಳಿಪಟವನ್ನು ಅತ್ಯಂತ ಎತ್ತರಕ್ಕೆ ಹಾರಿಸುತ್ತಾರೊ ಅವರಿಗೆ ಕ್ರಮವಾಗಿ ಪ್ರಥಮ ಮತ್ತು ದ್ವಿತೀಯ ಬಹುಮಾನ ಕೊಡುವ ಸಂಪ್ರದಾಯವಿದೆ. ನಾನು ನಮ್ಮಣ್ಣನು ಮಾಧ್ಯಮಿಕ ಶಾಲೆಯ ಒಂದನೇ ತರಗತಿಯಲ್ಲಿ ಓದುವಾಗ ಪ್ರಪ್ರಥಮವಾಗಿ ಗಾಳಿಪಟ ಹಾರಿಸುವ ಸ್ಪರ್ಧೆಯಲ್ಲಿ ಭಾಗವಹಿಸುವುದೆಂದು ತೀರ್ಮಾನಿಸಿದೆವು. ನಮ್ಮ ತಂದೆಯವರಲ್ಲಿ ನಮ್ಮ ಬಯಕೆಯನ್ನು ತೋಡಿಕೊಂಡೆವು. ನಮ್ಮ ತಂದೆಯವರು ಬಣ್ಣದ ಕಾಗದದಿಂದ ಗೂಡುದೀಪವನ್ನು, ಗಾಳಿಪಟವನ್ನು ಮಾಡುವುದರಲ್ಲಿ ನಿಸ್ಸೀಮರಾಗಿದ್ದರು. ದೀಪಾವಳಿ ಕಳೆದು ಹದಿನೈದು ದಿನದಲ್ಲಿ ನಡೆಯುವ ರಥೋತ್ಸವಕ್ಕಾಗಿ ಮನೆ ಮುಂದೆ ಮಾವಿನ ಸೊಪ್ಪಿನ ತೋರಣವನ್ನು ತೋರಣದ ಎರಡೂ ಬದಿಯಲ್ಲಿ ಬಾಳೆಮರ ಜಂಜರಿಗೆ ಮರಗಿಡಗಳನ್ನು ರಸ್ತೆ ಬದಿಯಲ್ಲಿ ಹುಗಿದು ನಿಲ್ಲಿಸುತ್ತಿದ್ದರು. ತೋರಣಕ್ಕೆ ಚಕ್ಕೋತದ ಕಾಯಿಗೆ ತೂತು ಕೊರೆದು ಚಕ್ಕೋತ ಕಾಣದಂತೆ ಕೆಂಪು ಅರಿಶಿನ ಚೆಂಡು ಹೂವು ಸಿಕ್ಕಿಸುತ್ತಿದ್ದರು. ಮನೆ ಮುಂದೆ ಒಂದು ಕಂಬವನ್ನು ಹೂತು ಇಡೀ ಊರಿಗೆಲ್ಲ ಕಾಣುವಂತೆ ಕಂಬದ ತುದಿಗೆ ಬಣ್ಣದ ಗೂಡುದೀಪ ನೇತುಬಿಡುತ್ತಿದ್ದರು. ಗೂಡು ದೀಪದೊಳಗೆ ಉರಿಯುವ ಹಣತೆ. ದೀಪದ ಬೆಳಕಿಗೆ ಗಾಳಿಗೆ ಅಲ್ಲಾಡುವ ಅದರ ಬಾಲವನ್ನು ನೋಡಲು ಬಹಳ ಸೊಗಸಾಗಿ ಕಾಣುತ್ತಿತ್ತು. ರಾತ್ರಿ ಹೊತ್ತಿನಲ್ಲಿ ಬಾಳೆ ಮರಕ್ಕೆ ಕಟ್ಟಿದ ದೆಬ್ಬೆಯ ಮೇಲೆ ಉರಿಯುವ ಹಣತೆ ದೀಪವನ್ನು ನೋಡಲು ಎರಡು ಕಣ್ಣುಗಳು ಸಾಲದಾಗಿತ್ತು. ನಮ್ಮ ತಂದೆ ಮಾಡಿದ ತೋರಣದ ಅಲಂಕಾರ ನೋಡಲು ಜನ ಕೆಳ ಪೇಟೆಯಿಂದ ಮೇಲುಪೇಟೆಗೆ ಬರುತ್ತಿದ್ದರು. ನಮ್ಮ ಮನೆಯ ಗೂಡುದೀಪ ತೋರಣ ಊರಿನ ಜನಗಳಿಂದ ಶಹಬಾಷ್‌ಗಿರಿಯನ್ನು ಪಡೆಯುತ್ತಿತ್ತು. ಅದರಿಂದಾಗಿ ನಮ್ಮ ತಂದೆಗಲ್ಲದಿದ್ದರೂ ನಮಗೆ ಮಕ್ಕಳಿಗೆ ಅವರ ಬಗ್ಗೆ ಬಹಳ ಹೆಮ್ಮೆಯಾಗುತ್ತಿತ್ತು.

**ಬಾಲ್ಯದ ನೆನಪುಗಳು**

# ಬಣ್ಣಕ್ಕೆ ಮರುಳಾದವರು



ನಮ್ಮ ತಂದೆಯವರು ನಮ್ಮಿಬ್ಬರಿಗೂ ಗಾಳಿಪಟ ಮಾಡಿಕೊಡಲು ಒಪ್ಪಲಿಲ್ಲ. ನಾನು ಚಿಕ್ಕವನೆಂದು ನನಗೀಗ ಬೇಡ ಮುಂದಿನ ವರ್ಷ ನೋಡೋಣ ಎಂದು ಮಂತ್ರಿಗಳು ಶಾಸಕರು ಸರ್ಕಾರಿ ಅಧಿಕಾರಿಗಳು ಸಾರ್ವಜನಿಕರಿಗೆ ಹೇಳಿದಂತೆ ಹೇಳಿ ಈಗ ಸದ್ಯಕ್ಕೆ ನಮ್ಮಣ್ಣನಿಗೆ ಪಟ ಮಾಡಿಕೊಡುವುದಾಗಿ ಹೇಳಿದರು. ನಮ್ಮಣ್ಣ ನನಗಿಂತ ಕೇವಲ ಎರಡು ವರ್ಷ ದೊಡ್ಡವನಾಗಿದ್ದ. ಅವನಿಗೆ ಪಟ ಹಾರಿಸಲಿಕ್ಕಾಗುತ್ತದೆ, ನನಗಾಗುವುದಿಲ್ಲವೆ, ಎಂದು ಹಟ ಮಾಡಿದೆ. ನಮ್ಮ ತಂದೆ ಸುತರಾಂ ಒಪ್ಪಲಿಲ್ಲ. ನಾನು ಕಣ್ಣೀರು ಹಾಕಿದೆ. ಬೊಬ್ಬೆ ಹಾಕಿದೆ. ನಮ್ಮ ತಾಯಿಯೊಂದಿಗೆ ದೂರು ಕೊಟ್ಟೆ. ಅದರಿಂದ ಪ್ರಯೋಜನವಾಗಲಿಲ್ಲ. ಅವರೂ ತಂದೆ ಹೇಳಿದಂತೆ ಹೇಳಿದರು. ಬಹಳ ದುಃಖವಾಯಿತು. ರಂಪಾಟ ಮಾಡಿದೆ. ನನ್ನ ರೋದನ ಅರಣ್ಯರೋದನವಾಯಿತಷ್ಟೆ. ಗಾಳಿಪಟ ಹಾರಿಸುವವನಿಗೆ ಪಟ ಮಾಡುವುದಕ್ಕೆ ಬರುವುದಿಲ್ಲವೆ, ಎಂದು ನಾನೇ ಖುದ್ದು ಜನವಾಣಿ ಪತ್ರಿಕೆಯನ್ನು ಹರಿದು ಪಟ ಮಾಡಲು ಸಿದ್ಧನಾದೆ. ಪ್ರಜಾವಾಣಿ ಪತ್ರಿಕೆ ಬರುವುದಕ್ಕಿಂತ ಮೊದಲು ಜನವಾಣಿ ಪತ್ರಿಕೆ ಹಳೇ ಮೈಸೂರಿನಲ್ಲಿ ಅಂದು ಪ್ರಸಿದ್ಧ ದಿನಪತ್ರಿಕೆಯಾಗಿತ್ತು. ಇತ್ತ ನಾನು ಪಟ ಮಾಡುವಾಗ ಅತ್ತ ನಮ್ಮ ತಂದೆಯವರು ಬಣ್ಣದ ಕಾಗದದಿಂದ ನಮ್ಮಣ್ಣನೊಂದಿಗೆ ಕೂತು ಪಟ ಮಾಡಹತ್ತಿದ್ದರು. ಅಷ್ಟಾದರೆ ಚಿಂತೆ ಇರಲಿಲ್ಲ. ಇಬ್ಬರೂ ''ಫ್ಯಾಕ್ಟರೀಲಿ ಗಾಳಿಪಟ ತಯಾರಾಗುತ್ತಿದೆ'' ಎಂದು ನನ್ನನ್ನು ನೋಡುತ್ತ ವ್ಯಂಗ್ಯ ಟೀಕೆಯ ಮಾತನಾಡಹತ್ತಿದರು. ಎಲ್ಲವನ್ನು ಮೌನವಾಗಿ ಸಹಿಸಿಕೊಂಡೆ. ಪಟವೇನೋ ತಯಾರಾಯಿತು. ಪಟ ಹಾರಿಸಲು ನೂಲುಂಡೆ ಬೇಕಲ್ಲ. ಅದಕ್ಕೇನು ಮಾಡುವುದು? ಪಟ ಮಾಡಿಕೊಡಲು ಒಪ್ಪದಿದ್ದವರು ನೂಲುಂಡೆ ಕೊಡಿಸಲು ಒಪ್ಪುತ್ತಾರೆಯೆ? ಅದಕ್ಕೂ ಒಂದಷ್ಟು ಕಣ್ಣೀರು ಹಾಕಿದೆ. ಯಾರೂ ಕ್ಯಾರೆ ಅನ್ನಲಿಲ್ಲ. ಎಲ್ಲಾ ನಗುವವರೆ. ನನ್ನ ಗೋಳನ್ನು ನೋಡಲಾರದೆ ಚಿಕ್ಕಮ್ಮ ಶಾರದ ನನ್ನನ್ನು ಸಮಾಧಾನಗೊಳಿಸಿ ನಾಲ್ಕಾಣೆ ಕೊಟ್ಟಳು. ನಾಲ್ಕಾಣೆಗೆ ಎರಡು ನೂಲುಂಡೆ ಬಂದಿತು. ಮೇಲುಪೇಟೆ ಬಂಗಲೆ ಬಯಲು ಹೆಸರಿಗೆ ತಕ್ಕ ಹಾಗೆ ಬಯಲಾಗಿದ್ದು ಅಲ್ಲೊಂದು ಇಲ್ಲೊಂದು ಪೊದೆಗಳಿದ್ದು ಭೂಮಿ ಇಳಿಜಾರಾಗಿದ್ದು ಪಟ ಹಾರಿಸಲು ಯೋಗ್ಯವಾಗಿತ್ತು. ಪಟ ಹಾರಿಸಿ ಏನಾದರೂ ದೋಷವಿದೆಯೆ ಎಂದು ಪ್ರಯತ್ನಿಸಿದೆ. ಅತ್ತ ಕಡೆಗೆ ನಮ್ಮಣ್ಣನೂ ಕೆಲವು ಮಂದಿ ಗೆಳೆಯರೂ ಪಟ ಹಾರಿಸುತ್ತಿದ್ದರು. ಕೆಲವು ಪಟಗಳು ಹಾರಾಡಲು ಪ್ರಯತ್ನಿಸುತ್ತಿದ್ದವು. ಕೆಲವಕ್ಕೆ ಬಾಲದ ಉದ್ದ ಕಡಿಮೆಯಾಗಿ ಗೋತಾ ಹೊಡೆದು ನೆಲ ಕಚ್ಚುತ್ತಿದ್ದವು. ನಮ್ಮಣ್ಣನ ಪಟದ ಸ್ಥಿತಿ ಅವಕ್ಕಿಂತ ಬೇರೆಯಾಗಿರಲಿಲ್ಲ. ನನ್ನದು ಸ್ವಲ್ಪ ಮೇಲಕ್ಕೆ ಹೋಗಿ

ಬಿಳುಮನೆ ರಾಮದಾಸ್

ಬಾಲದ ಉದ್ದ ಕಡಿಮೆಯಾದ್ದರಿಂದ ಅದೂ ಗೋತಾ ಹೊಡೆಯಹತ್ತಿತು. ತಕ್ಷಣವೇ ಅದನ್ನು ಕೆಳಗಿಳಿಸಿ ಮನೆಗೋಡಿಬಂದು ಮತ್ತಷ್ಟು ಬಾಲ ಅಂಟಿಸಿ ಹಾರಿಸಿ ನೋಡಿದೆ. ಆಶ್ಚರ್ಯ ಹುಟ್ಟಿಸುವಂತೆ ನನ್ನ ಗೆಳೆಯರ ಪಟಕ್ಕಿಂತ ಮೇಲಕ್ಕೆ ಒಂದು ಕಿಲೋಮೀಟರ್ ಏರಿ ಕೆರೆಯಲ್ಲಿ ಅವಲು ಮೀನು ಲೀಲಾಜಾಲವಾಗಿ ಆಡುವಂತೆ ಹಾರಾಡಿತು. ಬಹಳ ಖುಷಿಯಾಗಿ ಹೆಚ್ಚಿಗೆ ಹಾರಿಸಲು ಹೋಗದೆ ದಾರವನ್ನೆಳೆದು ಪಟವನ್ನು ಸುತ್ತಿಟ್ಟುಕೊಂಡೆ. ನನಗೆ ಬಹುಮಾನ ಖಚಿತವಾಗಿ ಬರುವುದೆಂದು ನನ್ನ ಮನಸ್ಸು ಹೇಳುತ್ತಿತ್ತು. ಹಿರಿಯರು ಇನ್ನೇನು ರಾಜಕೀಯ ಮಾಡುವರೋ ಎಂಬ ಭಯ ಬೇರೆ ನನ್ನನ್ನು ಕಾಡುತ್ತಿತ್ತು. ಮರುದಿನ ಮಧ್ಯಾಹ್ನ ಬೆಟ್ಟದಲ್ಲಿ ಪಟ ಹಾರಿಸುವ ಕಾರ್ಯಕ್ರಮವಿದ್ದುದರಿಂದ ಬೆಳಿಗ್ಗೆ ಎದ್ದವನೇ ಯಾರೂ ಇಲ್ಲದ ಸಮಯದಲ್ಲಿ ಬಂಗಲೆ ಬಯಲಿನಲ್ಲಿ ಪಟ ಹಾರಿಸಿ ನೋಡಿದೆ. ಆಗಲೂ ಪಟ ಚೆನ್ನಾಗಿ ಹಾರಿತು. ಬೆಳಿಗ್ಗೆ ಮುಂಚೆ ಪಟ ಹಾರಿಸಲು ಹೋದದ್ದಕ್ಕಾಗಿ ತಂದೆಯವರಿಂದ ಬೈಸಿಕೊಂಡೆ. ಅವರು ಬೈಯಲು ಅಣ್ಣನ ಚಿತಾವಣೆ ಇತ್ತು. ಬಣ್ಣದ ಪಟವಲ್ಲದೆ ದಿನಪತ್ರಿಕೆಯ ಪಟ ಮಾಡಿದ್ದುದು ತಂದೆಯವರ ಮತ್ತು ಅಣ್ಣನ ಆಕ್ರೋಶಕ್ಕೆ ಕಾರಣವಾಗಿತ್ತು. ಅವರು ನನ್ನ ಪಟವನ್ನು ಧ್ವಂಸ ಮಾಡದಿದ್ದುದು ನನ್ನ ಪುಣ್ಯ. ದಿನಪತ್ರಿಕೆಯ ನನ್ನ ಪಟ ಅಂದು ನನಗೆ ಚಿನ್ನವಾಗಿತ್ತು. ಗಳಿಗೆಗೊಮ್ಮೆ ಪಟವನ್ನು ಮುಟ್ಟಿನೋಡುವುದು, ಪಟದ ಬಾಲವೇನಾದರೂ ಹರಿದುಹೋಗಿದೆಯೋ ಎಂದು ನೋಡುವುದು ಮಾಡಹತ್ತಿದೆ. ಮಧ್ಯಾಹ್ನದ ಸಮಯ ನನ್ನ ಪಾಲಿಗೆ ಬಹಳ ತಡವಾಗಿ ಬರಹತ್ತಿತು. ಮಧ್ಯಾಹ್ನ ಹನ್ನೆರಡು ಗಂಟೆಗೆ ಊಟ ಮಾಡಿ ಪಟ ಹಿಡಿದು ಗೆಳೆಯ ರೊಂದಿಗೆ ಬೆಟ್ಟಕ್ಕೆ ಹೋದೆ. ದಿನಪತ್ರಿಕೆಯ ನನ್ನ ಪಟ ನೋಡಿ ಎಲ್ಲಾ ನಗುವವರೆ, ನನ್ನನ್ನು ಅವಮಾನ ಗೊಳಿಸುವವರೆ. ಅವಮಾನದಿಂದ ಮಾತನಾಡಲು ನನಗೆ ಬಾಯಿ ಇಲ್ಲವಾಗಿತ್ತು. ಓಡಲು ಸಿದ್ಧವಾಗಿ ನಿಂತ ರೇಸಿನ ಕುದುರೆಗಳಂತೆ ಎಲ್ಲರೂ ಪಟ ಹಾರಿಸಲು ಸಿದ್ಧತೆ ಮಾಡಿಕೊಳ್ಳಹತ್ತಿದ್ದರು. ಪಟಗಳು ಹಾರುವ ಸಂಭ್ರಮದಲ್ಲಿ ಒಂದಕ್ಕೊಂದು ತಳಿಕೆ ಹಾಕಿಕೊಂಡು ಗೋತಾಹೊಡೆಯದಂತೆ ಎಲ್ಲರಿಗಿಂತ ದೂರವಾಗಿ ನಿಂತು ಪಟ ಹಾರಿಸಿದೆ. ಪಟ ಹಾವು ಹೆಡೆ ಆಡಿಸಿದಂತೆ ಆಡುತ್ತಾ ಗಾಳಿಯಲ್ಲಿ ತೇಲುತ್ತಾ ಹಾರತೊಡಗಿತು. ನನ್ನ ಪಟಕ್ಕೆ ಸ್ಪರ್ಧಿಯಾಗಿ ಬಣ್ಣಬಣ್ಣದ ಪಟಗಳೂ ಹಾರಾಡತೊಡಗಿದವು. ಕೆಲವು ಅರ್ಧಕ್ಕೆ ಗೋತಾ ಹೊಡೆದು ಸುರುಳಿ ಸುತ್ತುತ್ತ ನೆಲಕಚ್ಚಿದರೆ ನನ್ನದು ಸೇರಿ ನಾಲ್ಕಾರು ಪಟಗಳು ಲೀಲಾಜಾಲವಾಗಿ ಹಾರ ತೊಡಗಿದವು. ಆಗಲೇ ನನ್ನ ಪಟ ಎಲ್ಲರ ಗಮನ ಸೆಳೆಯಿತು. ''ಅಲ್ಲಿ ನೋಡೋ, ಜನವಾಣಿ ಪತ್ರಿಕೆ ಮೇಲೆ ಹೋಗತಲ್ಲರೊ'' ಎಂದು ಯಾರೋ ಒಬ್ಬನೆಂದ. ಕಳೆಗುಂದಿದ ನನ್ನ ಮುಖದಲ್ಲಿ ನಗು ಮಿಂಚಿತು. ಅಧಿಕಾರ ಕಳಕೊಂಡವರು ಅಧಿಕಾರ ಇದ್ದವರ ಕಡೆಗೆ ಹೋಗುವಂತೆ ಗೆಳೆಯರುಗಳು ಹಿರಿಯರು ನನ್ನತ್ತ ಧಾವಿಸಿ ಬಂದರು.

ಅಣ್ಣನ ಪಟ ನನ್ನದಕ್ಕಿಂತ ಕೆಳಗಿತ್ತು. ನಾಲ್ಕಾರು




ಕಿಲೋಮೀಟರ್ ಮೇಲೆ ಹೋದ ಅಣ್ಣನ ಬಣ್ಣದ ಪಟ ಆದೇಕೊ ಏಕಾಏಕಿ ಗೋತಾ ಹೊಡೆಯುತ್ತ ಕೆಳಕ್ಕಿಳಿದು ಒಂದು ದೊಡ್ಡ ಮರಕ್ಕೆ ಸಿಕ್ಕಿಹಾಕಿಕೊಂಡು ನೇಣು ಹಾಕಿಕೊಂಡವರಂತೆ ನೇತಾಡಹತ್ತಿತ್ತು. ಗೆಳೆಯರು ದೊಡ್ಡವರು ಗೊಳ್ಳನೆ ನಕ್ಕರು. ನನಗಾದ ಸಂತೋಷ ಅಷ್ಟಿಷ್ಟಲ್ಲ. ಬೇರೆ ಪಟಗಳು ಮೇಲಕ್ಕೆ ಹಾರಿದರೂ ನನ್ನ ಪಟದಷ್ಟು ಮೇಲಕ್ಕೆ ಹಾರಲಿಲ್ಲ. ನನ್ನ ಸಂತೋಷಕ್ಕೆ ಎಣೆಯೆ ಇಲ್ಲ. ಬನ್ನಿ ಮಂಟಪದ ಪೂಜೆ ಮುಗಿದು ಊರ ಪಟೇಲರು ಅತ್ಯಂತ ಎತ್ತರಕ್ಕೆ ಹಾರಿದ ಪಟಕ್ಕೆ ಬಹುಮಾನ ಕೊಡಲು ಬಂದರು. ಕೆಲವರು ನನ್ನ ಪಟ ಎಲ್ಲದಕ್ಕಿಂತ ಮೇಲೆ ಹೋಗಿದೆ ಎಂದು ಹೇಳಿದರೆ ಇನ್ನೂ ಕೆಲವರು ಮತ್ತೊಬ್ಬನ ಬಣ್ಣದ ಪಟ ಮೇಲಕ್ಕೆ ಹೋಗಿದೆ ಎಂದು ಪಟೇಲರಲ್ಲಿ ವಾದ ಮಾಡಿದರು. ಮತ್ತೊಬ್ಬ ಗೆಳೆಯನ ಬಣ್ಣದ ಪಟ ಮೇಲಕ್ಕೆ ಹಾರಿದ್ದು ನಿಜ. ಆದರೆ ಯಾವ ಪಟ ಮೇಲಕ್ಕೆ ಹೋಗಿದೆ ಎಂದು ತೀರ್ಮಾನ ಮಾಡುವುದು ಕಷ್ಟದ ಕೆಲಸವಾಗಿತ್ತು. ಕಪ್ಪು ಬಿಳಿಯ ಬಣ್ಣದ ಪಟಕ್ಕಿಂತ ಕೆಂಪು ಹಸಿರು ಬಣ್ಣದ ಪಟ ಬಹಳ ಆಕರ್ಷಕವಾಗಿ ಕಾಣುತ್ತಿತ್ತು. ಪಟೇಲರು ಬಣ್ಣಕ್ಕೆ ಮರುಳಾಗಿ ಬಣ್ಣದ ಪಟಕ್ಕೆ ಪ್ರಥಮ ಬಹುಮಾನ ವೆಂದೂ ಜನವಾಣಿ ಪತ್ರಿಕೆ ಪಟಕ್ಕೆ ದ್ವಿತೀಯ ಬಹುಮಾನವೆಂದೂ ಘೋಷಿಸಿದರು. ನನಗೆ ಕೊಂಚ ನಿರಾಶೆಯಾದರೂ ನಮ್ಮಣ್ಣನಿಗೆ ಬಹುಮಾನ ಸಿಗದೆ

> ## ನಿಜವಾದ ಗೆಳೆಯ
>
> ಸುಖದಿ
> ಅರ್ಧ ಪಾಲು ನೀಡಿ,
> ಗೆಳೆಯನ
> ದುಃಖದಲಿ
> ಸಮಪಾಲು
> ಬೇಡುವಾತ!
>
> **ಶೋಭಾ ಪ್ರಮೋದ್**
> ಮಹಾಲಕ್ಷ್ಮೀ ಏಜೆನ್ಸೀಸ್
> ಮಾಣ್‌ಗಾಂವ್ - ೪೦೨ ೧೦೪, ಮಹಾರಾಷ್ಟ್ರ

ನನಗೆ ಸಿಕ್ಕಿತಲ್ಲ ಎಂದು ಸಂತೋಷವಾಯಿತು. ಪಟೇಲರು ನನಗೆ ದ್ವಿತೀಯ ಬಹುಮಾನವೆಂದು ಎಂಟಾಣೆ ಕೊಡಲು ಬಂದಾಗ ನಮ್ಮಣ್ಣ 'ಅವನು ಸಣ್ಣವನು, ಅವನು ದುಡ್ಡು ಕಳಕೊಳತಾನೆ, ಇಲ್ಲಿ ಕೊಡಿ' ಎಂದು ಕೈಚಾಚಿದ. ಕೈಗೆ ಬಂದದ್ದು ಬಾಯಿಗೆ ಬರದಾಯಿತೆ, ಎಂದು ನಾನು ಕಣ್ಣೀರು ಹಾಕುತ್ತ 'ನನ್ನ ಗಾಳಿಪಟ ಬಹುಮಾನ ಪಡೆದಿದೆ. ನಂಗೆ ದುಡ್ಡುಕೊಡಿ' ಎಂದು ಹಟಮಾಡಿದೆ. ಪಟೇಲರು ನನ್ನ ರಂಪಾಟ ನೋಡಲಾಗದೆ ಗೆದ್ದವನು ಅವನಲ್ಲವೇನೋ ಎಂದು ಅಣ್ಣನಿಗೆ ಹೆದರಿಸಿ ನನ್ನ ಕೈಗೆ ಎಂಟಾಣೆ ತಾಗಿಸಿದರು. ಬಂದ ಬಹುಮಾನವನ್ನು ಪಡೆಯಬೇಕಾದರೆ ಬಹಳ ಶ್ರಮವಹಿಸಬೇಕಾಯಿತು. ಬಹುಮಾನ ಪಡೆಯಲು ವಶೀಲಿಬಾಜಿ ಶಿಫಾರಸ್ಸು ಮಾಡಲಿಲ್ಲ ಎಂಬುದೊಂದೇ ಸಮಾಧಾನ ನನಗೆ. ಪಟ ಹಾರಿಸುವ ಕಾರ್ಯಕ್ರಮ ಮುಗಿದ ಮೇಲೆ ದಾರ ಹರಿದು ಪಟವನ್ನು ಗಾಳಿಗೆ ತೇಲಿ ಬಿಡುವುದು ಪದ್ಧತಿ. ಆದರೆ ನಾನು ಹಾಗೆ ಮಾಡಲಿಲ್ಲ. ನಿಧಾನವಾಗಿ ದಾರ ಎಳೆದು ಪಟವನ್ನು ಸುತ್ತಿಕೊಂಡು ಮನೆಗೆ ಬಂದೆ. ನನಗೆ ಬಹುಮಾನ ತಂದುಕೊಟ್ಟ ಪಟವನ್ನು ದಿನನಿತ್ಯ ನೋಡಬೇಕಲ್ಲ! ಆ ಹೊತ್ತಿಗೆ ಬೆಟ್ಟದಲ್ಲಿ ಯಾರೂ ಇರಲಿಲ್ಲ. ಬೆಟ್ಟ ಬಿಕೋ ಅನ್ನುತ್ತಿತ್ತು. ನಾನು ಮನೆಗೆ ಬರುವ ಹೊತ್ತಿಗೆ ಅಣ್ಣ ನಮ್ಮ ತಂದೆಯವರಿಗೆ ಸುದ್ದಿ ಮುಟ್ಟಿಸಿದ್ದ. ಅವರು ನಗುತ್ತ ನಿಂತಿದ್ದರು. ನನ್ನ ಗೆಲವು ಅವರ ಸೋಲಾಗಿತ್ತು. ನಾನು ಯಾರನ್ನೂ ಮಾತನಾಡಿಸಲಿಲ್ಲ. ಅವಮಾನ ಮಾಡಿದವರನ್ನು ಯಾಕೆ ಮಾತನಾಡಿಸುವುದು ಎಂದು ತಂದೆಯವರು ''ಕಡಿದಾಳ್ ಮಂಜಪ್ಪ ಗೆದ್ದರೆ? ಕೆಂಗಲ್ ಹನುಮಂತಯ್ಯ ಸೋತರೆ?'' ಎಂದು ಗಹಗಹಿಸಿ ನಕ್ಕರು. ನಾನು ಕಡ್ಡಿ ಪೈಲ್ವಾನನಂತಿದ್ದುದರಿಂದ ನನ್ನನ್ನು ಕಡಿದಾಳ್ ಮಂಜಪ್ಪ ಎಂದೂ, ಅಣ್ಣನಿಗೆ ಮುಂಗೋಪ ಇದ್ದುದರಿಂದ ಅವನನ್ನು ಕೆಂಗಲ್ ಹನುಮಂತಯ್ಯ ಎಂದೂ ಕರೆಯುವ ಹವ್ಯಾಸ ತಂದೆಯವರಿಗಿತ್ತು. ಬಹುಮಾನವಾಗಿ ಬಂದ ಎಂಟಾಣೆಯನ್ನು ಪ್ರತಿನಿತ್ಯ ನಮ್ಮ ಮನೆಯ ಪಕ್ಕದಲ್ಲಿದ್ದ ವೆಂಕಣ್ಣನ ಹೋಟೆಲಿನಲ್ಲಿ ಕೊಬ್ಬರಿ ಮಿಠಾಯಿ ಕೊಂಡು ತಿಂದು ಖರ್ಚುಮಾಡಿದೆ. ಅಣ್ಣ ತಂಗಿಯರಿಗೆ ಕೊಡಲಿಲ್ಲ. ಪಟ ಹಾರಿಸಲು ನೂಲುಂಡೆ ಕೊಳ್ಳಲು ಹಣ ಕೊಟ್ಟ ಚಿಕ್ಕಮ್ಮನಿಗೂ ನಾಲ್ಕಾಣೆ ವಾಪಸು ಮಾಡಲು ಮನಸ್ಸಾಗಲಿಲ್ಲ. ನಾಲ್ಕಾಣೆ ವಾಪಸು ಕೊಡಲು ಆಕೆ ನನಗೆ ಸಾಲ ಕೊಟ್ಟಿರಲಿಲ್ಲವಲ್ಲ! ಉದಾರವಾಗಿ ಕೊಟ್ಟಿದ್ದು ತಾನೆ? ಉದಾರವಾಗಿ ಕೊಟ್ಟದ್ದನ್ನು ಯಾರಾದರೂ ವಾಪಸ್ ಮಾಡುತ್ತಾರೆಯೆ? ಆಕೆ ಹಣ ಕೊಡುವಾಗ ಬಹುಮಾನ ಬಂದರೆ ನನ್ನ ಹಣ ವಾಪಸ್ ಮಾಡಬೇಕೆಂದು ಆಕೆಯೇನು ಷರತ್ತು ಹಾಕಿದ್ದಳೆ? ಹಾಗೇನು ಇಲ್ಲವಲ್ಲ!

ಅಂತು ಬಹುಮಾನ ಬಂದಿದ್ದರಿಂದ ನಾಲ್ಕಾರುದಿನ ಬಹಳ ಸಂತೋಷದಿಂದ ಇದ್ದೆ. ಊರಿನ ಜನಗಳು ನನ್ನನ್ನು ಬಹಳ ಗೌರವದಿಂದಲೇ ನೋಡಿದರು.

**ಬಿಳುಮನೆ ರಾಮದಾಸ್**
೧೪೦೧, ೩೭ 'ಬಿ' ಕ್ರಾಸ್, ೧೧ನೇ ಮುಖ್ಯ ರಸ್ತೆ
ಜಯನಗರ ೪ನೇ 'ಟಿ' ಬ್ಲಾಕ್, ಬೆಂಗಳೂರು - ೫೬೦ ೦೪೧

'ಉದ್ಯೋಗಂ ಪುರುಷಲಕ್ಷಣಂ' 'ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ' ಎಂಬ ಪುರಾತನ ವಾಕ್ಯಗಳನ್ನು ಕೇಳದವರಾರೂ ಇಲ್ಲ, ನಮ್ಮ ಭಾರತೀಯರಲ್ಲಿ. 'ಗೇದರೆ ಹಿಟ್ಟು, ಇಲ್ಲದಿದ್ದರೆ ಮಣ್ಣು' ಎಂಬುದು ಬಡಪಾಪಿ ರೈತನಿಗೂ ಗೊತ್ತಿರುವ ಜೀವನಮಂತ್ರ. ಪುರುಷಲಕ್ಷಣಗಳನ್ನು ತೋರಿ ಪುರುಷಸಿಂಹರಾಗತಕ್ಕವರೆಷ್ಟೋ ಇರುವರು. ಆದರೆ ಉದ್ಯೋಗವೇ ಇಲ್ಲ, ಅವರೇನು ಮಾಡಬೇಕು !

# ನಿರುದ್ಯೋಗ

ನಮ್ಮ ಮುಂದೆ ಸಾವಿರ ನಾಲಿಗೆಗಳನ್ನು ಚಾಚುತ್ತ ಘೋರರೂಪಿಯಾದ ಬಡತನವೆಂಬ ಪಿಶಾಚವು ಭಯಂಕರವಾಗಿ ನಿಂತಿರುವುದು. ವಿಚಾರಶೀಲರಾದವರೆಲ್ಲರೂ ಇದಕ್ಕೇನು ಮಂತ್ರವೆಂದು ಆಲೋಚಿಸುತ್ತಲಿರುವರು. ಈಚೆಗೆ ಈ ಬಡತನವು ಮತ್ತೊಂದು ಕರಾಳಾಕೃತಿಯನ್ನು ತಾಳಿರುವುದು. ಏನೆಂದರೆ, ನಿರುದ್ಯೋಗ. ವ್ಯವಸಾಯ, ವ್ಯಾಪಾರ, ಉದ್ಯೋಗ – ಯಾವ ಭಾಗದಲ್ಲಿ ಕಣ್ಣು ಹಾಕಿದರೂ ಒಂದೇ ಪಲ್ಲವಿಯಾಗಿ ಹೋಗಿದೆ. ಪೈಪೋಟಿ ಹೆಚ್ಚಿದೆ ಎಂಬ ಕೂಗು ಇಷ್ಟು ಸರ್ವಸಾಮಾನ್ಯವಾದರೆ ಮುಂದೇನು ಗತಿ? ವಕೀಲಿಯನ್ನು ಮಾಡೋಣವೇ – ಮಹಡಿಗೊಬ್ಬ ಲಾಯರು! ವೈದ್ಯರ ಕೆಲಸಮಾಡಿ ಹೊಟ್ಟೆಹೊರಕೊಳ್ಳೋಣವೇ ? ಕಾಫಿ ಕ್ಲಬ್ಬುಗಳು ನಿತ್ಯವೂ ವೃದ್ಧಿಯಾಗುತ್ತಿದ್ದರೂ ಇರುವ ವೈದ್ಯರಿಗೇ ಜೀವನವಿಲ್ಲದಹಾಗಿದೆ. ಸರಕಾರಿ ಉದ್ಯೋಗಕ್ಕೆ ಅರ್ಜಿ ಎಸೆಯೋಣವೇ ? ಕೆಲಸವೊಂದಿದ್ದರೆ ನೂರಾರು ಮಂದಿ ಅರ್ಜಿದಾರರು ! ಎಲ್ಲಿ ಹೋದರೂ ಒಂದೇ !

ಸಮಸ್ತ ದೇಶಕ್ಕೇ ಈ ಸಂಕಟವೊದಗಿರುವಾಗ ಪರಿಹಾರೋಪಾಯವು ಸುಲಭವಲ್ಲ. ನನ್ನ ಮಿತ್ರರೊಬ್ಬರು "ಸ್ವೈಟಾಗಿ ಸ್ವಾಮಿ, ನಿರುದ್ಯೋಗ ಹೋಗುತ್ತೆ " ಎನ್ನುವರು. ಮತ್ತೊಬ್ಬರು "ಶಾಲೆಗಳಲ್ಲಿ ಔದ್ಯೋಗಿಕ ಶಿಕ್ಷಣವನ್ನು ಕೊಟ್ಟರೆಲ್ಲಾ ಸರಿಹೋಗುತ್ತೆ – ನನ್ನೊಡನೆ ನೀವೂ ಹಾಗೇ ಕೂಗಿ, ಬನ್ನಿ " ಎನ್ನುವರು. ಇನ್ನೊಬ್ಬರು "ಮುಖ್ಯ ವೈರಾಗ್ಯ ಬೇಕು ದೇವರೂ, ಋಷಿಗಳೂ ಪೂರ್ವಕಾಲದಲ್ಲಿ ಹೇಗಿದ್ದರು ! ಸನ್ಯಾಸಿಗಳಾದರೆ ಈ ತಕರಾರೇ ಇಲ್ಲ!" ಈ ಮೂವರು ಮಿತ್ರರ ಉಪದೇಶಗಳಿಗಿಂತಲೂ ವೈದ್ಯರನ್ನು ಹುಡುಕಿಕೊಂಡು ವೈಕುಂಠಯಾತ್ರೆಯ ಮಾತ್ರೆಯನ್ನು ಹಿಡಿದು 'ವೈದ್ಯೋ ನಾರಾಯಣೋ ಹರಿಃ' ಎಂದು ತೆಗೆದುಕೊಳ್ಳುವುದು ಹಿತವಾಗಿ ತೋರುತ್ತದೆ. ಈ ವಿಷಯವು ಅಲ್ಪ ವಿಚಾರಕ್ಕೆ ಸಿಕ್ಕುವುದಿಲ್ಲ. ಇಪ್ಪತ್ತು ಕೋಟಿ ಜನರಿಗೆ ಅನ್ನ ವಸ್ತ್ರಾದಿಗಳನ್ನೊದಗಿಸತಕ್ಕ ಮಂತ್ರವು ತಪಸ್ಸಿಲ್ಲದೆ ಬಾಯಿಗೆ ಬರುವುದಿಲ್ಲ. ತಪಸ್ಸು ಮಾಡುವ ಯೋಗ್ಯತೆಯಿಲ್ಲದಿದ್ದಾಗ ಗಾಢವಾದ ಯೋಚನೆಯಾದರೂ ಬೇಕು. ಪುರಾಣಗಳಲ್ಲಿ ಅನೇಕ ಘೋರರೂಪಿಗಳೂ ಮಾಯಾವಿಗಳೂ ಆದ ರಾಕ್ಷಸರನ್ನು ದೇವತೆಗಳು ಸೋಲಿಸಿದ ವೃತ್ತಾಂತವುಂಟು. ಈ ಕಾಲದ ದೇವತೆಗಳು ಸೋಲಿಸಬೇಕಾದ ದೈತ್ಯಸಮೂಹವು ಮಹಾ ಭಯಂಕರವಾದುದು. ಮಾವಿನ ಹೀಚೇ ಮಂತ್ರಕ್ಕೆ ಬೀಳುವುದಿಲ್ಲ. ಮಾನವ ರಾಶಿಯೊಂದರ ಅನ್ನವಸ್ತ್ರಗಳು ಒಂದು ಸಾಧಾರಣ ಮಂತ್ರಕ್ಕೆ ಮೇಲಿನಿಂದ ಸುರಿಯುವುದಿಲ್ಲ.

### ವ್ಯಾಧಿಯ ಪ್ರಮಾಣ

ನಮ್ಮ ದೇಶದ ಜನಸಂಖ್ಯೆ ಮೂವತ್ತೆರಡು ಕೋಟಿಗಳೆಂದೆಲ್ಲರಿಗೂ ಗೊತ್ತು. ಈ ಮೂವತ್ತೆರಡು ಕೋಟಿಯ ಸಮುದಾಯಕ್ಕೂ ನಿರುದ್ಯೋಗದ ವ್ಯಾಧಿಯು ಹಿಡಿಯಬೇಕಾದರೆ ವ್ಯಾಧಿಯೆಷ್ಟು ಪ್ರಚಂಡವಾಗಿರಬೇಕು ! ಮೂವತ್ತು ಕೋಟಿ ಜನಗಳು ಅನ್ನವಸ್ತ್ರಗಳಿಗನುಕೂಲವಿಲ್ಲದೆ ಅತ್ತು ಗೋಳಿಟ್ಟಾಗ ಆ ಸಂಕಟರಾಶಿ ಎಷ್ಟು ಬೀಭತ್ಸವಾಗಿರಬಹುದು !

'ಉದ್ಯೋಗಂ ಪುರುಷಲಕ್ಷಣಂ', 'ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ' ಎಂಬ ಪುರಾತನ ವಾಕ್ಯಗಳನ್ನು ಕೇಳದವರಾರೂ ಇಲ್ಲ, ನಮ್ಮ ಭಾರತೀಯರಲ್ಲಿ. 'ಗೇದರೆ ಹಿಟ್ಟು, ಇಲ್ಲದಿದ್ದರೆ ಮಣ್ಣು' ಎಂಬುದು ಬಡಪಾಪಿ ರೈತನಿಗೂ ಗೊತ್ತಿರುವ ಜೀವನಮಂತ್ರ. ಪುರುಷಲಕ್ಷಣಗಳನ್ನು ತೋರಿ ಪುರುಷಸಿಂಹರಾಗತಕ್ಕವರೆಷ್ಟೋ ಇರುವರು. ಆದರೆ, ಉದ್ಯೋಗವೇ ಇಲ್ಲ. ಅವರೇನು ಮಾಡಬೇಕು ! ಎಷ್ಟು ಜನಕ್ಕೆ ಉದ್ಯೋಗವಿಲ್ಲವೋ ಅಂದರೆ ಕೆಲಸಮಾಡಲು ಶಕ್ತಿಯಿದ್ದು ಕೆಲಸವಿಲ್ಲದೆ ತಿರಿದುಂಡೋ ಉಪವಾಸವಿದ್ದೋ ಭೂಭಾರವಾಗಿರುವ ಜನತೆಯ ಭಾಗವನ್ನು ಈ ಪಟ್ಟಿಯು ತಿಳಿಸುವುದು.

ಒಟ್ಟು ಜನಸಂಖ್ಯೆಯೇನೋ ಮೂವತ್ತೆರಡು ಕೋಟಿ. ಕೆಲಸಕ್ಕೆ ಅವರೆಲ್ಲರೂ ಯೋಗ್ಯರಲ್ಲ. ಮಕ್ಕಳನ್ನೂ ಮುದುಕರನ್ನೂ ಅಂಗಹೀನರನ್ನೂ ಕಳೆದರೆ ಪ್ರಾಪ್ತವಯಸ್ಕರಾಗಿ ಕಷ್ಟಪಡಬಹುದಾದವರು ದೇಶವೆಲ್ಲಕ್ಕೂ ಒಟ್ಟು ೧೭,೮೦,೦೦,೦೦೦. ಇದರಲ್ಲಿ ೯೨,೦೦೦,೦೦೦ ಗಂಡಸರು, ೮,೬೦,೦೦,೦೦೦ ಹೆಂಗಸರು. ಈ ೧೭,೮೦,೦೦,೦೦೦ದಲ್ಲಿ ಕೆಲಸ ಮಾಡುತ್ತಿರುವವರು ೬,೪೦,೦೦,೦೦೦ ಅಥವಾ ಆರು ಕೋಟಿಯೇ ! ಮೂವತ್ತೊಂದು ಕೋಟಿಯ ಸಮೂಹದಲ್ಲಿ ಆರೂವರೆ ಕೋಟಿಯೇ ಕೆಲಸ ಮಾಡತಕ್ಕವರು ! ಇದೇನನ್ಯಾಯ ! ಉಳಿದ ೧೧,೪೦,೦೦,೦೦೦ ಎಲ್ಲಿ ಮಾಯವಾಯಿತು ! ಅದನ್ನು ನೋಡಿ.

| | ಗಂಡಸರು | ಹೆಂಗಸರು | ಒಟ್ಟು |
|---|---|---|---|
| ಕೆಲಸವಿಲ್ಲದವರು | ೩೦೬ ಲಕ್ಷ | ೧೫೩ ಲಕ್ಷ | ೪೫೯ ಲಕ್ಷ |
| ರೋಗಪೀಡಿತರು | ೧೫೩ ಲಕ್ಷ | ೧೭೬ ಲಕ್ಷ | ೩೨೯ ಲಕ್ಷ |
| ಅಜ್ಞಾನದಿಂದ ನಷ್ಟ | ೧೫೩ ಲಕ್ಷ | ೧೭೬ ಲಕ್ಷ | ೩೨೯ ಲಕ್ಷ |
| ಟೊಳ್ಳು ಬಸಿರುಗಳು | | ೨೫ ಲಕ್ಷ | ೨೫ ಲಕ್ಷ |
| ಒಟ್ಟು | ೬೧೨ ಲಕ್ಷ | ೫೩೦ ಲಕ್ಷ | ೧೧೪೨ ಲಕ್ಷ |

ಈ ನಾಲಕ್ಕನ್ನು ಗಮನಿಸಿ : ಕೆಲಸವಿಲ್ಲದಿರುವುದು, ರೋಗಗಳನ್ನು ಕಟ್ಟಿಕೊಂಡು ಔಷಧೋಪಚಾರಗಳಿಲ್ಲದೆ ನರಳುವುದು, ಅಜ್ಞಾನದಿಂದ ಪಶುಗಳಂತಿರುವುದು, ನಿರರ್ಥಕವಾದ ಗರ್ಭ ಧರಿಸುವುದು – ಈ ಅಜ್ಞಾನಕ್ಕೇನು ಕಾರಣ ? ವಿದ್ಯೆಯಿಲ್ಲ. ವಿದ್ಯೆಯೇಕಿಲ್ಲ? ಶಾಲೆಗೆ ಹೋಗಲನುಕೂಲವಿಲ್ಲ. ಏಕಿಲ್ಲ? ಬಡತನ ಸ್ವಾಮೀ ! ಹೊಟ್ಟೆಗೆ ಹಿಟ್ಟಿಲ್ಲ. ಇಷ್ಟು ಜನರೂ ಯಾರ ಕಷ್ಟದಿಂದ ಬದುಕಬೇಕು ? ಉಳಿದ ಆರೂವರೆ ಕೋಟಿ ಜನರ ಕಷ್ಟದಿಂದ. ಮನೆಯಲ್ಲಿ ಸಂಪಾದಿಸುವವನು ಒಬ್ಬನಾದರೆ ಅವನ ಮೇಲೆ ಬಿದ್ದು ತಿನ್ನುವವರು ಐದೈದು ಮಂದಿ. ಈ ಐದು ಮಂದಿಯನ್ನೂ ಸೋಳ್ಳೆಗಳೆಂದು, ತಿಗಣೆಗಳೆಂದೂ ದೂರಬೇಕಾಗಿಲ್ಲ. ತಪ್ಪು ಅವರದಲ್ಲ, ದೇಶದ್ದು ಅಥವಾ ಜನಸಮುದಾಯದ್ದು ಆ ತಪ್ಪು.

### ವೃತ್ತಿಗಳ ಅಂದಾಜು

ಈ ಮೂವತ್ತೆರಡು ಕೋಟಿಯೂ ಜೀವಿಸುವುದೇತರಿಂದ ? ೧೯೨೧ರಲ್ಲಿ ಖಾನೇಷುಮಾರಿ ಲೆಕ್ಕವನ್ನು ತೆಗೆದಾಗ ತೇಲಿದ ಫಲಿತಾಂಶವನ್ನು ನೋಡಿ. ಅದನ್ನು ಪರಿಷ್ಕಾರವಾಗಿ ತಿಳಿದುಕೊಳ್ಳಲು ಬೇಕಾದ ಹಿಂದಿನ ವೃತ್ತಾಂತವನ್ನು ಆಮೇಲೆ ವಿವರಿಸುತ್ತೇನೆ.

"ಭರತವರ್ಷವು ಮುಖ್ಯವಾಗಿ ವ್ಯವಸಾಯದ ದೇಶ. ವ್ಯವಸಾಯದಿಂದ ೨೨,೪೦,೦೦,೦೦೦ ಜನರು ಅಥವಾ ಶೇಕಡ ೭೧ ಜನ ಜೀವಿಸುವರು. ಪಶುಪಾಲನೆ ವೃತ್ತಿಯನ್ನೂ ಸೇರಿಸಿದರೆ ಶೇಕಡ ೭೩ ಆಗುವುದು. ಉದ್ಯೋಗಗಳಲ್ಲಿ ಶೇಕಡ ೧೦ ; ಆದರೆ ಸುವ್ಯವಸ್ಥೆಯುಳ್ಳ ಉದ್ಯೋಗಗಳಲ್ಲಿರುವವರು ಶೇಕಡ ೧ ಮಾತ್ರ. ಉಳಿದ ೯ ಓಬಿರಾಯನ ಕಾಲದ ಉದ್ಯೋಗಗಳಲ್ಲಿಯೇ ನಿರತರು. ವ್ಯಾಪಾರದಲ್ಲಿ ಶೇಕಡ ೬ ಜನ ನಿರತರು. ಅವರ ವ್ಯಾಪಾರವೇನೆಂದರೆ ವ್ಯವಸಾಯದಿಂದ ಬಂದುದನ್ನು ಕೊಂಡು ಮಾರುವ ಮಧ್ಯಸ್ಥವೇ ವಿನಾ ಬೇರೆ ಅಲ್ಲ. ಸಂಚಾರಸೌಕರ್ಯ (means of communication)ಗಳಲ್ಲಿ ಶೇಕಡ ೨ ಮಾತ್ರ. ದೇಶದ ಆಡಳಿತ ಮತ್ತು ರಕ್ಷಣೆಯಲ್ಲಿ ಶೇಕಡ ೧ ಮಾತ್ರ ಆಸಕ್ತರು. ಉಳಿದ ೭ವರೆಗೆ ತಿರಿದುಂಡುತನ, ಇಲ್ಲವೆ ನಿತ್ಯೈಕಾದಶಿ."

ಇದರ ಅರ್ಥವೇನು ? ವ್ಯವಸಾಯವೊಂದು ಬಿಟ್ಟರೆ ಉಳಿದ ಉದ್ಯೋಗ, ವ್ಯಾಪಾರ, ಸಂಚಾರಸಾಧನೆ, ಆಡಳಿತ, ಸೈನ್ಯಗಳೆಂಬ ಮಾರ್ಗಗಳು ನಮ್ಮ ಸೇಟರು ಹೇಳುವಂತೆ ಬಂದ್ ! ದೇಶದ ವಿಸ್ತಾರಕ್ಕೂ ಜನಸಂಖ್ಯೆಗೂ ತಕ್ಕಷ್ಟಿಲ್ಲವೇ ಇಲ್ಲ. ಏನಾಗಿವೆ ಇವೆಲ್ಲ? ಎಂದರೆ ಪರರ ಕೈಯಲ್ಲಿ ನಮ್ಮ ಕೈಲಿಲ್ಲ. ವ್ಯವಸಾಯದಿಂದ ಶೇಕಡಾ ೭೩ ಅಂದರೆ

'ಅಗಸ್ತ್ಯಭ್ರಾತಾ'

ನಿಜವಾಗಿ ಅಷ್ಟು ಜನವೂ ಭೂಮಿಯಿಂದ ಜೀವಿಸುವರೆ? ಖಾನೇಷುಮಾರಿಯ ಅಧಿಕಾರಿಗಳು ಲೆಕ್ಕವನ್ನೇನೋ ಮಾಡಿಬಿಟ್ಟರು. ಆದರೆ ಜೀವನವೆಂದರೆ ಒಪ್ಪೊತ್ತೂಟವಷ್ಟೋ ಅಷ್ಟೇ. ನಮ್ಮ ಭೂಮಿಯು ಸುಖಜೀವನವನ್ನು ಶೇಕಡ ೪೦ರಿಂದ ೫೦ಕ್ಕೆ ಕೊಡಬಲ್ಲದು. ಎಪ್ಪತ್ತುಮೂರು ಜನ ಮೇಲೆಬಿದ್ದಿದ್ದಕ್ಕೇ ಈಗಿನ ಅವಸ್ಥೆ – ಛಿದ್ರಛಿದ್ರ ಭೂಮಿಗಳು, ಸಾಲಸೋಲಗಳು, ತಂಟೆ ತಕರಾರುಗಳು, ಒಂದು ಹೊತ್ತಿನ ಉಪವಾಸಗಳು!

**ಹಿಂದಿನ ವೃತ್ತಾಂತ**

ದಿನೇ ದಿನೇ ಹೆಚ್ಚುತ್ತಿರುವ ನಮ್ಮ ದಾರಿದ್ರ್ಯಕ್ಕೆ ಕಾರಣಭೂತವಾದುದು ಇಂಗ್ಲಿಷರ ಆಡಳಿತವೆಂಬುದು ಈಗ ಸಿದ್ಧಾಂತವಾಗಿಹೋಗಿದೆ. ಭರತವರ್ಷದ ಸಾರವನ್ನು ಹೀರುವುದೇ ನಮ್ಮ ಆಡಳಿತದ ಗುಟ್ಟೆಂದು ಇಂಗ್ಲಿಷ್ ಪ್ರಮುಖರೇ ಪದೇ ಪದೇ ಒಪ್ಪಿಕೊಂಡಿರುತ್ತಾರೆ. ಆದುದು ಹೇಗೆ?




ಮುನ್ನೂರು ವರ್ಷಗಳ ಹಿಂದೆ ಮೊಗಲರ ಕಾಲದಲ್ಲಿ ನಮ್ಮದೆಷ್ಟು ವೈಭವ, ಎಷ್ಟು ಐಶ್ವರ್ಯ! ಧನರೂಪವಾಗಿದ್ದ ಸಂಪತ್ತು ವರ್ಷೇವರ್ಷೇ ಇಂಗ್ಲೆಂಡಿಗೆ ಸಾಗಿತು. ಇದೇ ಪ್ರಸಿದ್ಧವಾದ ಹೊನ್ನಿನ ಹೊಳೆಯೆಂಬುದು. ಇದುವರೆಗೆ ಎಷ್ಟು ಕೋಟಿ ರೂಪಾಯಿಗಳ ಧನ ಸಾಗಿತೋ ಲೆಕ್ಕ ಮಾಡುವುದೇ ಕಷ್ಟವಾಗಿದೆ. ಇನ್ನು ಇಂಗ್ಲಿಷರ ಆಡಳಿತದ ರೀತಿಯಲ್ಲಿ ನಮ್ಮ ವ್ಯಾಪಾರೋದ್ಯೋಗಗಳು ನಷ್ಟವಾದವು. ಆ ಜನರೆಲ್ಲರೂ ಭೂಮಿಯ ಮೇಲೆ ಬಿದ್ದರು. ನಮ್ಮ ಹಡಗುಗಳು ನಾಶವಾದ ಮೇಲೆ ಇಂಗ್ಲಿಷರು ತಮ್ಮ ದೇಶದ ಸಿದ್ಧಸರಕನ್ನು (manufactures) ತಮ್ಮ ಹಡಗುಗಳಲ್ಲಿ ಹೇರಿಕೊಂಡು ಬಂದು ದೇಶದಲ್ಲಿ ತುಂಬಿದರು. ತಮ್ಮ ಸಾಮಾನಿಗೆ ಸುಂಕವಿಲ್ಲದಂತೆ ಮಾಡಿಕೊಂಡರು. ಜನರಿಗೆ ತಮ್ಮ ಜೀವನದ ರೀತಿ ನೀತಿಗಳನ್ನು ಹೇಳಿಕೊಟ್ಟು ತಮ್ಮ ಸಾಮಾನು ಇಲ್ಲಿ ವ್ಯಾಪಾರವಾಗುವಂತೆ ಮಾಡಿಕೊಂಡರು. ಕತ್ತಿ ಚೂರಿಗಳೇನು, ಮದ್ಯಗಳೇನು, ಸಿಗರೇಟುಗಳೇನು! ಬಿಸ್ಕತ್ತುಗಳೇನು! ದೇಶದಲ್ಲೆಲ್ಲಿಯೂ ಅವರ ಸಾಮಾನೇ ಆಗಿಹೋಯಿತು. ನಮ್ಮ ತೌಡನ್ನು ಇಲ್ಲಿಂದೊಯ್ದು ಬಿಸ್ಕತ್ತುಗಳಾಗಿ ಮಾಡಿ ಇಲ್ಲಿ ಕಳುಹಿಸಿದಾಗ "ಇಂಗ್ಲಿಷ್ ಬಿಸ್ಕತ್ತೋ, ನೀರು ಸೋಕದೆ ಮಾಡಿದ್ದೋ!" ಎಂದು ಕುಣಿಯುತ್ತ ತಿನ್ನುವಂಥವರು ನಾವಾದೆವು. ಇನ್ನು ನಮ್ಮ ಸಮಸ್ತ ವ್ಯಾಪಾರೋದ್ಯೋಗಗಳು ಮಾಯವಾದುದೇನಾಶ್ಚರ್ಯ?

ಮತ್ತೊಂದು ಭಾಗವೂ ಉಂಟು. ಏನೆಂದರೆ ಸಾಧಕ ಸಾಮಗ್ರಿ (raw materials) ಯನ್ನಿಲ್ಲಿಂದ ಸಾಗಿಸುವುದು. ರೈಲುಗಳಿದಕ್ಕೋಸ್ಕರ ಸಿದ್ಧವಾದವು. ರೈಲಿನ ಛಾರ್ಜುಗಳು ಇದಕ್ಕನುಕೂಲವಾಗಿ ತೀರ್ಮಾನವಾದವು. ಇನ್ನೇನು – ಇಲ್ಲಿನ ತೌಡು ಹೊರಟು ಬಿಸ್ಕತ್ತಾಗಿ ಬಂತು, ಇಲ್ಲಿನ ಹತ್ತಿ ಹೋಗಿ ಬಟ್ಟೆಯಾಗಿ ಬಂತು, ಇತ್ಯಾದಿ.

ಇದನ್ನು ಭದ್ರಪಡಿಸುವುದಕ್ಕೆ ಇನ್ನೂ ಎಷ್ಟು ಸಾಧಕಗಳು! ಅಧಿಕಾರಗಳು ನಮಗಲ್ಲ, ಸೈನ್ಯ ನಮಗಲ್ಲ, ಸ್ವರಾಜ್ಯಕ್ಕೆ ಅಯೋಗ್ಯರು ನಾವು – ನಮ್ಮ ಪಾಲಿಗೆ ಕ್ಷಾಮಡಾಮರಗಳೇ ಗತಿ. ಸ್ಥಿತಿಗತಿಗಳನ್ನು ತಿಳಿದವರು ಸ್ವಲ್ಪ ಕೂಗಲು ಪ್ರಾರಂಭ ಮಾಡಿದರು. ಅವರಿಗೆ ಸಂಚಕಾರ - ಬಿರುದು ಬಿಲ್ಲೆಗಳು, ಹಲಕೆಲವು ಸರ್ಕಾರೀ ಉದ್ಯೋಗಗಳು. ಇನ್ನು ಸ್ಥಿತಿಯು ವೇದ್ಯವಾಗಿರಬಹುದು ಚಿತ್ತಕ್ಕೆ. ಭೂಮಿಗೆ ಹಿಂಸೆಯೊಂದು ಕಡೆ, ಜನಸಂಖ್ಯೆಯ ಅಭಿವೃದ್ಧಿಯೊಂದು ಕಡೆ, ಇತರ ಮಾರ್ಗಗಳು ಮುಚ್ಚಿರುವುದಿನ್ನೊಂದು ಕಡೆ.

**ಕ್ಷೇತ್ರಾಂತರ ವಾಸ**

ಇತರ ದೇಶಗಳಲ್ಲಿಯೂ ಜನಸಂಖ್ಯೆಯು ಅಧಿಕವಾಗುವುದುಂಟು. ಆದರೆ ಅವರೇನು ಮಾಡುವರು? ಪೃಥ್ವಿಯಲ್ಲಿ ಇತರ ಕ್ಷೇತ್ರಗಳನ್ನು ಹುಡುಕುವರು. ಇಂಗ್ಲಿಷರ ಸಾಮ್ರಾಜ್ಯ ಬೆಳೆದಿರುವುದೇ ಹೀಗೆ. ನಮಗೆ ಯಾವ ಕ್ಷೇತ್ರಗಳೂ ಇಲ್ಲ. ದಕ್ಷಿಣ ಆಫ್ರಿಕಾ, ಫಿಜಿ ಮುಂತಾದ ದೇಶಗಳಿಗೆ ನಮ್ಮವರೇನೋ ಹೊರಟಿರುವರು. ಆದರೆ ಅವರ ಗೋಳು ನಮ್ಮ ಶತ್ರುಗಳಿಗೂ ಬೇಡವೆನ್ನುವಂತಿದೆ. ಮಾನವನ್ನು ಕಳೆದುಕೊಂಡು ಕೂಲಿಯವರಾಗಿ ಹೊರಟರೆ ಹಲಕೆಲವು ದೇಶಗಳಿಗೆ ಹೊರಡಬಹುದು ಅಷ್ಟೇ. ಆದ್ದರಿಂದ ನಮಗೆ ಈ ಮಾರ್ಗವಿಲ್ಲವೇ ಇಲ್ಲ. ಪರಿಹಾರೋಪಾಯವನ್ನು ನಾವು ನಮ್ಮ ದೇಶದಲ್ಲಿಯೇ ಕಾಣಬೇಕು.

**ವ್ಯಾಪಾರೋದ್ಯೋಗಗಳು**

ಇವುಗಳನ್ನು ಪುನರುಜ್ಜೀವನಗೊಳಿಸಬೇಕೆನ್ನುವರಲ್ಲವೆ? ಸ್ವಲ್ಪ ಯೋಚಿಸೋಣ. ಇದುವರೆಗೂ ನಮ್ಮ ವ್ಯಾಪಾರವೆಂಥಾದ್ದು? ರೈತರು ಹಳ್ಳಿಗಳಲ್ಲಿ ಬೆಳೆಸುವ ಸಾಮಾನುಗಳನ್ನು ಕೊಂಡು ಪಟ್ಟಣಗಳಲ್ಲಿ ತಂದು ರೈಲು ಮೂಲಕ ಸಾಗಿಸುವುದೊಂದು ಕಡೆ – ಪರದೇಶಗಳಿಂದ ಸಿದ್ಧ ಪದಾರ್ಥಗಳನ್ನು ತರಿಸಿ ಮಾರುವುದಿನ್ನೊಂದು ಕಡೆ. ನಮ್ಮ ವ್ಯಾಪಾರ ಹಾಳಾಯಿತ್ತೆನ್ನುತ್ತೇವೆ, ನಿಜ. ಹಾಳುಮಾಡುತ್ತಿರುವವರು ಯಾರು? ನಾವೇ, ನಮ್ಮ ವರ್ತಕರೇ ಈ ವ್ಯಾಪಾರವನ್ನಿವರು ನಿಲ್ಲಿಸಿದರೆ ಬೇರೆ ಗತಿಯಿಲ್ಲ. ವ್ಯಾಪಾರದ ಮೇಲಧಿಕಾರವನ್ನು ಹೂಡುವ ಸಂಚಾರ ಸೌಕರ್ಯಗಳು ಅಂದರೆ ರೈಲುಗಳು, ಹಡಗುಗಳು ಪರಾಧೀನ. ಸಂಚಾರಸೌಕರ್ಯಗಳು ನಮ್ಮ ವಶವಾಗಬೇಕು ಎಂದರೆ ಆಡಳಿತವು ನಮ್ಮ ಕೈಗೆ ಬರಬೇಕು. ಹಡಗು ಕಟ್ಟುವ ಪ್ರಯತ್ನಗಳು ಬೊಂಬಾಯಿ, ಮದರಾಸು ರೇವುಗಳಲ್ಲಿ ಏನಾದವು! ಬಂದರು ಕೆಲವರು ದೇಶಭಕ್ತರು. ಸ್ವಲ್ಪವೂ ಸಹಾನುಭೂತಿಯನ್ನು ತೋರದೆ ಸರ್ಕಾರದವರು ವಿಘ್ನಗಳನ್ನೊಡ್ಡಿದರು, ಪ್ರಯತ್ನವನ್ನು ಹಂಚೀಕಡ್ಡಿ ಮುರಿದಹಾಗೆ ಮುರಿದರು. ಇನ್ನು ರೈಲುಗಳೋ! ರೈಲುಗಳಲ್ಲಿ ಪ್ರಯಾಣ ಮಾಡುವಾಗ ನಮಗಿರುವ ಅಧಿಕಾರವು ಪ್ರತಿಕ್ಷಣವೂ ಪ್ರತ್ಯಕ್ಷವಾಗುತ್ತಲಿದೆ. ರೈಲುಗಳು ನಮ್ಮ ಕೈಸೇರಿ ನಮ್ಮ ವ್ಯಾಪಾರದಿಂದ ದೇಶವು ಬರಿದಾಗದೆ ತುಂಬಬೇಕಾದರೆ ನಮ್ಮೆಲ್ಲರಿಗೂ ಪುನರ್ಜನ್ಮವಾಗಬೇಕು. ಆಗಲೂ ಏನೋ ಎಂತೋ!

ಇನ್ನು ಉದ್ಯೋಗಗಳ ವಿಷಯ. ಉದ್ಯೋಗಗಳಲ್ಲಿ ಎರಡು ವಿಧ: ದೊಡ್ಡವು, ಚಿಕ್ಕವು. ದೊಡ್ಡವೆಂದರೆ ಗಿರಣಿಗಳು, ಮಿಲ್ಲುಗಳು. ಅನೇಕರಿಗೆ ಗಿರಣಿಗಳೇ ಸರ್ವರೋಗ ಪರಿಹಾರಗಳಂತೆ ಕಾಣುವುವು. ಗಿರಣಿಗಳ ಚರಿತ್ರಯನ್ನೋ ವರ್ಣನೆಯನ್ನೋ ಕಂಡರೆ ಅವರು ಆ ಮಾತು ಹೇಳಲಾರರು. ಆಗಲೂ ಹೇಳಿದರೆ ಸ್ವಾರ್ಥದಿಂದ ಹೇಳಿದಂತಾಗುತ್ತದೆ. ಗಿರಣಿಗಳಿಗೆ ವಿಶೇಷ ಬಂಡವಾಳ ಬೇಕು – ವಿಶೇಷ ವಿದ್ಯಾವಂತರು ಬೇಕು – ವಿಶೇಷ ಯಂತ್ರಸಾಮಗ್ರಿ ಬೇಕು. ನಮ್ಮಲ್ಲಿ ಬಂಡವಾಳವಿಲ್ಲ; ವಿದ್ಯಾವಂತರೆಂದರೆ ನಮ್ಮ ಮನೆ ಮಾರಿ ನಮ್ಮವನನ್ನ ಅಮೆರಿಕಾಕ್ಕೆ ಕಳುಹಿಸಿ ಶಿಕ್ಷಿಸಿ ಕರೆಸಿಕೊಂಡಾಗ ಅವನ ರೀತಿಯ ಬದಲಾವಣೆ ಹಾಗಿರಲಿ, ಯಾವ ಸ್ಥಿತಿಗತಿಗಳಲ್ಲಿ ಅವನು ಕೆಲಸಮಾಡಬಲ್ಲನೋ ಆ ಸ್ಥಿತಿಗತಿಗಳು ಬಹುತರ ಇಲ್ಲಿಲ್ಲ, ಆದ್ದರಿಂದ ಭಾರಿ ಸಂಬಳ ತಿನ್ನುವುದೊಂದೇ ಉಳಿಯುವುದು; ಯಂತ್ರಸಾಮಗ್ರಿ ಪರದೇಶದಿಂದಲೇ ಬರಬೇಕು, ಬಂದಾಗ ಒಂದಕ್ಕೊಂದೂವರೆ ಬೆಲೆ, ಮಾರ್ಗಮಧ್ಯದಲ್ಲೋ ಇಲ್ಲಿ ಕೆಲಸ ಮಾಡುವಾಗಲೋ ಸ್ವಲ್ಪ ಮುರಿದರೆ ಬಿತ್ತು ಮೂಲೆಗೆ. ಇಷ್ಟು ವಿತರಣೆಯನ್ನೂ ಸಹಿಸಿಕೊಂಡು ಪ್ರಾರಂಭ ಮಾಡಿದರೂ ಬಂಡವಾಳ ಕೊಟ್ಟವನಿಗೆ ಬಂದಾಗ ಹೆಚ್ಚು ಲಾಭ, ಇಲ್ಲವಾದರೆ ಪಾತಾಳ. ಆಗ ಯಥಾಪ್ರಕಾರ ಷೋಕಿಯ ಜೀವನ ಅಂದರೆ ಅವನ ಲಾಭದ ದ್ರವ್ಯ ಪರದೇಶಕ್ಕೆ ಹೊರಡುವಿಕೆ, ಮತ್ತು ಸಹಸ್ರಾರು ಕೂಲಿಗಾರರಿಗೆ ನರಕ, ಇದು ಗಿರಣಿಗಳ ಅಥವಾ ದೊಡ್ಡ ಉದ್ಯೋಗಗಳ ವಿವರ. ಇದರ ಮೇಲೆ ಆಗಾಗ್ಗೆ ಕೂಲಿಗಾರರ ಮುಷ್ಕರ (strikes)ಗಳು, ಸರಕಾರದವರ ಗಡಿಬಿಡಿ. ನಮ್ಮ ದೇಶದಲ್ಲಿ ಹುಟ್ಟಿ ಬೆಳೆದ ಹತ್ತಿ ಕಾರ್ಖಾನೆಗಳೇಕೆ ಈಗ ನಮಸ್ಕಾರ ಹೊಡೆಯುತ್ತಿವೆ? ಸರ್ಕಾರದವರ ಸಹಾಯವೂ ಬೆಂಬಲವೂ ಅವರಿಗೆಷ್ಟಿದೆ? Cotton excise ಅಥವಾ ಹತ್ತಿಯ ಸುಂಕವೆಂಬ ಕಾನೂನನ್ನು ವಿಚಾರಿಸಿ ತಿಳಿಯತಕ್ಕುದು. ಸಹಾಯವು ಒಂದು ಬಿಸಿಲುಕುದುರೆಗೆ ಸಮಾನ.

ಸಣ್ಣಸಣ್ಣ ಉದ್ಯೋಗಗಳೆಂದರೆ ಎಲ್ಲರ ಮುಂದಿರುವುದು ನೂಲುವುದು. ಇದರ ಜೊತೆಗೆ ಪಶುಪಾಲನೆ, ಜೇನ್ನೊಣ ಸಾಕುವುದು, ರೇಷ್ಮೆ ಮುಂತಾದುವನ್ನು ಸೂಚಿಸುವರು. ಅಲ್ಪಸ್ವಲ್ಪ ಕೆಲಸವಾಗಿರುವುದು ನೂಲುವುದರಲ್ಲಿ. ಐದು ವರ್ಷಗಳು ಕೆಲವರು ಮಾತ್ರ ಪಟ್ಟ ಕೆಲಸದಿಂದ ಆದುದು ೨೫ ಲಕ್ಷ ರೂಪಾಯಿಗಳಷ್ಟು ಪ್ರಯೋಜನ. ನಾವೆಲ್ಲರೂ ಇದನ್ನೊಂದು ತಮಾಷೆಯಾಗಿ ಕಾಣುತ್ತೇವೆ. ಆದರೆ ಇಂಗ್ಲಿಷಿನವನು ಯಾರೂ ಅಖಾಡದಲ್ಲಿಳಿದು ಹಾಸ್ಯಮಾಡಿಲ್ಲ.

**ಆಡಳಿತ**

ಇತರ ದೇಶಗಳಲ್ಲಿ ಜನಸಂಖ್ಯೆಯ ಶೇಕಡ ೩೦ ಜನ ಆಡಳಿತ ಮತ್ತು ರಕ್ಷಣೆಯಲ್ಲಿ ನಿರತರಾಗಿರುತ್ತಾರೆ. ನಮ್ಮ ದೇಶದಲ್ಲಿ ಶೇಕಡ ೧ ಮಾತ್ರ. ಸೈನ್ಯ ನಮ್ಮದಲ್ಲ. ಅಧಿಕಾರಿಗಳು ನಮ್ಮವರಲ್ಲ. ಕೆಲಸ ನಡೆಯುವುದೇನೋ ನಮ್ಮಿಂದಲೇನೇ. ಗುಮಾಸ್ತೆ ಇದ್ದರೆ ತಾನೆ ಅಧಿಕಾರಿ! ಗುಮಾಸ್ತೆಗಳೆಲ್ಲರೂ ನಾವು, ಅಧಿಕಾರಿಗಳು ಅವರು. ಸೈನಿಕರು ನಾವು, ನಾಯಕರು ಅವರು. ದುಡಿದು ಕೆಲಸಮಾಡುವವರು ನಾವು, ಫಲವನುಣ್ಣುವವರು ಅವರು. ಇಷ್ಟು ತಂತ್ರವಿಲ್ಲದೆ ಸಾವಿರಾರು ಮೈಲಿ ದೂರದಲ್ಲಿರುವ ನಾಲಕ್ಕೂವರೆ ಕೋಟಿ ಜನರು ತಮ್ಮಲ್ಲಿ ಕೆಲವರನ್ನು ಇಲ್ಲಿಗೆ ಕಳುಹಿಸಿ ಮೂವತ್ತೊಂದು ಕೋಟಿಯಾದ ನಮ್ಮನ್ನು ಮೂಗುದಾರ ಹಾಕಿ ಬಿಗಿದಿರುವರೇ! ಚರಿತ್ರೆ ತಿಳಿದವರು ಹೇಳುವುದಿಲ್ಲವೇ! ನಾವೇ ಗೆದ್ದದ್ದು, ನಷ್ಟಪಟ್ಟವರೂ ನಾವೆ. ನಾವೇ ಸೋತದ್ದು. ದೇಶವನ್ನು ಅವರಿಗಾಗಿ ಗೆದ್ದದ್ದು ನಾವೇ. ಇಂತಹ ವಜ್ರಮೂರ್ಖರಾದ್ದರಿಂದಲೇ ಅಲ್ಲವೇ ನಮಗೀ ಸ್ಥಿತಿ! ಸರ್ಕಾರವನ್ನು ನಡೆಸುವವರು ನಾವೇ! ಅಪ್ಪಣೆ ಕೊಡುವವರು ಮಾತ್ರ ಅವರು.

ಇದು ತಿಳಿಯದೇ ಇಲ್ಲ ನಮಗೆ. ಆದರೆ ನಾಳೆ ಇಂಥಾ ಕಚೇರಿಯಲ್ಲಿ ಹದಿನೈದು ರೂಪಾಯಿನ ಕೆಲಸ ಖಾಲಿ ಇದೆಯೆಂದರೆ ಏನು ನಾಟಕ ಪ್ರಾರಂಭವಾಗುವುದು ! ಇದಕ್ಕಿಂತಲೂ ವಿಚಿತ್ರವೇನು ಹೇಳೋಣ. ನಮ್ಮವರು ನಮ್ಮೆದುರಿಗೆ ನಿಂತು ಬಿಳಿಯವನ ಅಪ್ಪಣೆಯಾಯಿತೆಂದರೆ ಗುಂಡನ್ನೇ ಹಾರಿಸಿ ಸುಟ್ಟುಬಿಡುವರು ! ಸ್ವರ್ಗದಲ್ಲಿರುವ ಮಾಂಧಾತ ಹರಿಶ್ಚಂದ್ರಾದಿಗಳೂ ಪೃಥ್ವೀರಾಜ ಶಿವಾಜಿಗಳೂ ಇದನ್ನು ನೋಡಿ ಹೇಗಿರುವರೋ ! ಆಗ ದೈತ್ಯರು ಬಂದು ತಮಾಷಾ ದೇಖೋ ಎಂದು ಅವರನ್ನು ಮೂದಲಿಸಿದರೆ ಅವರು ಸಂತತಿಯವರನ್ನು ಕಂಡು ನಗುವರೋ ಅಳುವರೋ ? ಹೊಟ್ಟೆಹುಣ್ಣಾಗುವಂತೆ ನಗುವರು, ಏಕೆಂದರೆ ಅಳುವ ಪ್ರಕೃತಿ ಅವರದಲ್ಲ.

ಅಧಿಕಾರಗಳೂ ಸೈನ್ಯವೂ ನಮ್ಮದಾದರೆ ನಿರುದ್ಯೋಗ ಕಡಿಮೆಯಾಗುವುದು ನಿಜ. ಅದಕ್ಕೆ ಹಾದಿ ಸ್ವರಾಜ್ಯ ಸಾಧನೆಯೆಂಬುದೂ ನಿಜ. ಆ ಸಾಧನೆಗೆ ಮಂತ್ರವೇನು ? ನನಗೊಂದು ಓಟನ್ನು ಕೊಡಿ ಎಂದು ಮದವಣಿಗನಂತೆ ಮೆರೆಯುವುದೇ ? ಇಲ್ಲದೆ ತ್ಯಾಗಮಾಡಿ ನನ್ನ ಕೈಲಾದಷ್ಟು ತಪಸ್ಸನ್ನಾಚರಿಸಿ ದೇಶದ ತಪೋರಾಶಿಗೆ ನನ್ನ ಕಾಣಿಕೆಯನ್ನು ಕೊಡುವೆನೆನ್ನುವುದೇ ?

**ಷೋಕಿನ ಬೆಡಗು**

ದೇಶವು ಬರಿದಾದುದಕ್ಕೆ ಅಥವಾ ಇಂಗ್ಲೆಂಡಿನ ಸಿದ್ಧ ಪದಾರ್ಥಗಳು ನಮ್ಮ ದೇಶದಲ್ಲಿ ವಿಕ್ರಯವಾದುದಕ್ಕೆ ಇಂಗ್ಲಿಷರು ನಮಗೆ ಕಲಿಸಿಕೊಟ್ಟ ಷೋಕು ಒಂದು ಕಾರಣವೆಂದು ಹೇಳಿದೆ. ಮೊದಲು ಅವರು ಕಲಿಸಿದರು. ಈಗ ನಾವು ಗುರುಗಳಿಗೇ ತಿರುಮಂತ್ರವನ್ನು ಕಲಿಸುವಷ್ಟು ಪಂಡಿತರಾಗಿದ್ದೇವೆ. ಇದರ ವಿಷಯವಾಗಿಯೇ ಒಂದು ಬ್ರಹ್ಮಾಂಡ ಪುರಾಣವನ್ನು ಬರೆಯಬಹುದು.

ನಮ್ಮೂರಿನಲ್ಲಿ ಬಹಳ ಧನವಂತರಾದ ಒಬ್ಬ ವೃದ್ಧರಿದ್ದರು. ಅವರು ತೀರಿಹೋಗಿ ಇನ್ನೂ ಆರು ವರ್ಷ ಕೂಡಾ ಇಲ್ಲ. ಅವರ ಆಸ್ತಿ ಅವರ ಮಕ್ಕಳಿಗೆ ಬಂತು. ಮನೆಯೇ ಬದಲಾಯಿಸಿಬಿಟ್ಟಿತು. ಮೋಟಾರುಗಳು ಓಡಾಡಿದ್ದೂ ಓಡಾಡಿದ್ದೇ. ವ್ಯಾಜ್ಯಗಳು ಹತ್ತಿ, ಸಾಲಗಳು ಹೆಚ್ಚಿ, ಕಳೆದ ವರ್ಷ ಪಾಪರ್ ಚೀಟಿಗರ್ಜಿಹಾಕಿದರು, ಮಕ್ಕಳು. ಧನವೆಲ್ಲಿ ಅಂದರೆ ನೋಡಿ ಮೋಟಾರು, ಸಿಗರೇಟು, ವ್ಹಿಸ್ಕಿ, ಬಿಸ್ಕತ್ತು, ಚಾಕೊಲೇಟ್‌ಗಳ ಮೂಲಕ – ವೈಟ್‌ವೇಲೈಡ್ಲಾ ಮತ್ತು ಸ್ಪೆನ್‌ಸರ್ ಕಂಪೆನಿಗಳಲ್ಲಿ. ಮಧ್ಯೆ ಸ್ವಲ್ಪ ಹಣ ಲಾಯರುಗಳಿಗೆ ಹೋಗಿ ಬಳಸಿಕೊಂಡು ಪುನಃ ಅದೇ ಸ್ಥಾನಕ್ಕೆ ಬಂತು. ಇದೊಂದೇ ಸಾಕು ಉದಾಹರಣೆ.

ಇಂಗ್ಲಿಷಿನವನಿಗೆ ಐನೂರು ರೂಪಾಯಿ ಸಂಬಳವಿದ್ದರೆ ಅವನು ಒಂದು ಕುದುರೆ ಸಾಕುವುದಕ್ಕೂ ಹಿಂದೆಗೆಯುತ್ತಾನೆ. ನಮ್ಮವನಿಗೈನೂರು ರೂಪಾಯಿ ಬರುವುದರೊಳಗೇ ಒಂದು ಮೋಟಾರು ಸಿದ್ಧವಾಗಿಬಿಡುತ್ತದೆ.

ಸಿಗರೇಟು ಸೇದುವವನು ಬೀಡಿಯವನ ಹೊಟ್ಟೆಯ ಮೇಲೆ ಹೊಡೆಯುತ್ತಾನೆ. ಚಾಕೊಲೇಟ್ ತಿನ್ನುವವನು ಮಿಠಾಯಿ ಅಂಗಡಿಯವನ ಹೊಟ್ಟೆಯಮೇಲೆ ಹೊಡೆಯುತ್ತಾನೆ – ಇತ್ಯಾದಿ, ಇತ್ಯಾದಿ. ಸ್ವಜನರ ಹೊಟ್ಟೆ ಹೊಡೆದು ತಿನ್ನುವವರಿಗೆ, ಪರರ ಕಷ್ಟದ ಫಲವನ್ನು ತಿನ್ನುವವರಿಗೆ, ತಮ್ಮ ನಡತೆಯಿಂದ ದೇಶದಲ್ಲಿ ಬಡತನವನ್ನು ಹೆಚ್ಚಿಸಿ, ಅವರು ಮಾಡುವ ಪಾತಕಗಳಿಗೆ ಕಾರಣನಾದವನಿಗೆ – ಮುಂದಿನ ಜನ್ಮವೆಂಥಾದ್ದಿರಬಹುದು ? ತೊಣಚಿಯೇ, ತಿಗಣೆಯೇ, ಸೊಳ್ಳೆಯೇ ?

ಒಂದು ಕಡೆ ದಿನಕ್ಕೆ ಒಂದೂವರೆ ಆಣೆಯನ್ನು ತಿನ್ನುವ ಮಾನವಸಮುದ್ರ, ಮತ್ತೊಂದು ಕಡೆ 'ಸರ್ವಂ ಭಕ್ಷಯಾಮಿ' ಸಾಗರಂ ಪಿಬಾಮಿ' ಎನ್ನುವ ಷೋಕೀಲಾಲರು ಕೆಲವರು – ವಿದ್ಯಾವಂತರು ದೇಶದ ನಾಯಕರು.

**ಸ್ವಾರ್ಥಪರತೆ**

ಈ ನೂತನ ವಿದ್ಯಾಸಂಪನ್ನರಲ್ಲೊಂದೇ ತುಂಬಿರುವುದು – ಸ್ವಾರ್ಥ. ಉಪದೇಶ ಮಾಡುವುದಕ್ಕೆ, ಕಾಡು ಹರಟೆ, ತಲೆಹರಟೆ ಹೊಡೆಯುವುದಕ್ಕೆ, ದೋಷಾರೋಪಣೆ ಮಾಡುವುದಕ್ಕೆ ಮುಂದಾಳುಗಳು ಇವರು. ಕೆಲಸಮಾಡುವವರನ್ನು ಮಾಡಲೀಸರು. ಎಲ್ಲಕ್ಕೂ ತಾವು ಮುಂದುಬಿದ್ದುಬರುವರು. ಎಲ್ಲ ಪ್ರಶ್ನೆಗಳಿಗೂ ಉತ್ತರ ಹೇಳುತ್ತೇವೆ ಎನ್ನುವರು. ನಮ್ಮದು 'ವಿಶಾಲ ದೃಷ್ಟಿ' ಎಂದು ಜಂಭವನ್ನು ತೋರುವ ಈ ಮಹಾಶಯರುಗಳಲ್ಲಿ ನಿರುದ್ಯೋಗದ ಮಾತೆತ್ತಿದರೆ ಅವರ ತಲೆಗೊಂದೇ ಹಿಡಿಯುವುದು – ಏನೆನ್ನುವಿರೋ ಅವರ ಪರಿವಾರದ ಗತಿ. ಕಾಲೇಜುಗಳಲ್ಲಿ ಓದಿ ಪ್ಯಾಸು ಮಾಡಿ ಬರುವ ಯುವಕರಿಗೆ ಮುಂದಿನ ಗತಿಯೇನು ಎಂದು ಯೋಚಿಸುವರು. ಅಂದರೆ ತಮ್ಮ ಸ್ವಂತಗುಂಪಿನ ಯೋಗಕ್ಷೇಮದ ವಿಚಾರ ಮಾತ್ರ ಅವರಿಗೆ ತಿಳಿಯುತ್ತದೆ.

ದೇಶಕ್ಕೆ – ಇಡೀ ಜನಾಂಗಕ್ಕೇ ಈ ವ್ಯಾಧಿ ಹತ್ತಿದೆಯೆಂಬುವುದನ್ನನೇಕರು ಅರಿಯರು. ಇಡೀ ಜನಾಂಗವೇ ಮುಳುಗಿಹೋಗುತ್ತಿರುವಲ್ಲಿ ತಾವು ಮಾತ್ರ ಉದ್ಧೃತರಾಗುತ್ತೇವೆಂದು ನಂಬಿರುವ ಈ ಗುಂಪಿನವರನ್ನು ಮಹಾತ್ಮಾ ಗಾಂಧಿಯವರೂ ಆಚಾರ್ಯ ಪ್ರಫುಲ್ಲ ಚಂದ್ರ ರಾಯರವರೂ ಕಂಡು ಹತಾಶರಾಗುವುದರಲ್ಲಿ ಆಶ್ಚರ್ಯವೇನು ?

■ ಅಗಸ್ತ್ಯಭ್ರಾತಾ

('ಒಕ್ಕಲಿಗರ ಪತ್ರಿಕೆ' ೧೯೩೮ರ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಲೇಖನ)

ಸಹಕಾರ : ಡಾ॥ ವಿಜಯ

*[ಲೇಖನವನ್ನು ಇಂದಿನ ಸನ್ನಿವೇಶಕ್ಕೆ ಮಾರ್ಪಡಿಸಿಕೊಂಡು ಓದಿಕೊಳ್ಳಬಹುದಲ್ಲವೇ ?]*



## ಸಾವಿರ ನೆರೆಯ ಬಲ

ಇಂದು ಏಳುವಳು ಅನಾಮಿಕ ಗೋರಿಯಿಂದ
ಮೆಟ್ಟಿ ದಾರಿಯ ಟಾರು ಹೊರಡುವಳು ರಭಸದಲಿ
ನೆಲನುಂಗುವಲೆಯಂತೆ ಉಬ್ಬರಿಸಿ
ಹನಿಹನಿಯಲ್ಲೂ ಸಾವಿರ ನೆರೆಯ ಬಲ,
ಕಾಲವನ್ನೇ ಕುಡಿದ ಬಂಡೆಗಳ ತಿಕ್ಕಿ ಮರಳು
ಮಾಡಿ.
ಇಂದು ಬಿಟ್ಟರೆ ಮಸಣ ಮತ್ತಿಲ್ಲ ಸುಡುಗಾಟ
ಮಣ್ಣ ಮನಸೊಳಗೆ ಬಣ್ಣ ಬದುಕ ಮೆರೆಸಿ
ನೂರು ಪಯಣಗಳ ಹೆಜ್ಜೆ ಗುರುತಿರುವ ರೆಕ್ಕೆಗಳ
ಮತ್ತೆ ಬಡಿದಂತೇ ಮೂಡಲಲಿ ಹೋಲಿಯಾಟ.

ಯಾರು ಸಾವರು ಸುತ್ತ ಹಸಿರೊಡೆದ ಗಳಿಗೆ
ಕಪ್ಪು ಅಕ್ಷರಗಳು ಬಿಳಿಹಾಳೆಗೆ ಮುಗಿಬಿದ್ದಂತೆ
ಅಂಕಿಗಳ ಆಕಾರ ಸಡಿಲಾಗಿ, ಲೆಕ್ಕ ಸುಕ್ಕಾಗಿ
ನಾವುನೀನುಗಳ ನಿನ್ನೆಯಲಿ ಹುಗಿದು
ಬೆರಳ ತುದಿಯಲಿ ಕಪ್ಪು ಚುಕ್ಕೆ ನಕ್ಕಿತು
ದೇಶದೇಹವ ತೊರೆದ ಸ್ಮೃತಿ ಇಕ್ಕಿ ಬೆಂಕಿಗೆ
ತಾನೆ ಬೆಳಕಾಗಿ ತೊಳೆದು ಸಂಸ್ಕೃತಿ ತೊನ್ನೆ
ಸುಪ್ಪರಿಗೆ ಮೂರ್ತಿಗಳು ಕರಗಿ ಅದಿರಾಗಿ
ಕಲ್ಲೊಡೆದ ಕೈಯೊಳಗೆ ಬಂತು ನಾಳೆಯ
ಸುಳುಹು.
ಬೇರಾಗಿ ತಾಯಾಗಿ ತನುವಾಗಿ ಆಳಾಗಿ
ಕೊರೆದಿಟ್ಟ ಕಲ್ಲ ಮಂಟಪದೊಳು ದಿವ್ಯ ಕಣ್ಣಾಗಿ
ಕೈದಿಯಾಗುಳಿದ ನೆನಪು ಇನ್ನಿಲ್ಲ
ಅವರಿವರ ಭಾಷೆಯಲಿ ದನಿಯರಸುವುದಿಲ್ಲ
ಇಂದು ಅನಾಮಿಕ ಗೋರಿಯಿಂದವಳು ಎದ್ದಂತೆ
ಈ ಪದ್ಯ ನಾಚಿ ತೆಪ್ಪಗಾಗಿ
ಕೇಳುವುದು ಕಾಣುವುದು ತಿಳಿಯುವುದು
ಸಾವಿರ ನೆರೆಯ ಬಲ.

■ ಕಮಲಾಕರ ಕಡವೆ

೭ ಕ್ಯಾಡೆಕ್ಸ್ ರ ಕಾಲೋನಿ, ಸ್ಟೇಷನ್ ರಸ್ತೆ, ನಹೇಲಿ, ಅಹ್ಮದ್‌ನಗರ - 414 002, ಮಹಾರಾಷ್ಟ್ರ

# ನಾವು ಕೊಂದ ಅಪ್ಪ

ಸುಕನ್ಯಾ ಕನಾರಳ್ಳಿ

ಅಪ್ಪ, ಮಕ್ಕಳ ಮಟ್ಟಿಗೆ, ಬದುಕಿದ್ದಾಗ ಹೇಗೋ ಸಾವಿನಲ್ಲೂ ಅಷ್ಟೇ ಉದಾರಿಯಾಗಿದ್ದಾನೆ. ಅವರ ಹೀನ ಲೆಕ್ಕಾಚಾರಸ್ತಿಕೆಯಿಂದ, ಸಣ್ಣತನದಿಂದ ಇನ್ನಿಲ್ಲದಂತೆ ನೊಂದಿದ್ದರೂ ಕಾಗದದಲ್ಲಿ ಮಾತ್ರ ಒಳ್ಳೆಯ ಮಾತುಗಳನ್ನೇ ಬರೆದಿದ್ದಾನೆ. ಸಾಮಾನಿನ ಪಟ್ಟಿ ಕೊಟ್ಟು ದುಡ್ಡು ಕೊಡುವುದನ್ನು ಉಪಾಯವಾಗಿ ಬರೆಯುವ ಸಣ್ಣ ಮನಸ್ಸಿನ ನೌಟಂಕಿಯ ದೊಡ್ಡ ದೌರ್ಜನ್ಯಗಳ ಬಗ್ಗೆ ಆಗೀಗ ಗೊಣಗುವುದನ್ನು ಬಿಟ್ಟರೆ ಸ್ಪಷ್ಟವಾಗಿ ದೂರಿದ್ದಿಲ್ಲ. ಸೋಂಭೇರಿಯ ಮನೆಯ ಅಸ್ತವ್ಯಸ್ತದಲ್ಲಿ ಹೊತ್ತುಹೊತ್ತಿಗೆ ತಿನ್ನಲೂ ಸಿಗದೆ ಬೆಚ್ಚನೆಯ ಭಾವಭದ್ರತೆಯಿಲ್ಲದೆ ನರಳಿದ್ದರೂ ಸಹ ಅದರ ಬಗ್ಗೆ ಪತ್ರದಲ್ಲಿ ಒಂದೂ ಮಾತಿರಲಿಲ್ಲ.

ಅಪ್ಪ ಸತ್ತು ನಮ್ಮನ್ನೆಲ್ಲ ಬೆಚ್ಚಿಬೀಳಿಸಿದ್ದಾನೆ. 'ನಂದೀಪುರದ ಕೆರೆಗೆ ಬಿದ್ದು ತೀರಿಕೊಂಡಿದ್ದಾನೆ' ಅಂತ ಅಕ್ಕ ಫೋನಿನಲ್ಲಿ ಹೇಳಿದಾಗ ಅನ್ನಿಸಿದ್ದನ್ನು ಯಾವ ಕ್ಲೀಷೆಗಳ ಹಂಗಿಲ್ಲದೆ ಹೇಳುವಂತಿದ್ದರೆ! ಎಷ್ಟೋ ಸಲ ಅಪ್ಪನ ಪಾಡು ನೋಡಲಾಗದೆ ಸಾವಿನ ಸಾಂತ್ವನ ಅವನಿಗೆ ಸಿಗಬಾರದೆ ಅಂತ ಗುಟ್ಟಾಗಿ ಹಾರೈಸಿಯೂ ಇದ್ದೆ. ಸಹಜ ಸಾವಿಗೆ ಕಾಯುವ ಪುಣ್ಯವಿಲ್ಲದೆ ತಾನಾಗಿ ಸಾವನ್ನು ತಬ್ಬಿಕೊಂಡು ತನ್ನ ಮಕ್ಕಳಲ್ಲಿದ್ದ ಕೊಲೆಗಡುಕನನ್ನು ಅಪ್ಪ ಜಾಹೀರುಗೊಳಿಸಿದ್ದಾನೆ. ಅವನ ಸಾವಿನ ಈ ತಕ್ಷಣದಲ್ಲಿ ತನ್ನ ಮೇಲೆ ಬರಬಹುದಾದ ಆರೋಪದಿಂದ, ಮನಸ್ಸಾಕ್ಷಿಯ ತಿವಿತದಿಂದ ತಪ್ಪಿಸಿಕೊಳ್ಳುವುದು ಹೇಗೆ ಎಂಬ ತುರ್ತು ಅವನ ಪರಿವಾರದ ಪ್ರತಿಯೊಬ್ಬರ ಮುಖವನ್ನು ಕಪ್ಪಿಟ್ಟುಗೊಳಿಸಿದೆ. ಪಾತಕದ ಪಾಲುದಾರರು ಒಬ್ಬರಿಗೊಬ್ಬರ ಮುಖವನ್ನೂ ನೋಡಲಾಗದೆ ತತ್ತರಿಸುತ್ತಿದ್ದಾರೆ.

ದೇಶಕ್ಕೆ ಸ್ವಾತಂತ್ರ್ಯ ಬರುವ ಮೊದಲ ಸ್ವಲ್ಪ ವರ್ಷಗಳಲ್ಲೇ ಬೆಂಚ್ ಮ್ಯಾಜಿಸ್ಟ್ರೇಟ್ ಆಗಿದ್ದ ಗಣ್ಯವ್ಯಕ್ತಿಯ ಅಧಿಕೃತ ಮೂರು ಮಕ್ಕಳಲ್ಲಿ ಕೊನೆಯವನು ನನ್ನ ಅಪ್ಪ. ಅಂಗಿ ಚಡ್ಡಿ ಹಾಕಿಕೊಂಡು, ಮುದ್ದಾದ ಕೆನ್ನೆಯನ್ನು ಊದಿಸಿಕೊಂಡು ಕುಟುಂಬದವರೊಂದಿಗೆ ತೆಗೆಸಿಕೊಂಡಿದ್ದ ಫೋಟೋ ಒಂದರಲ್ಲಿ ಮನೆಯ ತೊಲೆಗೆ ತೂಗುಹಾಕಿದ್ದ ದೊಡ್ಡ ಸೈಕಲ್ ಒಂದನ್ನು ನೋಡಿ ಕುತೂಹಲದಿಂದ ಇದೇನಪ್ಪಾ ಹೀಗೆ ಅಂತ ಕೇಳಿದಾಗ ಸುತ್ತ ಹತ್ತು ಹಳ್ಳಿಗಳಲ್ಲಿ ಯಾರೂ ಹೊಡೆಯದಿದ್ದ, ಇಟ್ಟುಕೊಂಡಿರದಿದ್ದ ಸೈಕಲ್ ಅಂತಕ್ಕಂಥಾದ್ದು ತನ್ನ ಹತ್ತಿರವಿದೆ ಎಂಬುದನ್ನು ಅವರಪ್ಪ ಫೋಟೋದಲ್ಲಿಯೂ ದಾಖಲುಗೊಳಿಸಿದ್ದ ಅಂತ ಗೊತ್ತಾಯ್ತು. ಅವ ಕುಳಿತಿದ್ದ ಠೀವಿಯೇ ಹೇಳುತ್ತಿತ್ತು, 'ನನ್ನ ಸೈಕಲ್, ನನ್ನ ಮನೆ, ನನ್ನ ಹೆಂಡತಿ, ನನ್ನ ಮಕ್ಕಳು...'

ಏಳನೇ ಕ್ಲಾಸೋ ಏನೋ ಓದಿದ ಅಪ್ಪನಿಗೆ ಒಬ್ಬಳಿಗಿಂತ ಹೆಚ್ಚು ಹೆಂಡತಿಯರಿದ್ದ ಅವನ ಅಪ್ಪನಿಂದ ದಮ್ಮಡಿಯೂ ಸಿಗಲಿಲ್ಲವಂತೆ. ಲಾರಿ ಒಂದರಲ್ಲಿ ಲೋಡರ್ ಆಗಿ ೧೬ನೇ ವರ್ಷಕ್ಕೇ ಕೆಲಸ ಶುರು ಮಾಡಿದವನದು ಮುಂದೆ ೫೦ ವರ್ಷಗಳಷ್ಟು ಸತತ ದುಡಿಮೆಯ ಕತೆ. ಹದಿನೆಂಟಕ್ಕೆ ಮದುವೆಯಾಗಿ ಹತ್ತೊಂಭತ್ತಕ್ಕೆ ತಂದೆಯಾಗಿ ಮೂವತ್ತೊಂದರ ಹೊತ್ತಿಗೆ ಹುಟ್ಟಿಕೊಂಡ ಏಳೋ ಎಂಟೋ ಮಕ್ಕಳಲ್ಲಿ ಬದುಕುಳಿದಿದ್ದವು ಐದು ಮಾತ್ರ. ಕೊನೆಯದು ಒಂಭತ್ತು ತಿಂಗಳ ಕೈಗೂಸಾಗಿದ್ದಾಗ ಹೆಂಡತಿ ನೇಣಿಗೆ ಶರಣಾಗಿ ಸತ್ತಳಂತೆ. ಐದು ಮಕ್ಕಳ ಸಮೃದ್ಧಿಯ ಗಂಡಿಗೆ ತಕ್ಕ ವಧು ಅಂತ ಕಂಡಿದ್ದು ಹತ್ತನೆಯ ವಯಸ್ಸಿಗೇ ಅಪ್ಪ ಅಮ್ಮರನ್ನು ಕಳೆದುಕೊಂಡು ಹದಿನೇಳರ ತನಕ ಅಣ್ಣನ ಆಶ್ರಯದಲ್ಲಿ ಕಾಲ ನೂಕಿದ್ದ ನನ್ನಮ್ಮ. ಅದಕ್ಕೂ ಸ್ವಲ್ಪ ಮೊದಲು ಯಾರೋ ಒಬ್ಬ ಡಾಕ್ಟರ್ ವರ ಅಮ್ಮನನ್ನು ನೋಡಲು ಬರುವುದಿತ್ತಂತೆ. ಯಾವ ತರದ ಚಿತಾವಣೆಯೋ ಅಂತೂ ಬಸ್ಸಿಳಿದ ಆ ಮಹಾಶಯ ಎಡಕ್ಕೆ ತಿರುಗುವ ಬದಲು ಬಲಕ್ಕೆ ತಿರುಗಿ ಎಡವಿಬಿದ್ದದ್ದು ಅಮ್ಮನ ಆ ಅಣ್ಣನ ಹೆಂಡತಿಯ ತವರುಮನೆಗೆ! ಆ ದೊಡ್ಡ ಮನೆಯ ಇನ್ನೊಬ್ಬ ಹೆಣ್ಣುಮಗಳನ್ನು ಸಾಂಗವಾಗಿ ವರಿಸಿ ಕರೆದುಕೊಂಡುಹೋದ ಮೇಲೆ ನಿರಾಸೆಯಿಂದ ಹ್ಯಾಪು ಮೋರೆ ಹಾಕಿಕೊಂಡಿದ್ದ ತಂಗಿಯನ್ನು ಸಮಾಧಾನ ಮಾಡಿ ಐದು ಮಕ್ಕಳ ಸಮೃದ್ಧಿಯ ಗಂಡಿಗೆ ಧಾರೆಯೆರೆದು ಆ ನನ್ನ ಸೋದರಮಾವ ನೆಮ್ಮದಿಯ ನಿಟ್ಟುಸಿರು ಬಿಟ್ಟನಂತೆ. ಸೇರಕ್ಕಿಯನ್ನು ಕಾಲಲ್ಲಿ ನೂಕಿ ಮನೆ ಒಳಗೆ ಕಾಲಿಟ್ಟ ನನ್ನಮ್ಮ ಅರ್ಧಗಂಟೆಯಲ್ಲಿ ಸೆರಗು ಕಟ್ಟಿ ನಿಂತು ಮನೆಯನ್ನು ಗುಡಿಸಿ, ನೀರು ಕಾಯಿಸಿ, ತೊಟ್ಟಿಲ ಕೂಸಿಗೆ ಸ್ನಾನ ಮಾಡಿಸಿ ರಾತ್ರಿಯ ಅಡಿಗೆಗೆ ಅಣಿಮಾಡಲು ನಡೆದಿದ್ದಳಂತೆ.

ಅಪ್ಪ ಎಂಥ ಗಂಡನಾಗಿದ್ದನೋ ಎನ್ನುವುದು ಬಾಲ್ಯದ ದಿನಗಳಲ್ಲಿ ಹೇಗೆ ತಿಳಿಯಬೇಕು ? ಮನೆ ತುಂಬ ಹತ್ತು ಮಕ್ಕಳಿದ್ದಾಗ ತಂದು ಹಾಕುವವ – ಮನೆ ನಿಭಾಯಿಸುವವಳು ಎಂಬ ಹಣೆಪಟ್ಟಿ ಮಾತ್ರ ನಮಗೆ ಕಾಣಿಸುತ್ತಿದ್ದದ್ದು. ಮಾತು ಮಾತಿಗೆ ಕ್ಯಾತೆ ತೆಗೆದು ಅಮ್ಮನೊಂದಿಗೆ ಜಗಳವಾಡುತ್ತಿದ್ದ ನನ್ನ ಮಲ ಅಣ್ಣಂದಿರು, ಅಮ್ಮನ ಕಣ್ಣೀರು, ಅಪ್ಪನ ಅಸಹಾಯಕತೆ – ಇವೆಲ್ಲವನ್ನೂ ನಡುಮನೆಯ ಮೂಲೆಯಲ್ಲಿ ನಿಂತು ಕಣ್ಣು ಪಿಳಿಕಿಸುತ್ತಾ ನೋಡುತ್ತಿದ್ದಾಗ ವಿಚಿತ್ರ ಯಾತನೆಯಾಗುತ್ತಿತ್ತು.

ನನಗಿಂತ ದೊಡ್ಡ ಮಕ್ಕಳೆಲ್ಲಾ ಸ್ಕೂಲಿಗೆ ಹೊರಟಾಗ ಇನ್ನೂ ಸ್ಕೂಲು ಸೇರಿರದ ನಾನು ಸತ್ತವರ ಮನೆಯಲ್ಲಿ ಅಳುವಂತೆ ಭೋರಿಡುತ್ತಿದ್ದೆನಂತೆ. ಕಾಟ ತಡೆಯಲಾರದೇ ಎರಡು ವರ್ಷ ಮುಂಚೆಯೇ ನನ್ನನ್ನೊಯ್ದು ಸುಳ್ಳಂಪಳ್ಳೇ ಹುಟ್ಟಿದ್ದ ತಾರೀಖನ್ನು ಬರೆಯಿಸಿ ಕೊನೆಗೂ ಸ್ಕೂಲಿಗೆ ಸಾಗಹಾಕಿದ. ಸ್ಕೂಲಿಗೆ ಸೇರಿಸ್ತೀನಿ ಹೊರಡು ಅಂತ ಅಂದ ದಿನ ನನಗೆ ಆಕಾಶದೆತ್ತರಕ್ಕೆ



ಬೆಳೆದಷ್ಟು ಸಂಭ್ರಮ. ಚಪ್ಪಲಿ ಇಲ್ಲದ ಕಾಲನ್ನು ಡೊಂಕಿಸಿ ಕುಣಿಯುತ್ತಾ ಅಪ್ಪನ ಕೈಬೆರಳನ್ನು ಹಿಡಿದು ನಡೆಯುವಾಗ ಅವನ ಪಂಚೆಯ ತುದಿ ಹೆಜ್ಜೆಯೊಂದಿಗೆ ನಲಿಯುತ್ತಿದ್ದದ್ದು ಮನಸ್ಸಿನಾಳದಲ್ಲಿ ಸ್ತಬ್ಧಚಿತ್ರದಂತೆ ಉಳಿದುಬಿಟ್ಟಿದೆ. ಬೋರ್ಡಿಂಗ್ ಸ್ಕೂಲಿನ ದಿನಗಳಲ್ಲಿ ಅಪ್ಪ ಬೈಕಲ್ಲಿ ನೋಡಲು ಬರುತ್ತಿದ್ದದ್ದು, ಜೊತೆಗೆ ಕ್ಯಾರಿಯರಿನಲ್ಲಿ ತರುತ್ತಿದ್ದ ರೊಟ್ಟಿ, ಪಲ್ಯ, ಬೆಣ್ಣೆ ಈಗ ಮನಸಿನಂಗಳದ ಮೆರವಣಿಗೆಯ ಚಿತ್ರಗಳು.

ಅಪ್ಪನೊಂದಿಗೆ ಸಲಿಗೆಯಾಗಲಿ, ಆಪ್ತತೆಯಾಗಲಿ ನನಗಿತ್ತು ಎಂದು ಹೇಳಲಾರೆ. ವ್ಯವಸ್ಥೆಯೊಂದರ ಅನಿವಾರ್ಯ ತುಣುಕುಗಳಂತೆ ನಾವಿದ್ದೆವು. ಅದರಲ್ಲೂ ಹೆಣ್ಣುಮಕ್ಕಳ ಮೇಲಿನ ಅಮ್ಮನ ಮ್ಯಾನೇಜರ್ಗಿರಿಯಲ್ಲಿ ಅಪ್ಪನೊಂದಿಗೆ ಯಾವುದೇ ಸಂವಾದಕ್ಕೆ ಆಸ್ಪದವಿತ್ತೇ ಎನ್ನುವುದೂ ಒಂದು ಪ್ರಶ್ನೆಯೇ. ಹತ್ತನೇ ಕ್ಲಾಸಿನ ನಂತರ ಸ್ಕೂಲು ಬಿಡಿಸಿ ಹೆಣ್ಣುಮಕ್ಕಳನ್ನು ಅಮ್ಮ ಅಡಿಗೆಮನೆಯಲ್ಲಿ 'ಅರೆಯುತ್ತಿದ್ದರಲ್ಲ', ಆವಾಗಲೂ ಅಪ್ಪ ಯಾಕೆ ಸುಮ್ಮನಿರುತ್ತಿದ್ದರು ಎನ್ನುವುದು ನಂತರದ ದಿನಗಳಲ್ಲಿ ಬರುತ್ತಿದ್ದ ಕೋಪ. ತನ್ನದಲ್ಲದ ಐದು ಮಕ್ಕಳನ್ನು ಸಾಕಿದಳು ಎಂಬ ಕೃತಜ್ಞತೆಯೋ, ಅಥವಾ ಹೇಳಿದರೂ ಉಳಿಗಾಲವುಂಟೇ ಎಂಬ ಅಸಹಾಯಕತೆಯೋ, ಅಂತೂ ಅಪ್ಪನ ಮೌನವು ಅಮ್ಮನ ದೌರ್ಜನ್ಯದಷ್ಟೇ ಅಸಹನೀಯ ಅಂತನ್ನಿಸುತ್ತಿತ್ತು.

ಅದೇನೋ ಹೇಗೋ ಉಳಿದ ಹೆಣ್ಣುಮಕ್ಕಳ ಈ ಪಾಡು ನನಗೆ ಬರಲಿಲ್ಲ. ಹಟ ಹಿಡಿದು, ಊಟ ಬಿಟ್ಟು, ಕಾಟ ಕೊಟ್ಟು, ಹೇಗೋ ಓದು ಮುಂದುವರೆಸುತ್ತಾ ಹೋದೆ. ಸಾಹಿತ್ಯ ಓದುವ ಗೀಳಿನ ದಿನಗಳಲ್ಲಿ ಮನೆಯ ಪರಿಸ್ಥಿತಿಯನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸುತ್ತಿದ್ದವಳಿಗೆ ಅಪ್ಪನ ಮೊದಲನೇ ಹೆಂಡತಿ ಯಾಕೆ ಸತ್ತರು ಅನ್ನುವ ಭಯಂಕರ ಕುತೂಹಲ ಶುರುವಾಯ್ತು. ಯಾರನ್ನು ಕೇಳಿದರೂ ಮಾಡಿದ ತಪ್ಪಿಗೆ ಉರುಳಿಗೆ ತಲೆ ಕೊಟ್ಟಳು ಎಂಬ 'ಸಹಜ ಸಿದ್ಧಾಂತ'ವನ್ನು ಪಠಿಸುತ್ತಿದ್ದರು. ಸ್ವಲ್ಪ ಕೆದಕಿದಾಗ ಅಪ್ಪನ ಸಂಶಯ ಬುದ್ಧಿಯ ಫಲವೋ ಅಥವಾ ನಿಜವಾಗಿಯೋ, ಆಕೆ ಮದುವೆಯಾಚೆಗಿನ ಸಂಬಂಧ ಹೊಂದಿದ್ದಳು ಅಂತ ಗೊತ್ತಾಯ್ತು. ತನ್ನ ಮನಸ್ಸನ್ನು, ಬದುಕನ್ನು ಪರೀಕ್ಷಿಸಿಕೊಳ್ಳದ ಅಪ್ಪ ಬೊಬ್ಬೆಹೊಡೆದು ಊರಿನ ಹತ್ತು ಜನರನ್ನು ಪಂಚಾಯ್ತಿ ಕೂರಿಸುವ ತರಾತುರಿಯಲ್ಲಿದ್ದಾಗ, ಯಾವುದಕ್ಕೆ ಹೆದರಿದಳೋ ಆ ತಾಯಿ ತಣ್ಣಗೆ ನಡೆದೇಬಿಟ್ಟಳು. ಐದು ಮಕ್ಕಳನ್ನು ಸಾಕಲು ಸಮಯವಾಗಲಿ, ಶಕ್ತಿಯಾಗಲಿ ಇಲ್ಲದ ಅಪ್ಪ ಮೂರು ತಿಂಗಳಲ್ಲಿ ಮತ್ತೊಬ್ಬಳನ್ನು ಮನೆ ತುಂಬಿಸಿಕೊಂಡ.

ಈಗ ನಲ್ವತ್ತಾರು ವರ್ಷಗಳ ನಂತರ ಅಪ್ಪನೂ ಅದೇ ದಾರಿ ಹಿಡಿದಿದ್ದಾನೆ. ಅವಳನ್ನು ಕೊಂದವರು ಯಾರೋ, ಆದರೆ ಇವನನ್ನು ಕೊಂದವರು ಮಾತ್ರ ಅವನ ಸ್ವಂತ ಮಕ್ಕಳು, ಸೊಸೆಯರು, ಅಳಿಯಂದಿರು. ವಿಷಮಗೆಟ್ಟ ಮದುವೆಯನ್ನು ತೊರೆದು ಅಮ್ಮ ಒಬ್ಬಳೇ ಬದುಕಲು ಆರಂಭಿಸಿದ್ದಳು. ಕೊನೆಯ ಹೆಣ್ಣು ಮಗಳ ಮದುವೆ ಮುಗಿಯುವ ತನಕ ಹೇಗೋ ಸಂಭಾಳಿಸಿ ಒಂದು ದಿನ ಎದುರಿಗೆ ತನ್ನ ಹೆಸರಲ್ಲಿದ್ದ ಪುಟ್ಟ ಮನೆಗೆ 'ತನ್ನ ಹಿಂದೆ ಯಾರೂ ಬರಬಾರದು' ಅಂತ ಹೂಂಕರಿಸಿ ನಡೆದೇಬಿಟ್ಟಳು. ಈ ಸ್ವಾತಂತ್ರ್ಯ, ಧೈರ್ಯವನ್ನು ನಿರೀಕ್ಷಿಸದೆ ಇದ್ದ ಅಪ್ಪ ಬೆಚ್ಚಿಬಿದ್ದ. ಉಸಿರುಕಟ್ಟಿಸಿ ಕೊಳಿಸುವ ಆ ಚಿಕ್ಕ ಊರಿನಲ್ಲಿ ಕಾಗೆ ಕೋಳಿಗಳೂ ಅವಳಿಗೆ ಸತೀಧರ್ಮ ಬೋಧಿಸಿದವು. ಕದಲಲಾರೆ ಎಂದು ಛಲ ಹೊತ್ತು ನಿಂತ ಅಮ್ಮ ಸುತ್ತಲ ನಾಯಿಗಳು ಬೊಗಳುವ ಮುನ್ನವೇ ಹರಿಹಾಯ್ದು ಬಾಯಿಬಡುಕಿ ಅಂತನ್ನಿಸಿಕೊಂಡಳು. ಅಡಿಗೆಮಾಡಿ ಕೈ ಸುಟ್ಟುಕೊಂಡು ಅಭ್ಯಾಸವಿಲ್ಲದ ಅಪ್ಪ ಕೊನೆಯ ಮಗನನ್ನು ಅವನ ಪಾಡಿಗೆ ಬಿಟ್ಟು ಅದೇ ಊರಿನಲ್ಲಿದ್ದ ಇನ್ನೊಬ್ಬ ಮಗನ ಮನೆಯಲ್ಲಿ ಇರಲಾರಂಭಿಸಿದ. ಅಷ್ಟರ ಮಟ್ಟಿಗೆ ಕಥೆ ಸುಖಾಂತ್ಯವೇ ಅಂತನ್ನಿಸಿತ್ತು. ಅಪ್ಪನ ಉಳಿದ ಖರ್ಚುಗಳನ್ನು ಕೆಲಮಟ್ಟಿಗಾದರೂ ನೋಡಿಕೊಳ್ಳಲು ತಯಾರಿದ್ದ ನನಗೆ ಅಪ್ಪನಿಗೆ ಎಲ್ಲೋ ಅನ್ನ ಆಶ್ರಯ ಸಿಕ್ಕಿದರೆ ಸಾಕಂತನ್ನಿಸಿತ್ತು.

ಈ ಮಧ್ಯೆ ತನ್ನ ಅಣ್ಣನ ಮಗ ಹೊಸದಾಗಿ ಕೊಂಡಿದ್ದ ಭೂಮಿಯನ್ನು ಹಸನು ಮಾಡಲು ಅಪ್ಪ ಅಲ್ಲಿಯೇ ನೆಲೆ ನಿಂತ. ಅಪ್ಪನ ದುಡಿತದಿಂದ ನಾಲ್ಕು ವರ್ಷಕ್ಕೇ ತೋಟ ನಳನಳಿಸುವಂತಾದಾಗ 'ನಿಮ್ಮನ್ನು ಯಾವ ಕಾಲಕ್ಕೂ ನಾನು ನೋಡಿಕೊಳ್ತೀನಿ' ಅಂತೆಲ್ಲಾ ಮಸ್ಕಾ ಹೊಡೆದು ದುಡಿಸಿಕೊಂಡಿದ್ದ ಆ ನಗರವಾಸಿ ಜಮೀನ್ದಾರ, ಅವನ ಶಕುನಿ ಅಣ್ಣ, ಮತ್ತವನ ಕುತಂತ್ರಿ ಮಾವಂದಿರು ಅಪ್ಪನ ಮೇಲೆ ಇಲ್ಲದ ಅಪವಾದ ಹೊರಿಸಿ ತಮ್ಮೆಲ್ಲಾ ತರದ ಮೋಜುಗಳಿಗೆ ನೆಲೆಯಾಗಿದ್ದ ತೋಟದ ಮನೆಯಿಂದ ಮತ್ತು ತೋಟದಿಂದಲೇ ಅಪ್ಪನನ್ನು ಗಡಿಪಾರು ಮಾಡಿದರು. ಎಲ್ಲ ನೆಲೆಗಳೂ ತಪ್ಪುತ್ತಿದ್ದ ಹಂತದಲ್ಲಿ ಭೂಮಿಯನ್ನು ಎದೆಗವಚಿಕೊಂಡು ದುಡಿಯುತ್ತಾ ನೆಲೆ ಕಾಣಲು ಯತ್ನಿಸುತ್ತಿದ್ದ ಅಪ್ಪನ ಮನಸ್ಸು ಮೂರಾಬಟ್ಟೆಯಾಯ್ತು. ಹುಟ್ಟಿದೂರಿಗೆ ತನ್ನ ಸೇವೆ ಅಂತಂದುಕೊಂಡು ತಾನೇ ಓಡಾಡಿ ಮುಂದೆನಿಂತು ಚಂದಾ ಎತ್ತಿ ಕಟ್ಟಿಸಿದ ದೇವಸ್ಥಾನದ ಪಾಳಿಯ ಮೂಲೆಯಲ್ಲಿದ್ದ ಒಂದು ರೂಮಿನಲ್ಲಿ ಇರಲಾರಂಭಿಸಿದ.

ಅವನಿಗೆ ಅದೇ ಊರಲ್ಲಿ ಇಬ್ಬರು ಮಗ ಸೊಸೆಯರಿದ್ದರು. ಐದು ಗಂಡುಮಕ್ಕಳಲ್ಲಿ ಇಬ್ಬರು ಅವರದ್ದೇ ಕಾರಣಗಳಿಗೆ ಸಹಜವಾಗಿಯೋ ಅಲ್ಲವೋ ಸತ್ತಿದ್ದರು. ಮೊದಲನೆಯವನು ಐವತ್ತರ ಆಚೀಚೆ ಸತ್ತರೆ, ಇನ್ನೊಬ್ಬ ನಲ್ವತ್ತನ್ನು ದಾಟದೇ ಗೊಟಕ್ ಅಂದಿದ್ದ. ಕುಡಿತ, ಕುಡಿತ...., ಆ ಊರಿನ ಹೆಚ್ಚುಕಮ್ಮಿ ಎಲ್ಲಾ ಗಂಡಸರೂ ಕುಡಿಯದೇ ದಿನನಿತ್ಯದ ಕೆಲಸವನ್ನೂ ಮಾಡದ ಮಹಾ ಮುಖೇಡಿಗಳು. ಇನ್ನೊಬ್ಬ ಮಗ ಮೂವತ್ತು ವರ್ಷದ ಹಿಂದೆ ಆಸ್ತಿಭಾಗ ತೆಗೆದುಕೊಂಡು ಪಟ್ಟಣ ಸೇರಿ ತಾನು ಎಲ್ಲ ರೀತಿಯಲ್ಲಿ ಸುಖವಾಗಿದ್ದೇನೆ ಎಂದು ತನ್ನನ್ನೂ ಇತರರನ್ನೂ ನಂಬಿಸಲು ಆದಷ್ಟೂ ಪ್ರಯತ್ನಿಸುತ್ತಿದ್ದ. ಅಲ್ಲೇ ಇದ್ದ ಕೊನೆಯ ಮಗ ದುಡಿಯಲೂ ಆಗದೆ, ಮನಸ್ಸೂ ಇಲ್ಲದೆ ತನ್ನದೇ ವ್ಯಸನಗಳಲ್ಲಿ ಮುಳುಗಿಹೋಗಿದ್ದ. ಅಲ್ಲಿನ ಸೊಸೆಯರಲ್ಲಿ ಒಬ್ಬಳು ನೌಟಂಕಿ, ಇನ್ನೊಬ್ಬಳು ಶತಸೋಂಬೇರಿ, ಮೊಮ್ಮಕ್ಕಳು ತಾತನ ಮುಖಪರಿಚಯ ಮಾತ್ರ ಮಾಡಿಕೊಂಡಿದ್ದವರು. ಇದು ಅಪ್ಪನ ಪರಿವಾರ.

ಸತ್ತ ಅಪ್ಪನ ಮುಖವನ್ನು ನೋಡುತ್ತಾ ನಿಂತಿದ್ದೇನೆ. ಎಷ್ಟೋ ವರ್ಷಗಳಿಂದ ಅವನ ಮುಖದ ಮೇಲೆ ನಾನು ನೋಡಿಲ್ಲದ ನಗುವೊಂದು ಈಗ ಅವನ ಸುಕ್ಕುಗಳನ್ನು ಕಡಿಮೆ ಮಾಡಿ, ಎಂಭತ್ತರ ಹತ್ತಿರವಿದ್ದ ಅವನ ವಯಸ್ಸನ್ನು ಕುಗ್ಗಿಸಿದೆ. ಸ್ವಲ್ಪವೂ ಕುಹಕವಿಲ್ಲದ ನಗು ಅದು. 'ಸಧ್ಯ ನಾನು ಗೆದ್ದೆ' ಎಂಬ ನೆಮ್ಮದಿಯಲ್ಲಿ ಮುಖ ಅರಳಿಕೊಂಡಂತಿದೆ. ಒಂದು ವಾರದಿಂದ ಒಂದೇ ಸಮನೆ ಕಾಗದಗಳನ್ನು ಬರೆಯುತ್ತಿದ್ದನಂತೆ. ಅಷ್ಟೂ ಕಾಗದಗಳನ್ನು ಒಂದು ಬ್ಯಾಗಿಗೆ ಹಾಕಿ ಅದರ ಮೇಲೆ 'ಪೊಲೀಸ್ ಬ್ಯಾಗು, ಯಾರೂ ಮುಟ್ಟಕೂಡದು' ಎಂದು ಬರೆದು ಮರದ ಕೊಂಬೆಗೆ ತಗುಲಿಸಿ, ಕೆಲವು ಪ್ರತಿಗಳನ್ನು ಪ್ಲಾಸ್ಟಿಕ್ ಕವರಿನಲ್ಲಿ ತನ್ನ ಸೊಂಟಕ್ಕೆ ಕಟ್ಟಿಕೊಂಡು, ಆರು ಗಂಟೆಯ ಚುಮುಚುಮು ಬೆಳಗಿನಲ್ಲಿ ನೀರಿಗೆ ಬೀಳುವ ಮುನ್ನ ಜೋರಾಗಿ 'ಶಿವಾ ಶಿವಾ...' ಎಂದರಚಿ ನೀರಿಗೆ ಮಕಾಡೆ ಬಿದ್ದಿದ್ದಾನೆ.

'ಒಂದಕ್ಷರವನ್ನೂ ಓದದೆ ಜೆರಾಕ್ಸ್ ಮಾಡಿಕೊಡು' ಅಂತ ಅಂಗಡಿಯವನ ಕಣ್ಣುಗಳನ್ನೇ ಹದ್ದಿನ ದೃಷ್ಟಿಯಿಂದ ನೋಡುತ್ತಾ ನಕಲು ಮಾಡಿಸಿಕೊಂಡಿದ್ದನಂತೆ. ಸಾಯುವ ಹಿಂದಿನ ಮೂರು ಸಲ ಆ ಕೆರೆಯ ಹತ್ತಿರ ಬಂದು ದಡದಲ್ಲಿ ಸುಮಾರು ಹೊತ್ತು ನಿಂತಿದ್ದನ್ನು ಸುತ್ತ ಕೆಲಸ ಮಾಡುತ್ತಿದ್ದವರು ಗಮನಿಸಿದ್ದರಂತೆ. ಬೀಳುವ ಮುನ್ನ ಅರಚಿದ ಧ್ವನಿಯ ಕರ್ಕಶ ಹತ್ತಿರದ ಮನೆಯವರನ್ನು ನಿದ್ದೆಯಿಂದ ಒದ್ದೆಬ್ಬಿಸಿತಂತೆ. ಸತ್ತ ಮೇಲೆ ಅಪ್ಪನನ್ನು ಕಟ್ಟಿಕೊಡುವ ಹತ್ತಾರು ಅಂತೆಕಂತೆಗಳು !

ಅಪ್ಪ, ಮಕ್ಕಳ ಮಟ್ಟಿಗೆ ಬದುಕಿದ್ದಾಗ ಹೇಗೋ ಸಾವಿನಲ್ಲೂ ಅಷ್ಟೇ ಉದಾರಿಯಾಗಿದ್ದಾನೆ. ಅವರ ಹೀನ ಲೆಕ್ಕಾಚಾರಸ್ತಿಕೆಯಿಂದ, ಸಣ್ಣತನದಿಂದ ಇನ್ನಿಲ್ಲದಂತೆ ನೊಂದಿದ್ದರೂ ಕಾಗದದಲ್ಲಿ ಮಾತ್ರ ಒಳ್ಳೆಯ ಮಾತುಗಳನ್ನೇ ಬರೆದಿದ್ದಾನೆ. ಸಾಮಾನಿನ ಪಟ್ಟಿ ಕೊಟ್ಟು ದುಡ್ಡು ಕೊಡುವುದನ್ನು ಉಪಾಯವಾಗಿ ಬರೆಯುವ ಸಣ್ಣ ಮನಸ್ಸಿನ ನೌಟಂಕಿಯ ದೊಡ್ಡ ದೌರ್ಜನ್ಯಗಳ ಬಗ್ಗೆ ಆಗೀಗ ಗೊಣಗುವುದನ್ನು ಬಿಟ್ಟರೆ ಸ್ಪಷ್ಟವಾಗಿ ದೂರಿದ್ದಿಲ್ಲ. ಸೋಂಬೇರಿಯ ಮನೆಯ ಅಸ್ತವ್ಯಸ್ತದಲ್ಲಿ ಹೊತ್ತುಹೊತ್ತಿಗೆ ತಿನ್ನಲೂ ಸಿಗದೆ ಬೆಚ್ಚನೆಯ ಭಾವಭದ್ರತೆಯಿಲ್ಲದೆ ನರಳಿದ್ದರೂ ಸಹ ಅದರ ಬಗ್ಗೆ ಪತ್ರದಲ್ಲಿ ಒಂದೂ ಮಾತಿರಲಿಲ್ಲ. ಬದಲಿಗೆ

## ಬಾಲ್ಯ

ಒಂದಿಷ್ಟು ಹಕ್ಕಿ
ಅಂಗಿ ಜೇಬಿನಲಿ
ಗುಟ್ಟಾಗಿ ಕಾವಿಟ್ಟ
ಭಾವಗಳು
ಹೊಸ ವರುಷದ ಹಾಡಿಗೆ
ಲಯವಾದಾಗ –
ಬಾಲ್ಯದ ಬೆನ್ನೆಲುಬು
ಅಣಕಿಸುವವು !

**ಶೋಭಾ ಪ್ರಮೋದ್**
ಮಹಾಲಕ್ಷ್ಮೀ ಏಜೆನ್ಸೀಸ್
ಮಾಣ್‌ಗಾಂವ್-೪೦೨೧೦೪, ಮಹಾರಾಷ್ಟ್ರ

ತನ್ನ ಹೆಂಡತಿ ತನ್ನ ಹತ್ತಿರವಿದ್ದ ಸಂಪತ್ತೆಲ್ಲವನ್ನೂ ಕೊಳ್ಳೆ ಹೊಡೆದುಕೊಂಡು ಹೋಗಿ ಹದಿನೈದು ವರ್ಷದಿಂದ ಒಬ್ಬಳೇ ಮಜಾ ಮಾಡುತ್ತಿರುವಳೆಂದೂ ಅವಳಿಗೆ ಉಗ್ರಶಿಕ್ಷೆ ಕೊಡಬೇಕೆಂದೂ ನಿವೇದಿಸಿಕೊಂಡಿದ್ದ. ಅಲ್ಲಿಯ ತನಕ ತಾವು ಮುದುಕನಿಗೆ ಮಾಡಿದ ದೌರ್ಜನ್ಯಗಳ ನೆನಪಲ್ಲಿ ಮನಸ್ಸು ಉಳುಕಿದವರಂತೆ ಕಂಡವರೆಲ್ಲರೂ ಪತ್ರದ ವಿಷಯ ತಿಳಿಯುತ್ತಲೇ ಹುರುಪುಗೊಂಡಂತೆ ಕಂಡಿದ್ದಂತೂ ಸತ್ಯ. 'ವಯಸ್ಸಾದ ಮೇಲೆ ಗಂಡಂಗೆ ಹೆಂಡತಿ, ಹೆಂಡತಿಗೆ ಗಂಡ ತಾನೇ ಆಧಾರ' ಅಂತೆಲ್ಲಾ ಪುರಾಣ ಹೊಡೆದು ಅಪ್ಪನನ್ನು ಬದುಕಿದ್ದಾಗಲೇ ಉಪಾಯವಾಗಿ ಸಾಗುಹಾಕಲು ಪ್ರಯತ್ನಿಸಿದ್ದ ಮಗ ಸೊಸೆಯಂದಿರಿಗೆ ಅಮ್ಮನ ತಲೆ ಮೇಲೆ ಗೂಬೆ ಕೂರಿಸುವ ಇನ್ನೊಂದು ಸಾಧ್ಯತೆ ಮುಖದ ಕಪ್ಪನ್ನು ತಿಳಿಯಾಗಿಸಿತ್ತು. ''ಸಧ್ಯ ಆ ಮಗನ ಮನೆಯಲ್ಲಿದ್ದಾಗ ಮಾವ ಸತ್ತರಪ್ಪ!' ಅಂತ ನೌಟಂಕಿ ರಾಗವಾಗಿ ಹೇಳುತ್ತಿದ್ದಾಗ ಬೆಂಕಿಯಷ್ಟು ಕೋಪ ಬಂದಿತ್ತು. ಉಂಡೆ ಕಣ್ಣುಗಳನ್ನು ಇನ್ನಷ್ಟು ತಿರುಗಿಸುತ್ತಾ ಅಪ್ಪನ ಮೇಲೆ ಗಂಟೆಗಟ್ಟಲೆ ದೂರುಗಳನ್ನು ಒದರುತ್ತಿದ್ದಾಗ ಅಪ್ಪ ಹಿಡಿಮ್ಮೆ ಮಾಡಿಕೊಂಡು ಮೂಲೆಯಲ್ಲಿ ಅಸಹಾಯಕನಾಗಿ ನಿಂತಿದ್ದು ನೆನೆಸಿಕೊಂಡರೆ ನನ್ನ ಮೇಲೇ ನನಗೆ ಕೋಪ ಬರುತ್ತದೆ. 'ಅವರೇನೇ ಮಾಡಿದ್ರೂ ನಾನವರನ್ನ ನೋಡ್ಕೋತ್ತಿನಿ. ನಮ್ಮಮ್ಮ ಸಾಯುವಾಗ ನಿನ್ನ ಮಾವನದು ತುಂಬ ಕಷ್ಟಪಟ್ಟ ಜೀವ, ಐವತ್ತು ವರ್ಷದಿಂದ ನೋಡಿದೀನಿ, ಒಂದೇ ಸಮನೆ ದುಡಿದು ಬೆಂಡಾಗಿದಾನೆ, ಅವನ ಕೈ ಬಿಡಬೇಡ' ಅಂತ ಹೇಳಿದಾರೆ ಕಣ್ರೀ ಅಂತೆಲ್ಲ ಬೊಗಳೆ ಬಡಿದವಳು ಸ್ವಲ್ಪ ದಿನದ ನಂತರ ಬೇರೇನಕ್ಕೋ ಫೋನ್ ಮಾಡಿದಾಗ ಗಂಟೆಗಟ್ಟಲೆ ಮಾತಾಡಿ 'ನಮ್ಮೊಬ್ಬರ ಜವಾಬ್ದಾರಿ ಮಾತ್ರಾನಾ ? ಒಂದು ವರ್ಷ ಎಲ್ಲಾದರೂ ಇದ್ದು ಬರಲಿ, ಆಮೇಲೆ ನೋಡೋಣ' ಅಂತ ಹೇಳಿದಳಲ್ಲಾ. ಇವಳ ಅಮ್ಮನ ಮಾತಿಗೆ ಬೆಲೆಯಿಲ್ಲದಿದ್ದರೆ ಹೋಗಲಿ, ಅವರು ಒಂದು ವರ್ಷ ಬದುಕಿರುತ್ತಾರೆ ಅಂತ ಏನು ಗ್ಯಾರಂಟಿ ಅಂತ ಕೇಳೋಣವೆನ್ನಿಸಿತ್ತು. ಯಾಕಿಷ್ಟು ಕಟಿಕಟಿ ಅಂತ ಮಾತಾಡಿ ಪದಭೇದಿಯಲ್ಲಿ ಹೊರಳಾಡ್ತಾಳೆ ಅಂತ ಹೇಸಿಗೆಯಾಗಿತ್ತು. 'ಹತ್ತು ವರ್ಷದ ಹಿಂದೆ ನೋಡ್ಕೋತೀನಿ ಅಂತ ಕರೆದುಕೊಂಡು ಬಂದೆಯಲ್ಲಾ?' ಅಂತ ಅಪ್ಪ ಒಮ್ಮೆ ಕೇಳಿದ್ದಾಗ 'ಆಗ ಹೇಳಿದೆ, ಈಗ ಹೇಳುತ್ತಿದ್ದೀನಲ್ಲ, ಮೊದಲು ಹೋಗಿ ಅಂತ' ಅಂತ ಬೀದಿ ತೋರಿಸಿದಳಂತೆ. ಅಪ್ಪ ಸೌಹಾರ್ದಕ್ಕೋಸ್ಕರ ಯಾರನ್ನೂ ಭೆಟ್ಟಿಯಾದವನೇ ಅಲ್ಲ. ಕತ್ತೆ ತರಹ ದುಡಿದು ಲಾರಿ ಲೋಡರ್, ಕ್ಲೀನರ್‌ಗಳ ಜೊತೆ ಕೂತು ಹಂಚಿ ತಿನ್ನುತ್ತಿದ್ದ ಲಾರಿ ಮಾಲೀಕ ಅವನು. ಅವನು ಇಲ್ಲಾ ಭೂಮಿಯ ಜೊತೆ ಸಂವಾದಿಸುತ್ತಿದ್ದ, ಮನುಷ್ಯರಿಗಿಂತ ಮಣ್ಣಿನ ಜೊತೆ ಸ್ಪಂದಿಸುತ್ತಿದ್ದ ಒಡ್ಡ. ಅಂತಹದ್ದರಲ್ಲಿ ಇವಳು 'ದಿನಾ ಸಾಯಂಕಾಲ ಮುದುಕರೆಲ್ಲಾ ದೇವಸ್ಥಾನದ ಕಟ್ಟೆಯ ಮೇಲೆ ಕೂತು ಕಷ್ಟ ಸುಖ ಮಾತಾಡ್ತಾರೆ, ನೀವೂ ಇದೀರ, ಒಬ್ಬರೇ ಕೂತು ಮಾತಾಡಿಕೊಳ್ಳೋ ಮುಖೇಡಿ' ಅಂತ ಕಟಕಿಯಾಡುತ್ತಿದ್ದಳಂತೆ. ಇವಳ ನೌಟಂಕಿತನಕ್ಕಿಷ್ಟು ಬೆಂಕಿ ಹಾಕ.

ನಾನ್ಯಾಕೆ ಮೌನವಾಗುಳಿದೆ ಅಂತ ಈಗ ಪಶ್ಚಾತ್ತಾಪವಾಗುತ್ತಿದೆ. ಈಗ್ಗೆ ಮೂರು ತಿಂಗಳಿಂದ ಕಠೋರವಾಗಿ ಮೌನವಾಗಿದ್ದೆ. ಹಣದ ಅವಶ್ಯಕತೆಯನ್ನು ಪ್ರಾಮಾಣಿಕವಾಗಿ ಕೆಲಮಟ್ಟಿಗಾದರೂ ಪೂರೈಸುತ್ತಿದ್ದ ನನಗೆ ಅವನನ್ನು ನನ್ನ ಮನೆಯಲ್ಲಿ ಇಟ್ಟುಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲವಾ ? ಕುಟುಂಬ ವ್ಯವಸ್ಥೆಯ ವಿರುದ್ಧ ಚಿಕ್ಕಂದಿನಲ್ಲೇ ತಿರುಗಿಬಿದ್ದು, ಮದುವೆ, ಆಸ್ತಿ ಇತ್ಯಾದಿಗಳಿಂದ ದೂರವಿದ್ದ ನನಗೆ ಅಪ್ಪನ ಇತರ ಅಗತ್ಯಗಳನ್ನು ನಿಭಾಯಿಸುವುದು ಸಾಧ್ಯವಿತ್ತೆ? ಕುಟುಂಬ ವ್ಯವಸ್ಥೆಯ ಎಲ್ಲಾ ಲಾಭಗಳನ್ನೂ ಪಡೆದುಕೊಂಡ ಉಳಿದವರಿಗಿಂತ ಎಷ್ಟೋ ಪ್ರಾಮಾಣಿಕವಾಗಿ ನನ್ನ ಕರ್ತವ್ಯವನ್ನು ನಿಭಾಯಿಸುತ್ತಿದ್ದೆನಲ್ಲ? ಇವನಿಗೆ ದುಡ್ಡಿನ ತುರ್ತಿದೆ ಅಂತ ತಕ್ಷಣ ಒಂದು ಕವರಿನಲ್ಲಿ ದುಡ್ಡು ಹಾಕಿ ಕೂರಿಯರಿನಲ್ಲಿ ಅರ್ಜೆಂಟಿಗೆ ಕಳಿಸಿದರೆ, ಅದನ್ನೂ ಲಪಟಾಯಿಸುತ್ತಿದ್ದರಲ್ಲ, ಅವನ ಮಹಾ ಪರಿವಾರದಲ್ಲೊಬ್ಬರು! ಅಮ್ಮನಿಗೆ, ಅಕ್ಕನಿಗೆ, ತಂಗಿಗೆ ಸಹ ಹಣ ಸಹಾಯ ಮಾಡುತ್ತಿದ್ದೆನಲ್ಲಾ, ಅಪ್ಪನಿಗೆ ಅದು ಗೊತ್ತಿರಲಿಲ್ಲವಾ ? ಇದ್ದ ಒಬ್ಬನೇ ಅಪ್ಪನನ್ನೂ ನೋಡಿಕೊಳ್ಳಲಾಗದ, ಆದರೆ ಅವನು ಮೈಮುರಿದು ಮಾಡಿದ ಆಸ್ತಿಯನ್ನು ಜಗಳ ಮಾಡಿ ಕಿತ್ತುಕೊಂಡ ಈ ಗಂಡುಮುಂಡೇವು ಮಾಡಿದ್ದೇನನ್ನು?




ಅಪ್ಪ ನನ್ನ ಮೌನದ ಬಗ್ಗೆ ಬೇಜಾರು ಮಾಡಿಕೊಂಡಿದ್ದ ಅಂತ ಗೊತ್ತು. ಊರಿಗೆ ಹೋದರೆ ಒಬ್ಬೊಬ್ಬರೂ ಹೇಳುವ ಕಥೆಗಳು ನನ್ನನ್ನು ಇನ್ನಿಲ್ಲದಂತೆ ಗಲಿಬಿಲಿಗೊಳಿಸುತ್ತಿದ್ದವು. 'ನೀವೇ ಹೇಗೋ ಹೊಂದಿಕೊಂಡು ಹೋಗಬಾರದಾ' ಅಂತ ಒಮ್ಮೆ ಸಿಡುಕಿಯೂ ಇದ್ದೆ. ಅಮ್ಮನಂತೆ ಇವನೂ ತನಗೆ ಅಂತ ಒಂದು ಗೂಡು ಮಾಡಿಕೊಂಡಿದ್ದಿದ್ದರೆ, ಕರಟಕ - ದಮನಕರ ಕಥೆಗಳಿಗೆ ಸೊಪ್ಪು ಹಾಕುವ ಅಗತ್ಯವಿರಲಿಲ್ಲವಲ್ಲಾ ಅಂತನ್ನಿಸಿ ಅಪ್ಪನ ಮೇಲೆ ಪ್ರಚಂಡ ಕೋಪ ಬರುತ್ತಿತ್ತು. ಜೊತೆಗೇ ಅವನಲ್ಲಿ ಇತ್ತೀಚೆಗೆ ಜಾಸ್ತಿಯಾಗುತ್ತಿದ್ದ ದೈನ್ಯವನ್ನು ನೋಡಿದಾಗ ಕರುಳು ಕಿತ್ತುಬರುತ್ತಿತ್ತು. ಅಪ್ಪ ಚಿಂದಿ ತೊಟ್ಟಿದ್ದರೆ ಕುರುಡರಂತೆ ನಟಿಸುವ ಮಕ್ಕಳು ಅವನೇನಾದರೂ ಹಣದ ಬ್ಯಾಗನ್ನು ಹೆಗಲಿಗೇರಿಸಿಕೊಂಡಿದ್ದರೆ ಹೃದಯವಂತರಾಗಿ ಬಿಡುತ್ತಾರೆ ಅನ್ನುವ 'ಕಿಂಗ್ ಲಿಯರ್' ನಾಟಕದ ಮಾತುಗಳು ನಮ್ಮೆಲ್ಲರ ಮನೆಯಲ್ಲಿರುವ ಕಿಂಗ್ ಲಿಯರ್ ಮಟ್ಟಿಗೂ ಸತ್ಯ.

ಈಗ ಮುದುಕ ಅಪ್ಪ ಭಿಕಾರಿಯಂತೆ ಸತ್ತಿದ್ದಾನೆ. ಮೂವತ್ತು ವರ್ಷದ ಹಿಂದೆ ಕೆಟ್ಟದಾಗಿ ಜಗಳವಾಡಿ ಆಸ್ತಿಭಾಗ ಕಿತ್ತುಕೊಂಡು ಹೋದ ಮೇಲೆ ಅಪ್ಪನಿಗೆ ಒಂದು ಮಾತ್ರೆಯನ್ನೂ ತೆಕ್ಕೊಡದ ಬದುಕಿರುವ ಹಿರೀ ಮಗ ಈಗ ಅಪ್ಪನಿಗೆ ಮೋಕ್ಷ ತೋರಿಸುವ ಘನಜವಾಬ್ದಾರಿ ಹೊತ್ತು ಕರ್ಮಗಳನ್ನು ಮಾಡುತ್ತಿದ್ದಾನೆ. ಮುಂಡಾ ಮೋಚ್ತು ಇವನ ನಕಲಿಶ್ಯಾಮತನಕ್ಕೆ! ಹೆಣಕ್ಕೆ ಮೊದಲು ಎಲ್ಲಾ ಗಂಡುಮಕ್ಕಳಿಂದ, ದೊಡ್ಡಪ್ಪನ ಗಂಡುಮಕ್ಕಳಿಂದ ಪೂಜೆ ಮಾಡಿಸಿದ ಮೇಲೆ ಕೊನೆಯಲ್ಲಿ ಹೆಣ್ಣುಮಕ್ಕಳಿಗೆ ಅವಕಾಶ ಮಾಡಿಕೊಡುತ್ತಿದ್ದಾನೆ. ಸಾವಿನಲ್ಲೂ ಲಿಂಗಭೇದವನ್ನು ಕಾಯುವ ದಂಡಪಿಂಡಗಳು! ಬದುಕಿದ್ದಾಗ ಅವನ ಜವಾಬ್ದಾರಿ ಹೊರುವುದರಲ್ಲಿ ಮಾತ್ರ ಈ ಶ್ರೇಣಿ ನಾಪತ್ತೆ!

ಬದುಕಿದ್ದಾಗ ತನಗೊಂದು ಗೂಡನ್ನೂ ಮಾಡಿಕೊಳ್ಳುವ ಗೊಡವೆಗೆ ಹೋಗದ ಅಪ್ಪ ಆಳವಾದ ಗುಂಡಿಯಲ್ಲಿ ಮಲಗಿದ್ದಾನೆ. 'ವಯಸ್ಸಾದ ಮೇಲೆ ಸುಮ್ಮೆ ಮನೇಲಿ ಬಿದ್ದಿರಬೇಕು' ಎಂದು ಗುರುಗುಟ್ಟುತ್ತಿದ್ದ ಮಗ ಸೊಸೆಯಂದಿರು, ಕಂಗೆಟ್ಟು ಮನೆಗೆ ಬಂದರೆ ಗಂಟುಮುಖದಿಂದ ಸ್ವಾಗತಿಸುತ್ತಿದ್ದ ಮಗಳಂದಿರು, ತಮಗೂ, ಅದಕ್ಕೂ ಸಂಬಂಧವೇ ಇಲ್ಲದಂತೆ ನಿರ್ಲಕ್ಷ್ಯದಿಂದಿರುತ್ತಿದ್ದ ಅಳಿಯಂದಿರು, ಭೂಮಿ ಮಾಡಿಸಿಕೊಂಡ ಮೇಲೆ ನಿನ್ನ ಹಂಗ್ಯಾಕೆ ಎಂದು ಒದ್ದೋಡಿಸಿದ ಕಿರಾತಕರು, ತನ್ನಲ್ಲಿ ಉಳಿದಿದ್ದ ಅಷ್ಟು ದುಡ್ಡನ್ನೂ ದಾನ ಮಾಡಿ, ಚಂದಾ ಎತ್ತಿ ಕಟ್ಟಿಸಿದ ದೇವಸ್ಥಾನದ ಮೂಲೆಯೊಂದರಲ್ಲಿ ಇದ್ದವನನ್ನು ಮೀಟಿಂಗ್ ಮಾಡಿ, ನಡಾವಳಿ ಹೊರಡಿಸಿ, ಅಲ್ಲಿಂದಲೂ ಎತ್ತಂಗಡಿ ಮಾಡಿಸಿದ ಘನತೆವೆತ್ತ ಕಮಿಟಿ ಮೆಂಬರ್‌ಗಳು,... ಎಲ್ಲರೂ ಸುತ್ತ ನೆರೆದು ಮಣ್ಣು ಹಾಕಲು ತಯಾರಾಗಿ ನಿಂತಿದ್ದಾರೆ. ಅಪ್ಪ ಈಗೇನಾದರೂ ಕಣ್ಣು ಬಿಟ್ಟಿದ್ದರೆ ಮತ್ತೆ ಸಾವಿರ ಬಾರಿ ಸಾಯುತ್ತಿದ್ದನೋ ಏನೋ. ಪರಂಪರೆ ಎಂಬುದೇನಾದರೂ ಇದ್ದರೆ, ಬದುಕಲ್ಲಿ ಇನ್ನಿಲ್ಲದಂತೆ ಕಂಗೆಟ್ಟಿದ್ದೇನೆ ಅಂತನ್ನಿಸಿದಾಗ ಸಾವನ್ನು ತಬ್ಬಿಕೊಂಡ ಈ ನಿನ್ನ ಧೈರ್ಯ ನನಗೂ ಬರಲಿ ಅಂತಂದುಕೊಳ್ಳುತ್ತಾ ಹತ್ತು ಮಕ್ಕಳನ್ನು ಸಲಹಿ ಸಮೃದ್ಧನೆನಿಸಿಕೊಂಡಿದ್ದ ಅಪ್ಪನಿಗೆ ಮೂರು ಹಿಡಿ ಮಣ್ಣನ್ನು ಹಾಕುತ್ತಿದ್ದೇನೆ. ಇದು ನಿನ್ನದೇ ಗೂಡು ಅಪ್ಪ, ಯಾವ ಭಯವೂ ಇಲ್ಲದೇ ಮಲಗು ಎಂದು ಅವನಿಗೆ ಈಗ ಅದರ ಅಗತ್ಯವಿರದಿದ್ದರೂ ಸಾಂತ್ವನಿಸುತ್ತಿದ್ದೇನೆ.

'ಗೌತಮಿ'
೫೪, ೭ನೇ ಮುಖ್ಯ ರಸ್ತೆ ಜಯನಗರ ೫ನೇ ಬ್ಲಾಕ್
ಬೆಂಗಳೂರು - ೫೬೦ ೦೪೧.



# ಸಂಗೀತ ಸಾಮ್ರಾಟ್ ನೌಷಾದ್ ಅಲಿ ಈಗ ನೆನಪು ಮಾತ್ರ

ಆಧುನಿಕ ಸಂಗೀತದ ಬಗ್ಗೆ ತಮ್ಮದೇ ಆದ ಭಿನ್ನಾಭಿಪ್ರಾಯಗಳನ್ನು ಹೊಂದಿದ್ದ ನೌಷಾದ್ ರೀಮಿಕ್ಸ್ ಸಂಸ್ಕೃತಿಯನ್ನು ಬಲವಾಗಿ ಖಂಡಿಸುತ್ತಿದ್ದರು. ಪಾಶ್ಚಿಮಾತ್ಯ ಸಂಗೀತದ ಅಂಧ ಅನುಕರಣೆಯನ್ನು ವಿರೋಧಿಸುತ್ತಿದ್ದರು. ಭಾರತೀಯ ಸಂಗೀತ ಪರಂಪರೆಯಲ್ಲಿ ಅತೀವ ವಿಶ್ವಾಸ ಮತ್ತು ಗೌರವ ಇರಿಸಿದ್ದ ನೌಷಾದ್ ಅವರಿಗೆ ಶಾಸ್ತ್ರೀಯ ಸಂಗೀತವೇ ಉಸಿರಾಗಿತ್ತು. ಹಾಗಾಗಿಯೇ ೨೦೦೫ರಲ್ಲಿ ಅವರು ಸಂಗೀತ ನಿರ್ದೇಶಿಸಿದ *ತಾಜ್‌ಮಹಲ್* ಚಿತ್ರದಲ್ಲೂ ಶಾಸ್ತ್ರೀಯ ಸಂಗೀತದ ಛಾಯೆ ಕಾಣಬಹುದು. ಖ್ಯಾತ ನಿರ್ಮಾಪಕ ಯಶ್ ಛೋಪ್ರ ಹೇಳುವಂತೆ ಭಾರತೀಯ ಸಂಗೀತ ಪರಂಪರೆಯನ್ನು ಉಳಿಸಿಕೊಂಡುಬರುವುದೇ ನಾವು ಈ ಮಹಾನ್ ಕಲಾವಿದನಿಗೆ ನೀಡುವ ಶ್ರದ್ಧಾಂಜಲಿ.

**ಭಾ**ರತೀಯ ಚಲನಚಿತ್ರ ಸಂಗೀತದ ಕೊನೆಯ ದಿಗ್ಗಜ ಎಂದೇ ಪ್ರಸಿದ್ಧರಾಗಿದ್ದ ಸಂಗೀತ ನಿರ್ದೇಶಕ, ಉತ್ತಮ ಕವಿ, ವಾಗ್ಮಿ, ದಾದಾಸಾಹೇಬ್ ಫಾಲ್ಕೆ ಪ್ರಶಸ್ತಿ ವಿಜೇತ, ನೌಷಾದ್ ಅಲಿ, ೬೫ ವರ್ಷಗಳ ತಮ್ಮ ಸುದೀರ್ಘ ವೃತ್ತಿಪರ ಜೀವನದ ನಂತರ ಕೊನೆಯುಸಿರೆಳೆದಿದ್ದಾರೆ. ಭಾರತೀಯ ಚಲನಚಿತ್ರ ಸಂಗೀತ ಪ್ರೇಮಿಗಳಿಗೆ, ಸಂಗೀತ ಎಂದೊಡನೆ ಥಟ್ಟನೆ ನೆನಪಾಗುವುದು ನೌಷಾದ್ ಅಲಿ ಎಂದರೆ ಅತಿಶಯೋಕ್ತಿಯೇನಲ್ಲ. ತಮ್ಮ ಆರು ದಶಕಗಳ ವೃತ್ತಿಜೀವನದಲ್ಲಿ ಎಂದಿಗೂ ಯಾರೊಡನೆಯೂ ರಾಜಿ ಆಗದೆ, ಸಂಗೀತಕ್ಕೆ ತಮ್ಮ ಇಡೀ ಜೀವನವನ್ನೇ ಅರ್ಪಿಸಿದ ಮಹಾನ್ ಚೇತನ. ನೌಷಾದ್ ಸಂಗೀತ ನಿರ್ದೇಶಕರಾಗಿ ೬೫ ಚಿತ್ರಗಳಿಗೆ ದುಡಿದಿದ್ದಾರೆಂದರೆ ಅವರ ನಿಷ್ಠೆ, ತಲ್ಲೀನತೆ ಮತ್ತು ಗುಣಾತ್ಮಕ ಅಂಶಗಳಿಗೆ ಅವರು ನೀಡುತ್ತಿದ್ದ ಮಹತ್ವದ ಅರಿವಾಗುತ್ತದೆ. ನೌಷಾದ್ ಅಲಿ ಅವರ ಸಂಗೀತ ನಿರ್ದೇಶನದಲ್ಲಿ ಹೊರಹೊಮ್ಮಿರುವ ಹಾಡುಗಳ ಸಂಖ್ಯೆ ೬೫೦ ಮಾತ್ರ ಎಂದರೆ ಯಾರಿಗಾದರೂ ಅಚ್ಚರಿಯಾಗಬಹುದು. ನೂರಾರು ಚಿತ್ರಗಳಿಗೆ ಸಂಗೀತ ನೀಡಿ ಸಾವಿರಾರು ಹಾಡುಗಳಿಗೆ ಜೀವ ತುಂಬಿರುವ ಸಂಗೀತ ನಿರ್ದೇಶಕರ ದೊಡ್ಡ ಪಟ್ಟಿಯೇ ನಮ್ಮಲ್ಲಿರುವಾಗ ಕೇವಲ ೬೫ ಚಿತ್ರಗಳನ್ನು ನೀಡಿರುವ ನೌಷಾದ್ ಭಾರತೀಯ ಚಲನಚಿತ್ರ ಸಂಗೀತ ಪರಂಪರೆಯ ಒಂದು ಪ್ರತಿಮೆಯಾಗಿ, ರೂಪಕವಾಗಿ ಏಕೆ ನಿಲ್ಲುತ್ತಾರೆ ?

ನೌಷಾದ್ ಜನಿಸಿದ್ದು ಲಕ್ನೋದಲ್ಲಿ; ಸಣ್ಣ ಮಧ್ಯಮ ವರ್ಗದ ಕುಟುಂಬವೊಂದರಲ್ಲಿ ಜನಿಸಿದ ಅವರಿಗೆ ಸಂಗೀತ ಅನುವಂಶೀಯವಾಗಿ ಒಲಿದು ಬಂದದ್ದೇನಲ್ಲ. ಸಂಗೀತ ವಾದ್ಯಗಳನ್ನು ಮಾರುವ ತನ್ನ ಚಿಕ್ಕಪ್ಪನ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದ ಬಾಲಕ ನೌಷಾದ್‌ಗೆ, ಹಾರ್ಮೋನಿಯಮ್ ರಿಪೇರಿ ಮಾಡುತ್ತಿರುವಾಗಲೇ ಅದನ್ನು ಕಲಿಯುವ ಆಕಾಂಕ್ಷೆ ಬೆಳೆಯಿತು. ತನ್ನ ತಂದೆಯ ಇಚ್ಛೆಗೆ ವಿರುದ್ಧವಾಗಿ, ಸಂಗೀತ ವಿದ್ವಾಂಸರಾದ ಉಸ್ತಾದ್ ಗುರುಭತ್ ಅಲಿ, ಉಸ್ತಾದ್ ಯೂಸುಫ್ ಅಲಿ ಮತ್ತು ಉಸ್ತಾದ್ ಬಬ್ಬರ್ ಸಾಹೆಬ್ ಅವರಿಂದ ಹಿಂದೂಸ್ಥಾನಿ ಸಂಗೀತ ಕಲಿತ ನೌಷಾದ್‌ರ ಮುಂದಿನ ಗುರಿ ಮುಂಬೈಗೆ ಹೋಗಿ ಸಿನಿಮಾ ಜಗತ್ತಿನಲ್ಲಿ ಸಂಗೀತ ನಿರ್ದೇಶಕನಾಗುವುದಾಗಿತ್ತು. ತನ್ನ ಈ ನಿರ್ಧಾರವನ್ನು ವಿರೋಧಿಸಿದ ತಂದೆಯ ಮಾತನ್ನು ಧಿಕ್ಕರಿಸಿ, ಮುಂಬೈಗೆ ಬಂದ ನೌಷಾದ್‌ಗೆ ಅಲ್ಲಿ ದೊರೆತದ್ದು ಉಪವಾಸ ಮತ್ತು ಫುಟ್‌ಪಾತ್ ವಾಸ. ಆರ್ಕೆಸ್ಟ್ರಾಗಳಿಗೆ ಸಂಗೀತ ನೀಡಿ ಕಾಲ ಕಳೆಯುತ್ತಿದ್ದ ನೌಷಾದ್‌ಗೆ ೧೯೪೦ರಲ್ಲಿ **ಪ್ರೇಮ್‌ನಗರ್** ಎಂಬ ಚಿತ್ರದಲ್ಲಿ ಸಂಗೀತ ನಿರ್ದೇಶಕನಾಗಿ ದುಡಿಯುವ ಅವಕಾಶ ದೊರೆಯಿತು. ಆದರೆ ಮೊದಲು ಬಿಡುಗಡೆಯಾದ ನೌಷಾದ್‌ರ ಸಂಗೀತವಿದ್ದ ಚಿತ್ರ **ಶಾರದಾ** ೧೯೪೧ರಲ್ಲಿ ತೆರೆ ಕಂಡಿತ್ತು. ತದನಂತರದಲ್ಲಿ ಎಂದಿಗೂ ಹಿಂದೆ ನೋಡದ ನೌಷಾದ್ ೨೦೦೫ರಲ್ಲಿ ತೆರೆ ಕಂಡ ಅಕ್ಬರ್ ಖಾನ್‌ರವರ **ತಾಜ್‌ಮಹಲ್**ವರೆಗೂ ಸಂಗೀತ ಪ್ರೇಮಿಗಳಿಗೆ ಇಂಪಾದ ಸಂಗೀತದ ರಸದೌತಣ ನೀಡುವುದರಲ್ಲಿ ಸಫಲರಾಗಿದ್ದಾರೆ.

೧೯೪೦ರಲ್ಲಿ ಆರಂಭಗೊಂಡ ನೌಷಾದ್ ಅವರ ಪಯಣ ೧೯೪೪ರಲ್ಲಿ ತೆರೆ ಕಂಡ **ರತನ್** ಚಿತ್ರದಿಂದ ಯಶಸ್ಸಿನ ಮೆಟ್ಟಿಲೇರತೊಡಗಿತು. ಈ ಚಿತ್ರದಲ್ಲಿ ಸುಮಾರು ೧೫ ಗೀತೆಗಳನ್ನು ಸೃಷ್ಟಿಸಿದ ನೌಷಾದ್ ಸುರಯ್ಯಾ ಎಂಬ ೧೬ ವರ್ಷದ ಬಾಲಕಿಗೆ ಹಾಡಲು ಅವಕಾಶ ನೀಡಿದ್ದರು. ಈ ಚಿತ್ರದ **ಅಖಿಯಾ ಮಿಲಾಕೆ ಜಿಯಾ ಭರ್‌ಮಾಕೆ** ಎಂಬ ಹಾಡು ಇಂದಿಗೂ ಜನಪ್ರಿಯವಾಗಿದೆ. ನೌಷಾದ್ ಅವರು ಸೃಷ್ಟಿಸಿರುವ ಪ್ರತಿಯೊಂದು ಹಾಡೂ ಇಂಪಾಗಿರುವುದಲ್ಲದೆ ಬಹುತೇಕವಾಗಿ ಶಾಸ್ತ್ರೀಯ ಸಂಗೀತವನ್ನು ಆಧರಿಸಿರುತ್ತದೆ.

ಸಂಗೀತ ನಿರ್ದೇಶಕ ಅನು ಮಲ್ಲಿಕ್ ಹೇಳುವಂತೆ ನೌಷಾದ್‌ರಂತೆ ನೂರಕ್ಕೆ ನೂರರಷ್ಟು ಉತ್ತಮ ಸಂಗೀತ ನೀಡಿದವರು ಹಿಂದೆಂದೂ ಇರಲಿಲ್ಲ, ಮುಂದೆಯೂ ಬರಲಾರರು. ಭಾರತೀಯ ಚಲನಚಿತ್ರರಂಗದ ಇತಿಹಾಸದಲ್ಲಿ ಹಲವಾರು ಪ್ರಥಮಗಳಿಗೆ ನೌಷಾದ್ ಕಾರಣರಾಗಿದ್ದಾರೆ. ಕೇವಲ ಸಂಗೀತ ಕಛೇರಿಗಳಿಗೆ ಸೀಮಿತವಾಗಿದ್ದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಸಿನಿಮಾ ಹಾಡುಗಳಿಗೆ ಮೊದಲು ಅಳವಡಿಸಿದ್ದು ನೌಷಾದ್ ಅವರೇ. **ಬೈಜೂ ಬಾವರಾ**ದಲ್ಲಿ ಉಸ್ತಾದ್ ಅಮೀರ್ ಖಾನ್ ಮತ್ತು ಡಿ. ವಿ. ಪಲುಸ್ಕರ್ ಎಂಬ ಪ್ರಸಿದ್ಧ ಗಾಯಕರನ್ನು ಬಳಸಿಕೊಂಡ ನೌಷಾದ್ ಮುಂದೆ **ಮುಘಲ್ ಎ ಆಝಮ್** ಚಿತ್ರದಲ್ಲಿ, ಅಂದಿನ ಪ್ರಖ್ಯಾತ ಹಾಡುಗಾರರಾಗಿದ್ದ ಉಸ್ತಾದ್ ಬಡೇ ಗುಲಾಂ ಅಲೀ ಖಾನ್ ಅವರನ್ನು ಬಳಸಿಕೊಂಡಿದ್ದು ಅವರ ಹೆಗ್ಗಳಿಕೆ. ಭಾರತೀಯ ಚಿತ್ರರಂಗದ ಗಾಯಕರಲ್ಲಿ ಬಾದ್‌ಶಹ ಎಂದೇ ಹೆಸರಾಗಿದ್ದ ಗಾಯಕ ಮೊಹಮ್ಮದ್ ರಫಿ, ಸುರೋಂಕಿ ಮಲ್ಲಿಕಾ, ಸಂಗೀತ ಸಾಮ್ರಾಜ್ಞಿ ಲತಾ ಮಂಗೇಷ್ಕರ್ ಮುಂತಾದವರ ಪ್ರತಿಭೆಯನ್ನು ದುಡಿಸಿ ಕೊಂಡ ಶ್ರೇಯಸ್ಸು, ೫೦-೬೦ರ ದಶಕದಲ್ಲಿ ತಮ್ಮ ಶಾಯರಿಗಳಿಂದ, ಅತ್ಯುತ್ತಮ ಸಾಹಿತ್ಯವುಳ್ಳ ಹಾಡುಗಳಿಂದ ಜನರನ್ನು ರಂಜಿಸಿದ ಗೀತ ರಚನಕಾರರಾದ ಮಜರೂಹ್ ಸುಲ್ತಾನ್‌ಪುರಿ, ಕೈಫಿ ಆಜ್ಮಿ, ಶಕೀಲ್ ಬದಾಯುನಿ, ಮುಂತಾದ ರತ್ನಗಳನ್ನು ಪರಿಚಯಿಸಿದ ಶ್ರೇಯಸ್ಸು ನೌಷಾದ್ ಅವರಿಗೇ ಸಲ್ಲುತ್ತದೆ. ಸಿನಿಮಾ ಸಂಗೀತದಲ್ಲಿ ಪ್ರಥಮ ಬಾರಿಗೆ ಸೌಂಡ್ ಮಿಕ್ಸಿಂಗ್ ತಂತ್ರಜ್ಞಾನವನ್ನು ಅಳವಡಿಸಿದ್ದು, ಕೊಳಲು ಮತ್ತು ಕ್ಲಾರಿಯೊನೆಟ್ ಹಾಗೂ ಸಿತಾರ್ ಮತ್ತು ಮ್ಯಾಂಡೊಲಿನ್ ಗೀತ ವಾದ್ಯಗಳನ್ನು ಸಮ್ಮಿಶ್ರಣಗೊಳಿಸಿ ಅಳವಡಿಸಿದ್ದು, **ದುಲಾರಿ** ಚಿತ್ರದ ಮೂಲಕ ಪ್ರಪ್ರಥಮ ಬಾರಿಗೆ ಭಾರತೀಯ ಚಲನಚಿತ್ರ ಸಂಗೀತದಲ್ಲಿ ಪಾಶ್ಚಿಮಾತ್ಯ ಸಂಗೀತ ಅಳವಡಿಸಿದ್ದು, ಹಿನ್ನೆಲೆ ಸಂಗೀತದ ಮೂಲಕ, ಪರದೆಯ ಮೇಲೆ ಭಾವನೆಗಳನ್ನು ಪರಿಣಾಮಕಾರಿಯಾಗಿ ಮೂಡಿಸಿದ್ದು ನೌಷಾದ್ ಅವರ ವಿಶಿಷ್ಟತೆಯೆಂದು ಹೇಳಬಹುದು. **ಮುಘಲ್ ಎ ಆಝಮ್** ಚಿತ್ರದಲ್ಲಿ ಸಲೀಂ ಮತ್ತು ಅನಾರ್ಕಲಿ ಇಬ್ಬರ ಪ್ರಥಮ ಭೇಟಿಯ

ನಾ. ದಿವಾಕರ

ಸಂದರ್ಭದಲ್ಲಿ ಹಿನ್ನೆಲೆಯಲ್ಲಿ ಮೂಡಿಬರುವ ಶಾಸ್ತ್ರೀಯ ಸಂಗೀತ ಭಾರತೀಯ ಚಿತ್ರರಂಗದ ಅಪರೂಪಗಳಲ್ಲೊಂದು. ಇದೇ ಚಿತ್ರದಲ್ಲಿ **ಜಿಂದಾಬಾದ್** ಹಾಡಿಗೆ ನೂರು ಜನರ ಕೋರಸ್ ಬಳಸಿರುವುದು ಇಂದಿಗೂ ದಾಖಲೆಯಾಗಿ ಉಳಿದಿದೆ. ಹಾಸ್ಯನಟಿಯಾಗಿ ಹೆಸರು ಮಾಡಿದ್ದ ಟುನ್ ಟುನ್ (ನಿಜವಾದ ನಾಮಧೇಯ ಉಮಾದೇವಿ) ಅವರನ್ನು ಗಾಯಕಿಯನ್ನಾಗಿ ಮಾಡಿದ ಶ್ರೇಯಸ್ಸೂ ನೌಷಾದ್ ಅವರಿಗೆ ಸಲ್ಲುತ್ತದೆ.

ನೌಷಾದ್ ಚಲನಚಿತ್ರ ಸಂಗೀತವನ್ನು ಕೇವಲ ಹಣ ಸಂಪಾದಿಸುವ ವೃತ್ತಿಯಾಗಿ ಪರಿಗಣಿಸಲಿಲ್ಲ. ೧೯೪೦ರ ದಶಕದಲ್ಲಿ ೨೫ ಸಾವಿರ ರೂ.ಗಳಷ್ಟು ಸಂಭಾವನೆ ಪಡೆಯುತ್ತಿದ್ದ ನೌಷಾದ್ ಒಂದು ಚಿತ್ರವನ್ನು ಪೂರ್ಣ ಗೊಳಿಸುವವರೆಗೂ ಮತ್ತೊಂದು ಚಿತ್ರಕ್ಕೆ ಒಪ್ಪಿಗೆ ನೀಡುತ್ತಿರಲಿಲ್ಲ. ಹಾಗಾಗಿಯೇ ಆರು ದಶಕಗಳಲ್ಲಿ ಕೇವಲ ೬೫ ಚಿತ್ರಗಳಿಗೆ ಸಂಗೀತ ನೀಡಿದ್ದಾರೆ. ಅಲ್ಲದೆ ಚಿತ್ರದ ಟ್ರಯಲ್ಸ್ ನೋಡದೆ ತಮ್ಮ ಹಾಡುಗಳನ್ನು ರೆಕಾರ್ಡ್ ಮಾಡುತ್ತಿರಲಿಲ್ಲ. ತಾವು ಬಯಸಿದ ಗೀತ ರಚನಕಾರ ಮತ್ತು ಗಾಯಕ ಗಾಯಕಿಯರನ್ನೇ ಕರೆತರುವಂತೆ ನಿರ್ಮಾಪಕರ-ನಿರ್ದೇಶಕರ ಮೇಲೆ ಒತ್ತಡ ತರುತ್ತಿದ್ದರಂತೆ. ಮೇಲೆ ಹೇಳಿದ **ಮುಘಲ್ ಎ ಆಝಮ್** ಚಿತ್ರದ ಹಾಡಿಗೆ ಉಸ್ತಾದ್ ಬಡೇ ಗುಲಾಂ ಅಲೀ ಖಾನ್ ಅವರೇ ಇರಬೇಕೆಂಬ ನೌಷಾದ್‌ರ ಒತ್ತಾಯಕ್ಕೆ ಮಣಿದ ನಿರ್ಮಾಪಕ ಆಸಿಫ್, ಉಸ್ತಾದ್ ಅವರಿಗೆ ಅಂದಿಗೇ ೫೦ ಸಾವಿರ ರೂ.ಗಳ ಸಂಭಾವನೆ ನೀಡಿದ್ದರು. ಅದೇ ರೀತಿ **ಬೈಜು ಬಾವರ** ನಿರ್ಮಾಣದ ಸಂದರ್ಭದಲ್ಲಿ ಗೀತ ರಚನಕಾರರ ಆಯ್ಕೆಯ ಪ್ರಶ್ನೆ ಎದುರಾದಾಗ ನಿರ್ಮಾಪಕರಿಗೆ ಬೇರೊಬ್ಬರನ್ನು ಕರೆಸುವ ಇಚ್ಛೆಯಿದ್ದರೂ, ನೌಷಾದ್‌ರ ಒತ್ತಡಕ್ಕೆ ಮಣಿದು ಶಕೀಲ್ ಬದಾಯುನಿ ಅವರನ್ನೇ ನೇಮಿಸಬೇಕಾಯಿತು. ಈ ರೀತಿಯ ಉದಾಹರಣೆಗಳು ಬಹಳಷ್ಟಿವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ನೌಷಾದ್ ಎಂದಿಗೂ ಸಂಗೀತದ ಶುದ್ಧತೆಯ ಬಗ್ಗೆ ರಾಜಿ ಮಾಡಿಕೊಂಡವರಲ್ಲ. ಹಣಕ್ಕಾಗಿ ಸಂಗೀತ ನೀಡಿದವರೂ ಅಲ್ಲ. ಹಾಗೆಂದ ಮಾತ್ರಕ್ಕೆ ಅವರು ಬದಲಾವಣೆಗೆ ಸ್ಪಂದಿಸಲಿಲ್ಲ ಎಂದೇನೂ ಹೇಳಲಾಗದು. ೬೦-೭೦ರ ದಶಕದ ಸಿನಿಮಾಗಳಿಗೆ ಸಂಗೀತ ಸಂಯೋಜಿಸುವಾಗ ತಮ್ಮ ಶೈಲಿಯನ್ನು ಕಾಲಕ್ಕೆ ತಕ್ಕಂತೆ ಬದಲಿಸಿಕೊಂಡರೂ ಶಾಸ್ತ್ರೀಯ ಸಂಗೀತದ ಮೇರೆಯನ್ನು ದಾಟಿ ಹೋಗಲಿಲ್ಲ. ಹಾಗೊಮ್ಮೆ ದಾಟಿಹೋಗಿದ್ದರೆ ಅವರ ಸ್ವಂತಿಕೆ ಉಳಿಯುತ್ತಿರಲಿಲ್ಲವೇನೋ ಎಂದೆನಿಸುತ್ತದೆ. ಆದಾಗ್ಯೂ ನೌಷಾದ್ ಅವರ ಸಂಗೀತದಲ್ಲಿ ಏಕತಾನತೆ ಹೆಚ್ಚಾಗಿರುತ್ತೆಂಬ ಅಭಿಪ್ರಾಯವುಳ್ಳವರೂ ಇದ್ದಾರೆ. ಅವರು ಶಾಸ್ತ್ರೀಯ ರಾಗಗಳನ್ನು ಬಿಟ್ಟು ಹೋಗದಿದ್ದುದೇ ಅದಕ್ಕೆ ಕಾರಣ. ಆ ಏಕತಾನತೆಯಲ್ಲೂ ವೈವಿಧ್ಯತೆಯನ್ನು ಕಾಪಾಡುವುದರಲ್ಲಿ ನೌಷಾದ್ ಯಶಸ್ವಿಯಾಗಿದ್ದರು. ಅವರ ಸಂಗೀತ ಪ್ರತಿಭೆಯ ವೈವಿಧ್ಯತೆಗೆ **ಮುಘಲ್ ಎ ಆಝಮ್**‌ನ ಉದಾಹರಣೆಯೇ ಸಾಕೆನಿಸುತ್ತದೆ. ಒಂದು ಕಾಲ್ಪನಿಕ ಪ್ರೇಮಕಥೆಯಲ್ಲಿ ಯುಗಳ ಗೀತೆಯಿಲ್ಲದೆಯೇ ಹಾಡುಗಳನ್ನು ರಚಿಸಿ, ಚಿತ್ರರಂಗದಲ್ಲಿ ಇತಿಹಾಸ ಸೃಷ್ಟಿಸಿದ ಈ ಚಿತ್ರದ ಶ್ರೇಯಸ್ಸು ಹೆಚ್ಚಾಗಿ ನೌಷಾದ್ ಅವರಿಗೇ ಸಲ್ಲಬೇಕೆಂದು ನಿರ್ಮಾಪಕ ಆಸಿಫ್ ಹೇಳಿದ್ದರು. ಈ ಚಿತ್ರದಲ್ಲಿ ಸಂಗೀತದ ಎಲ್ಲಾ ಪ್ರಕಾರಗಳನ್ನೂ ಕಾಣಬಹುದಾಗಿದೆ. **ಪಾಕೀಝಾ** ಚಿತ್ರದಲ್ಲೂ ಇದೇ ಅಂಶವನ್ನು ಗುರುತಿಸಬಹುದು.

ಆಧುನಿಕ ಸಂಗೀತದ ಬಗ್ಗೆ ತಮ್ಮದೇ ಆದ ಭಿನ್ನಾಭಿಪ್ರಾಯಗಳನ್ನು ಹೊಂದಿದ್ದ ನೌಷಾದ್ ರೀಮಿಕ್ಸ್ ಸಂಸ್ಕೃತಿಯನ್ನು ಬಲವಾಗಿ ಖಂಡಿಸುತ್ತಿದ್ದರು. ಪಾಶ್ಚಿಮಾತ್ಯ ಸಂಗೀತದ ಅಂಧ ಅನುಕರಣೆಯನ್ನು ವಿರೋಧಿಸುತ್ತಿದ್ದರು. ಭಾರತೀಯ ಸಂಗೀತ ಪರಂಪರೆಯಲ್ಲಿ ಅತೀವ ವಿಶ್ವಾಸ ಮತ್ತು ಗೌರವ ಇರಿಸಿದ್ದ ನೌಷಾದ್ ಅವರಿಗೆ ಶಾಸ್ತ್ರೀಯ ಸಂಗೀತವೇ ಉಸಿರಾಗಿತ್ತು. ಹಾಗಾಗಿಯೇ ೨೦೦೫ರಲ್ಲಿ ಅವರು ಸಂಗೀತ ನಿರ್ದೇಶಿಸಿದ **ತಾಜ್‌ಮಹಲ್** ಚಿತ್ರದಲ್ಲೂ ಶಾಸ್ತ್ರೀಯ ಸಂಗೀತದ ಛಾಯೆ ಕಾಣಬಹುದು. ಖ್ಯಾತ ನಿರ್ಮಾಪಕ ಯಶ್ ಛೋಪ್ರ ಹೇಳುವಂತೆ ಭಾರತೀಯ ಸಂಗೀತ ಪರಂಪರೆಯನ್ನು ಉಳಿಸಿಕೊಂಡುಬರುವುದೇ ನಾವು ಈ ಮಹಾನ್ ಕಲಾವಿದನಿಗೆ ನೀಡುವ ಶ್ರದ್ಧಾಂಜಲಿ.

ನಾ. ದಿವಾಕರ
೫೦೪ 'ಚಿರಂತನ', ೧೩ನೇ ಕ್ರಾಸ್, ೨ನೇ ಹಂತ, ಶ್ರೀರಾಂಪುರ, ಮೈಸೂರು - ೫೭೦ ೦೨೩

## ಸಾದರ ಸ್ವೀಕಾರ

**ದೇಹಲೋಕದಲ್ಲಿ ಪುಟ್ಟ** — ಡಾ|| ಎ. ಸುಬ್ಬರಾವ್
ಪುಟ : ೭೨ — ಬೆಲೆ : ರೂ. ೬೦

**ಎಲ್ಲಿಂದ ಬಂತು ಬೂಸ್ಟ್?** (ಜೀವವಿಜ್ಞಾನ ಕಥೆಗಳು)
ಎಲ್. ಎಸ್. ಶ್ಯಾಮಸುಂದರ ಶರ್ಮ
ಪುಟ : ೬೪ — ಬೆಲೆ : ರೂ. ೫೫

**ಸುಣ್ಣದಿಂದ ಅಮೃತಶಿಲೆ** (ಭೌತವಿಜ್ಞಾನ ಕಥೆಗಳು)
ಎಲ್. ಎಸ್. ಶ್ಯಾಮಸುಂದರ ಶರ್ಮ
ಪುಟ : ೬೪ — ಬೆಲೆ : ರೂ. ೫೫

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಹಾಡು ನನ್ನ ಹಾಡು** (ಮಕ್ಕಳ ಹಾಡುಗಳು)
ಜೀನಹಳ್ಳಿ ಸಿದ್ಧಲಿಂಗಪ್ಪ
ಪುಟ : ೧೩೬ — ಬೆಲೆ : ರೂ. ೧೦೦
**ಪ್ರೇಮ ಪ್ರಕಾಶನ**, ಜೀನಹಳ್ಳಿ ಅಂಚೆ, ನ್ಯಾಮತಿ ಮಾರ್ಗ, ದಾವಣಗೆರೆ ಜಿಲ್ಲೆ - ೫೭೭ ೨೨೩

**ಸಂಬಂಧಗಳೇ ಹೀಗೆ!** (ಕಥೆಗಳು) ಜೀನಹಳ್ಳಿ ಸಿದ್ಧಲಿಂಗಪ್ಪ
ಪುಟ : ೧೬೦ — ಬೆಲೆ : ರೂ. ೧೨೫
**ದಾಮಿನಿ ಸಾಹಿತ್ಯ**, ನಂ. ೫೫೯, ೯ನೇ ಅಡ್ಡರಸ್ತೆ, ಎಂ.ಸಿ. ಲೇಔಟ್, ವಿಜಯನಗರ, ಬೆಂಗಳೂರು - ೪೦

**ಸೈತಾನನ ದಿನಗಳು** (ಕಥಾ ಸಂಕಲನ) ಹಂಝು ಮಲಾರ್
ಪುಟ : ೧೦೪ — ಬೆಲೆ : ರೂ. ೮೦
**ಸಾರಾ ಎಂಟರ್‌ಪ್ರೈಸಸ್**, ನಂ. ೫೦, ೫ನೇ ಮುಖ್ಯರಸ್ತೆ, ಸುಭಾಷ್‌ನಗರ, ಮೈಸೂರು

**ಜಲದೊಳಗಣ ಕಿಚ್ಚು** (ಶ್ರೀ ನಿರುಪಾಧೀಶರ ಜೀವನ-ಸಾಹಿತ್ಯ)
ಮಲ್ಲಿಕಾರ್ಜುನ ಯಾಳವಾರ
ಪುಟ : ೧೧೨ — ಬೆಲೆ : ರೂ. ೫೦
**ಅಡವೀಶ ಪ್ರಕಾಶನ**, ಮರೆಗುದ್ದಿ - ೫೮೭ ೧೨೧, ತಾ. ಜಮಖಂಡಿ, ಜಿ. ಬಾಗಲಕೋಟ

**ಶಿವೆ ಶಿವೆ!** (ಕವಿತೆಗಳು) — ಕೆ. ಪಿ. ನಟರಾಜ
ಪುಟ : ೧೨೭ — ಬೆಲೆ : ರೂ. ೬೫
**ಬೋಧಿಪ್ರಿಯ ಪ್ರಕಾಶನ**, ಮನೆ ನಂ. ೨-ಬಿ-೪, ಎಚ್‌ಎಂಟಿ ವಸತಿಗೃಹ, ತುಮಕೂರು

**ಮುಕ್ತೇಸರದ ನರಭಕ್ಷಕ ಮತ್ತು ಇತರ ಕತೆಗಳು**
ಜಿಮ್ ಕಾರ್ಬೆಟ್
ಕನ್ನಡ ರೂಪ : ಟಿ. ಎಸ್. ವಿವೇಕಾನಂದ
ಪುಟ : ೧೩೦ — ಬೆಲೆ : ರೂ. ೮೦

**ತಲ್ಲಾದೇಶದ ನರಭಕ್ಷಕ ಮತ್ತು ಇತರ ಕತೆಗಳು**
ಜಿಮ್ ಕಾರ್ಬೆಟ್
ಕನ್ನಡ ರೂಪ : ಟಿ. ಎಸ್. ವಿವೇಕಾನಂದ
ಪುಟ : ೧೨೮ — ಬೆಲೆ : ರೂ. ೮೦

**ಚಂಪಾವತದ ನರಭಕ್ಷಕ ಮತ್ತು ಇತರ ಕತೆಗಳು**
ಜಿಮ್ ಕಾರ್ಬೆಟ್
ಕನ್ನಡ ರೂಪ : ಟಿ. ಎಸ್. ವಿವೇಕಾನಂದ
ಪುಟ : ೧೨೦ — ಬೆಲೆ : ರೂ. ೮೦

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಇಂದ್ರಪ್ರಸ್ಥ ಪ್ರಕಾಶನ**, ನಂ. ೩೬೦, ಗವಿಪುರಂ, ಒಂದನೇ ಕ್ರಾಸ್, ಬೆಂಗಳೂರು - ೫೬೦ ೦೧೯

**ಮೊಲ್ಲೆ ಬಳ್ಳಿಗೆ ನೀರು** (ಕವನ ಸಂಕಲನ)
ಡಾ|| ಎಸ್. ಎಂ. ಮಹೇಶ್ವರಮೂರ್ತಿ
ಪುಟ : ೬೪ — ಬೆಲೆ : ರೂ. ೫೦
**ಸಾರಿಕಾ ಪ್ರಕಾಶನ**, ಶ್ರೀ ವೀರಭದ್ರೇಶ್ವರ ನಿಲಯ, 'ಬಿ' ೩ನೇ ಪ್ಯಾರಲಲ್ ರಸ್ತೆ, ಗಾಂಧಿನಗರ, ಶಿವಮೊಗ್ಗ

**ಬಸವರಾಜ ಶಾಸ್ತ್ರಿಗಳು ಕೋಡಿಕೊಪ್ಪಮಠ**
ಶಶಿಕಲಾ ವೀರಯ್ಯಸ್ವಾಮಿ
ಪುಟ : ೧೩೭ — ಬೆಲೆ : ರೂ. ೫

**ಚಿಕ್ಕ ಕಬ್ಬೂರು ಶರಣ ಲಿಂಗಪ್ಪಗೌಡರು**
ಡಾ|| ಭೋಜರಾಜ ಪಾಟೀಲ
ಪುಟ : ೧೨೪ — ಬೆಲೆ : ರೂ. ೫

**ಎಂ. ಬಿ. ಬೂದಿಹಾಳಮಠ** — ಯು. ಎನ್. ಸಂಗನಾಳಮಠ
ಪುಟ : ೭೬ — ಬೆಲೆ : ರೂ. ೫

**ತೆಲಿಗಿ ಹನುಮಂತಪ್ಪ** — ಎನ್. ಎಂ. ಕೊಟ್ರೇಶ್
ಪುಟ : ೧೩೪ — ಬೆಲೆ : ರೂ. ೨೦

**ಶ್ರೀಶೈಲ ಶಾಸನ ಸಮೀಕ್ಷೆ** — ಸಂ. : ಡಾ|| ಜಾಜಿ ದೇವೇಂದ್ರಪ್ಪ
ಪುಟ : ೫೨ — ಬೆಲೆ : ರೂ. ೩೦

**ಸುಜ್ಞಾನ ಬೋಧೆ** — ಸಂ. : ಪ್ರೊ|| ಜಿ. ಎ. ಶಿವಲಿಂಗಯ್ಯ
ಡಾ|| ಬಿ. ನಂಜುಂಡಸ್ವಾಮಿ
ಪುಟ : ೨೨೯ — ಬೆಲೆ : ರೂ. ೧೫೦

ಮೇಲಿನ ಆರು ಪುಸ್ತಕಗಳ ಪ್ರಕಾಶಕರು
**ಲಿಂಗಾಯತ ಅಧ್ಯಯನ ಸಂಸ್ಥೆ**, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ-ಗದಗ

**ಭಗವಾನ್ ಶ್ರೀ ರಮಣಮಹರ್ಷಿ** (ಕಿರುಪರಿಚಯ)
ಡಾ|| ಎಸ್. ರಾಮಸ್ವಾಮಿ
ಪುಟ : ೫೪ — ಬೆಲೆ : ರೂ. ೨೫
**ಭಾರತೀಯ ವಿದ್ಯಾ ಭವನದ ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧಿಕೇಂದ್ರ**, ನಂ. ೪೩/೧, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧

# ಜಾಗತೀಕರಣ ಮತ್ತು ಕನ್ನಡ ರಂಗಭೂಮಿ

ಬಿ. ಆರ್. ಪೋಲೀಸ್ ಪಾಟೀಲ

ಉದಾರೀಕರಣ, ಜಾಗತೀಕರಣ, ಖಾಸಗೀಕರಣ ಇವು ಇತ್ತೀಚೆಗೆ ಬಳಸಲ್ಪಡುವ ಶಬ್ದಗಳಾದರೂ ಈ ಪ್ರಕ್ರಿಯೆಯ ಆರಂಭ ಜಲಪರ್ಯಟನದ ಆರಂಭದಷ್ಟೇ ಪ್ರಾಚೀನವಾದುದು. ಜಾಗತೀಕರಣ ಮುಕ್ತ ಆಮದು-ರಫ್ತು ನೀತಿಗೆ ಸಂಬಂಧಪಟ್ಟದ್ದು. ಹೀಗೆ ಆಮದು ಮಾಡಿಕೊಳ್ಳುವ ಮುಂಚೆ ನಮ್ಮ ಮೈ ಹಾಗೂ ಮನಸ್ಸಿಗೆ ಯಾವುದು ಒಳ್ಳೆಯದು ಎಂಬ ತೀರ್ಮಾನವಾಗಬೇಕು. ಯಾವುದೇ ಸ್ವೀಕೃತಿಯ ಹಿಂದೆ ಸಮಷ್ಟಿ ಚಿಂತನ ಹಾಗೂ ಒಪ್ಪಿಗೆಯ ಅಗತ್ಯವಿದೆ. ಪಾಕಿಸ್ತಾನದ ಈರುಳ್ಳಿ ಆಮದು ಮಾಡಿಕೊಂಡು ಹಿಂದುಸ್ತಾನದ ರೈತನ ಕಣ್ಣಲ್ಲಿ ನೀರು ತರಿಸುವುದು, ಮ್ಯಾಂಚೆಸ್ಟರ್ ಬಟ್ಟೆ ಆಮದು ಮಾಡಿಕೊಂಡು ಹತ್ತಿ ಕ್ಷೇತ್ರವನ್ನು ಸತ್ಯನಾಶಮಾಡುವುದು ಔದಾರ್ಯೀಕರಣವಲ್ಲ, ಅದು ಮೂರ್ಖತನ. ಹೀಗಾಗಿ ಹೊರಗಿನಿಂದ ಬರುವುದೆಲ್ಲಕ್ಕೂ ಮುಕ್ತ ಅವಕಾಶ ಮಾಡಿಕೊಡುವುದೆಂದರೆ ಮಾರಿಗೆ ದ್ವಾರ ತೆರೆದಿಟ್ಟು ಮಲಗಿಕೊಂಡಂತೆಯೆ.

ಸ್ವಾತಂತ್ರ್ಯಾನಂತರದ ದಿನಗಳ ಹಸಿವು, ದಾರಿದ್ರ್ಯ, ಕ್ಷಾಮಗಳ ಭೀತಿ ಹಸಿರು ಕ್ರಾಂತಿಯಿಂದಾಗಿ ದೂರವಾಗಿದೆ. ಈಗ ಹಸಿದ ಹೊಟ್ಟೆಗೆ ಅನ್ನ, ಉಳ್ಳವರ ಮೈಮೇಲೆ ಚಿನ್ನ ಸಿಕ್ಕುವ ಭರವಸೆ ಹುಟ್ಟಿದೆ. ಕೆಲವು ಜನ ಎಷ್ಟು ಶ್ರೀಮಂತರಾದರೇನು, ಬಹುಮಂದಿ ಹೊಟ್ಟೆಗೆ ಹಿಟ್ಟಿಲ್ಲದೆ ನರಳುತ್ತಿದ್ದರೆ! ಶ್ರೀಸಾಮಾನ್ಯನ ಸುಖ-ಸಂತೋಷಗಳನ್ನು ಹೆಚ್ಚಿಸದಿದ್ದರೆ ಔದಾರ್ಯೀಕರಣ, ಜಾಗತೀಕರಣ ಅರ್ಥಹೀನ ಬಡಬಡಿಕೆಗಳಾಗಿಬಿಡುತ್ತವೆ. ಭೌತಿಕ ಕ್ಷೇತ್ರದಲ್ಲಿ ಆಗಿರುವ ವಿಸ್ಮಯಕಾರಿ ಬೆಳವಣಿಗೆ ಮಾನಸಿಕ, ಪಾರಮಾರ್ಥಿಕ ಹಾಗೂ ಮನೋವೈಜ್ಞಾನಿಕ ಪಾತಳಿಯಲ್ಲೂ ಆಗಬೇಕಿತ್ತು. ಭಾರತದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂದರ್ಭದಲ್ಲಿ ಹಾಗಾಗಿಲ್ಲ ಎನ್ನುವುದೇ ಬಹುದೊಡ್ಡ ವ್ಯಂಗ್ಯ. ಜೀವನ ಮಟ್ಟದಲ್ಲಿ ಸುಧಾರಣೆಯಾಗದಿದ್ದರೆ 'ಅಭಿವೃದ್ಧಿ' ಎಂಬ ಪದವೇ ಅರ್ಥ ಕಳೆದುಕೊಳ್ಳುತ್ತದೆ.

ಜಾಗತೀಕರಣ ಹಾಗೂ ಔದಾರ್ಯೀಕರಣ ಹೊಸ ಹೊಸ ಆಯ್ಕೆಗಳನ್ನು ಹರವಿ ಅದ್ಭುತ ಕನಸುಗಳನ್ನು ಹುಟ್ಟಿಸುತ್ತಿವೆ. ಈ ಆಯ್ಕೆ ಹಾಗೂ ಕನಸುಗಳ ಸ್ಥಾಯಿ ಹಾಗೂ ಸಂಚಾರಿಭಾವ ರೋಚಕತೆಯೇ ಆಗಿದೆ. ಮಾಧ್ಯಮ ಹಾಗೂ ಮನರಂಜನಾ ಕ್ಷೇತ್ರದಲ್ಲಿ ಕೂಡ ಇಂಥ ಅವಘಡಗಳು ಸಂಭವಿಸುತ್ತಿರುವುದರಿಂದ ಸಾಮಾನ್ಯ ನೋಡುಗ ಕಂಗಾಲಾಗಿದ್ದಾನೆ.

ಸಾಮಾನ್ಯವಾಗಿ ವಸ್ತು ಹಾಗೂ ನೀತಿಪ್ರಧಾನವಾಗಿರುತ್ತಿದ್ದ ನಮ್ಮ ಪ್ರದರ್ಶನ ಕಲೆಗಳು ಜಾಗತೀಕರಣದಿಂದಾಗಿ, ನಮ್ಮ ಉದಾರನೀತಿಯಿಂದಾಗಿ ಇಂದು ಬರಿ ತಂತ್ರಪ್ರಧಾನವೂ, ರೋಚಕವೂ ಆಗತೊಡಗಿದ್ದು, ಇಂಥ ಹೊಸ ಪ್ರಯೋಗಗಳನ್ನು ನೋಡಲು ಭಯವಾಗತೊಡಗಿದೆ. ನಮ್ಮ ರಾಮಾಯಣ, ನಮ್ಮ ಮಹಾಭಾರತ ನಮ್ಮವಾಗಿ ಉಳಿದಿಲ್ಲ. ಡ್ರಗ್ಗು, ಡ್ರಮ್ಮು, ರಮ್ಮು ನಮ್ಮ ಯುವ ಪೀಳಿಗೆಯ ಹೊಸ ಸೆನ್ಸೇಶನ್ ಆಗುತ್ತಿರುವುದು ಔದಾರ್ಯೀಕರಣದ ಕಹಿ ಫಲ. ನಮ್ಮ ಪ್ರತಿಮಾ ಬೇಡಿ, ಮಾಯಾರಾವ್, ರವಿಶಂಕರ್, ಮಲ್ಲಿಕಾರ್ಜುನ ಮನ್ಸೂರ್‌ಗಿಂತ ಅಮೆರಿಕಾದ ಮೈಕೆಲ್ ಜಾಕ್ಸನ್ ನಮ್ಮ ಯುವಕರಿಗೆ ಹೆಚ್ಚು ಪ್ರಸ್ತುತನಾಗತೊಡಗಿದ್ದಾನೆ. ನಮ್ಮ ಧರ್ಮದ ಔನ್ನತ್ಯ ಬೆನ್ನಿಹಿನ್‌ರಂಥವರ ವೈಭವ ಹಾಗೂ ಚಮತ್ಕಾರಗಳ ಎದುರು ತಲೆಬಾಗುತ್ತಿದೆಯೆಂಬುದು ಬಹುದೊಡ್ಡ ದುರಂತ.

ಹೀಗೆ ಜಾಗತೀಕರಣ ನಮ್ಮ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ, ವೈಯಕ್ತಿಕ ಹಾಗೂ ಮನೋವೈಜ್ಞಾನಿಕ ರಂಗಗಳಲ್ಲಿ ಪಲ್ಲಟಕ್ಕೆ ಕಾರಣವಾಗಿದೆ, ಹೊಸ ಹೊಸ ಭ್ರಮೆಗಳನ್ನು ಸೃಷ್ಟಿಮಾಡಿದೆ. ಇದರಿಂದ ನಮ್ಮ ಸಿನೇಮಾ, ನಮ್ಮ ರಂಗಭೂಮಿ ಕೂಡ ಹೊರತಾಗಿಲ್ಲ. ವಿಶೇಷವಾಗಿ, ಮೇಲೆ ಹೆಸರಿಸಿದ ಎಲ್ಲ ಕ್ಷೇತ್ರಗಳಲ್ಲೂ ಕ್ರಾಂತಿಕಾರಿ ಬದಲಾವಣೆಗೆ ಟೆಲಿವಿಜ಼ನ್ ಕಾರಣವಾಗಿದ್ದು ಇದು ನಮಗೆ ಬೇಕೆ-ಬೇಡವೆ ಎಂಬ ಬಿಸಿ ಬಿಸಿ ಚರ್ಚೆಗೆ ಪ್ರಮುಖ ಗ್ರಾಸವಾಗತೊಡಗಿದೆ. ಜಾಹೀರಾತು, ಪ್ರಾಯೋಜಕತ್ವ ಸಾಂಪ್ರದಾಯಿಕ - ಸೌಜನ್ಯದ ಗೆರೆದಾಟಿ ಕೊಡು ಕೊಳ್ಳುವಿಕೆಯ ಪಾವಿತ್ರ್ಯವನ್ನೇ ಹಾಳುಗೆಡವಿದೆಯೆಂಬ ಆಕ್ರೋಶಕ್ಕೂ ಕಾರಣವಾಗಿದೆ. ಕನ್ನಡ ರಂಗಭೂಮಿ ಕೂಡ ಇದಕ್ಕೆ ಹೊರತಾಗಿಲ್ಲವೆಂದು ಹೇಳುವ ಮೂಲಕ ಇದರೊಳಗೆ ಒಂದು ಒಳನೋಟ ಹರಿಸುತ್ತಿರುವೆ.

ನಮ್ಮ ರಂಗಭೂಮಿಯನ್ನು ಸ್ಥೂಲವಾಗಿ ನಾಲ್ಕು ಪ್ರಕಾರಗಳಾಗಿ ವಿಂಗಡಿಸಬಹುದು. ಜಾನಪದ ರಂಗ ಭೂಮಿ, ವೃತ್ತಿ ರಂಗಭೂಮಿ, ಹವ್ಯಾಸಿ ರಂಗಭೂಮಿ ಹಾಗೂ ಅರೆವೃತ್ತಿ ರಂಗಭೂಮಿ – ಇವೇ ಆ ನಾಲ್ಕು ಪ್ರಕಾರಗಳು.

ಜಾನಪದ ರಂಗಭೂಮಿ ಧರ್ಮಕ್ಕಿಂತ ಪ್ರಾಚೀನವಾದುದು. ಮೊದಲು ಮಾನವ ಹೊಟ್ಟೆಪಾಡಿಗಾಗಿ ಪ್ರಾಣಿಗಳ ಧ್ವನಿ ಅನುಕರಣಮಾಡಿ, ಬೇಟೆಯಾಡುವ ಕ್ರಿಯೆಯಲ್ಲೇ ಅದು ಮೊಳಕೆಯೊಡೆದಿದೆಯೆಂದು ಹೇಳಬಹುದು. ವೃತ್ತಿರಂಗಭೂಮಿಗೆ – ನೂರು-ನೂರಾಇಪ್ಪತ್ತು ವರ್ಷಗಳ ಇತಿಹಾಸವಿದ್ದೀತು. ಹವ್ಯಾಸಿ ರಂಗಭೂಮಿಯ

ಬಹುರಾಷ್ಟ್ರೀಯ ಕಂಪನಿಗಳು ತೋರಿಸುವ ಆಮಿಷ, ಹುಟ್ಟಿಸುವ ಭ್ರಮೆ, ನಮ್ಮವೇ ವಸ್ತುಗಳ ಪೇಟೆಂಟ್ ಕಸಿದುಕೊಳ್ಳುವುದು... ಇದೆಲ್ಲ ಜಾಗತೀಕರಣದ ದುರಂತ. ಭಾರತೀಯತೆ ನಿಗೂಢ ಹಾಗೂ ಶ್ರೀಮಂತವಾಗಿದೆ. ಹೊರಗಿನಿಂದ ಬಂದ ದುರಾಕ್ರಮಣಕಾರರೂ ಇಲ್ಲಿಯ ಸಾಂಸ್ಕೃತಿಕ ಶ್ರೀಮಂತಿಕೆಗೆ ಮಾರುಹೋಗಿ ಭಾರತೀಯರಾಗಿಹೋದದ್ದು ಚರಿತ್ರೆಯ ಒಂದು ಭಾಗ. ಅಕಬರನ ಜನಾಂಗದ ಮೂಲ ಪುರುಷ ತೈಮೂರ ಹೂಣ ದುರಾಕ್ರಮಣಕಾರ. ಹೀಗಿದ್ದಾಗ್ಯೂ ಅಕಬರ ಅಪ್ಪಟ ಭಾರತೀಯನೆನಿಸಲಿಲ್ಲವೆ? ಹೀಗೆ ಹೊರಗಿನಿಂದ ಬರುವುದೆಲ್ಲವನ್ನೂ ವಿವೇಚನೆಯಿಂದ ಸ್ವೀಕರಿಸಿ ನಮ್ಮತನವನ್ನು ಉಳಿಸಿಕೊಳ್ಳಬೇಕಾಗಿರುವುದು ಕನ್ನಡ ರಂಗಭೂಮಿಯ ಆಶಯವಾಗಲಿ ಎಂಬುದು ಈ ಲೇಖನದ ಆಶಯ.



ಐತಿಹ್ಯದ ಬಗ್ಗೆ ಮಾತನಾಡುವುದು ತುಂಬ ಕಷ್ಟ. ಕವಿರಾಜಮಾರ್ಗಕಾರನೇ ಪಗರಣ ಬೀದಿಗೊಟ್ಟಿಗಳ ಬಗ್ಗೆ ಪ್ರಸ್ತಾಪ ಮಾಡುತ್ತಾನೆ ಮತ್ತು ಹನ್ನೆರಡನೇ ಶತಮಾನದಲ್ಲಿ ಬಹುರೂಪಿ ಚೌಡಯ್ಯನೆಂಬ ಶರಣ ಬಹುರೂಪ ಧರಿಸಿ ಹಲವು ಪ್ರಸಂಗಗಳನ್ನು ಅಭಿನಯಿಸುತ್ತಿದ್ದ ಬಗ್ಗೆ ವಚನಗಳಲ್ಲೇ ದಾಖಲೆಗಳು ಸಿಗುತ್ತವೆ. ಇನ್ನು ಅರೆವೃತ್ತಿ ರಂಗಭೂಮಿ – ಸಾವಿರದ ಒಂಭೈನೂರಾ ಅರವತ್ತರ ದಶಕದಿಂದೀಚಿನದು. ನೀನಾಸಂ, ರಂಗಾಯಣ, ಕಿನ್ನರಮೇಳ, ಶಿವಸಂಚಾರದ ಪ್ರಯೋಗಗಳು ಈ ಪ್ರಕಾರದಲ್ಲಿ ಉಲ್ಲೇಖಾರ್ಹವಾಗಿವೆ.

ಭಾರತದಲ್ಲಿ ಈಸ್ಟ್ ಇಂಡಿಯಾ ಕಂಪನಿ ಆರಂಭವಾದಂದಿನಿಂದ ಯೂರೋಪಿಯನ್ನರು ತಮ್ಮ ಮನರಂಜನೆಗಾಗಿ, ತಮ್ಮ ತಮ್ಮ ದೇಶಗಳಿಂದ ನಾಟಕ ತಂಡಗಳನ್ನು ಕರೆಸಿ ಪ್ರಯೋಗಿಸುತ್ತಿದ್ದರು. ಬರಬರುತ್ತ ಸ್ಥಳೀಯರನ್ನು ಹುರಿದುಂಬಿಸಿ ತಂಡಕಟ್ಟಿ ಪ್ರಯೋಗಿಸಲು ಪ್ರೇರಣೆ ನೀಡಿದರು. ಹೀಗೆ, ಈ ಉದ್ದೇಶದಿಂದ ಹುಟ್ಟಿಕೊಂಡ ಬಾಲಿವಾಲಾ ಪಾರ್ಸಿ ನಾಟಕ ಕಂಪನಿಯ ಪ್ರಯೋಗಗಳು ಮೈಸೂರು ಅರಸರಿಗೆ ಪ್ರೇರಣೆ ನೀಡಿದ್ದರಿಂದ ಅರಮನೆಯ ನಾಟಕ ತಂಡವೊಂದು ಹುಟ್ಟಿತು. ಈ ಅರಮನೆ ತಂಡಕ್ಕಾಗಿ ನಾಟಕ ರಚನೆ ಮಾಡಿದವರಲ್ಲಿ, ಬಸವಪ್ಪ ಶಾಸ್ತ್ರಿಗಳು ಪ್ರಮುಖರು. ಅವರು ಸ್ವತಂತ್ರ ನಾಟಕಗಳ ಜೊತೆಗೆ



ಷೇಕ್ಸ್‌ಪಿಯರ್‌ನ ಹಲವು ನಾಟಕಗಳನ್ನು ಅನುವಾದಿಸಿಕೊಟ್ಟರು. ಉತ್ತರ ಕರ್ನಾಟಕದಲ್ಲಿ ಕೆರೂರು ವಾಸುದೇವಾಚಾರ್ಯರು ಈ ಕಾರ್ಯ ಮಾಡಿದರು. ಮುಂದೆ – ಇಂಗ್ಲೆಂಡಿನಿಂದ ಹಿಂದಿರುಗಿದ ಶ್ರೀರಂಗ ಹಾಗೂ ಟಿ. ಪಿ. ಕೈಲಾಸಂ ಅವರುಗಳು ಭಾರತೀಯ ಭ್ರಾಮಕ ಪರಿಸರದಿಂದ ಐರೋಪ್ಯ ವಾಸ್ತವರಂಗದತ್ತ ನಮ್ಮ ಪ್ರೇಕ್ಷಕರನ್ನು ಕೊಂಡೊಯ್ದು ಹೊಸ ಅನುಭವ ನೀಡಿದರು. ಇದು ಜಾಗತೀಕರಣದ ಸಿಹಿ ಫಲ. ಕೃತ್ರಿಮತೆಯ ಬೇಡಿ ಕಳಚಿ ಕನ್ನಡ ನಾಟಕ – ಕಳಕಳಿಸಿದ್ದು ಇವರಿಂದಲೇ.

ಸಾವಿರದ ಒಂಭೈನೂರ ಅರವತ್ತರ ದಶಕದಿಂದೀಚೆಗೆ ಕನ್ನಡ ರಂಗಭೂಮಿಯಲ್ಲಿ ಹೊಸ ಹೊಸ ಪ್ರಯೋಗಗಳು ನಡೆದುವು.

ಗ್ರೀಸ್‌ನ ಪ್ರಮುಖ ನಾಟಕಕಾರರಾದ ಸೊಫೋಕ್ಲಿಸ್, ಯೂರಿಪಿಡಿಸ್, ಅರಿಸ್ಟಾಫೆನಿಸ್‌ರ ಕೃತಿಗಳನ್ನು ಲಂಕೇಶ್, ಎಚ್. ಎಂ. ಚೆನ್ನಯ್ಯ, ಸುಮತೀಂದ್ರ ನಾಡಿಗ, ಕೆ. ಮರುಳಸಿದ್ಧಪ್ಪ, ಪಿ. ವಿ. ನಾರಾಯಣ, ಟಿ. ವಿ. ವೆಂಕಟಾಚಲಶಾಸ್ತ್ರೀ, ಸಿ. ಪಿ. ಕೃಷ್ಣಕುಮಾರ್ ಮುಂತಾದವರು ಅನುವಾದಿಸಿದರು ಇಲ್ಲವೇ ರೂಪಾಂತರಿಸಿ ಕನ್ನಡ ರಂಗಭೂಮಿಯ ಹೊಸ ಪ್ರಯೋಗಗಳಿಗೆ ಕಾರಣರಾದರು. ಇವರಿಗೆ ಮುಂಚೆ ಇಂಗ್ಲಿಷ್ ಗೀತೆಗಳ ಅನುವಾದ ಹಾಗೂ 'ಅಶ್ವತ್ಥಾಮನ್' ಕೃತಿಯ ರೂಪಾಂತರದ ಮೂಲಕ ಪ್ರೇರಣೆ ನೀಡಿದವರು ಕನ್ನಡದ ಭೀಷ್ಮ ಬಿ. ಎಂ. ಶ್ರೀಕಂಠಯ್ಯನವರು.

ಈ ಹೊಸ ಪ್ರಯೋಗ ಷೇಕ್ಸ್‌ಪಿಯರ್‌ನ ನಾಟಕಗಳ ಮರುಚಿಂತನಕ್ಕೆ ಪ್ರೇರಣೆ ನೀಡಿತು. ಗೋಪಾಲ ವಾಜಪೇಯಿ, ರಾಮಚಂದ್ರ ದೇವ, ಕೆ. ಎಸ್. ನಿಸಾರ್ ಅಹ್ಮದ್‌ರಂಥವರು ಷೇಕ್ಸ್‌ಪಿಯರನ ನಾಟಕಗಳನ್ನು ಅನುವಾದಿಸಿಕೊಟ್ಟರು. ಈಗ ಭಗವಾನ್ ಅದನ್ನು ಮಾಡುತ್ತಿದ್ದಾರೆ.

ಜರ್ಮನ್ ನಾಟಕಕಾರ ಬರ್ಟೋಲ್ಟ್ ಬ್ರೆಕ್ಟ್‌ನ ನಾಟಕಗಳಾದ – 'ಗೆಲಿಲಿಯೊ', 'ಥ್ರೀ ಪೆನ್ನಿ ಆಪೆರಾ', 'ದ ಕಾಕೇಸಿಯನ್ ಚಾಕ್-ಸರ್ಕಲ್' ಮುಂತಾದವು ಕನ್ನಡ ರಂಗಭೂಮಿಯ ಮೇಲೆ ಕಾಣಿಸಿಕೊಂಡವು. ಮತ್ತೊಬ್ಬ ಜರ್ಮನ್ ನಾಟಕಕಾರ ಥಾಮಸ್ ಮನ್‌ನ ನಾಟಕದಿಂದ ಪ್ರೇರಣೆ ಪಡೆದ ಕಾರ್ನಾಡರು 'ಹಯವದನ' ನಾಟಕ ಬರೆದದ್ದು ಸಾವಿರದ ಒಂಭೈನೂರಾ ಅರವತ್ತರ ದಶಕದ ಆರಂಭದಲ್ಲಿ. ಮನುಷ್ಯ ಆಕೃತಿ, ಕುದುರೆಯ ತಲೆ – ಇದಕ್ಕೆ ಬ್ರೆಕ್ಟ್‌ನ ಎಪಿಕ್ ರಂಗಭೂಮಿ ಹಾಗೂ ಥಾಮಸ್ ಮನ್‌ರ ಪ್ರೇರಣೆ ಇತ್ತು ಎಂದು ಹೇಳುವ ರಂಗ ವಿಮರ್ಶಕರು ನಮ್ಮ ಜನಪದ ರಂಗಭೂಮಿಯಲ್ಲಿ ಪ್ರಚಲಿತವಿದ್ದ ಗಂಡಭೇರುಂಡ ಹಾಗೂ ಮತ್ಸ್ಯಕನ್ಯೆಯರ ಪರಿಕಲ್ಪನೆಗಳನ್ನು ಉಪೇಕ್ಷೆ ಮಾಡಿದ್ದಾರೆಂದೇ ಹೇಳಬೇಕು. ನಮ್ಮ ಜನಪದ ಹಾಗೂ ಸಂಸ್ಕೃತ ರಂಗಭೂಮಿ ಪಾಶ್ಚಾತ್ಯರಿಗಿಂತ ಶತಶತಮಾನಗಳಷ್ಟು ಮುಂದಿದ್ದರೂ ಹೀಗೆ ನಮ್ಮನ್ನು ಕುಬ್ಜರಾಗಿಸಿದ್ದು ಉಚಿತವಲ್ಲ.

ಕನ್ನಡದ ನವ್ಯ ನಾಟಕಕಾರರಾದ ಕಾರ್ನಾಡರು ಯೂರೋಪಿನ ಅನುಭವಗಳ ಜೊತೆಗೆ ಅಲ್ಲಿನ ನಾಟಕಗಳ ಶ್ರೇಷ್ಠತೆಯನ್ನು ಮೈಗೂಡಿಸಿಕೊಂಡರು. ಆಲ್ಬರ್ಟ್ ಕಾಮು, ಫ್ರಾಂಜ್ ಕಾಫ್ಕಾ ಮುಂತಾದವರಿಂದ ಪ್ರೇರಣೆ ಪಡೆದುಕೊಂಡು 'ತುಘಲಕ್', 'ಯಯಾತಿ'ಯಂಥ ಉತ್ತಮ ನಾಟಕಗಳನ್ನು ಕನ್ನಡ ರಂಗಭೂಮಿಗೆ ನೀಡಿದರು.

ಜಾಗತೀಕರಣದ ದಟ್ಟ ಪ್ರಭಾವ ಎರಡು ಮಹಾಯುದ್ಧಗಳ ನಂತರದ ನಿರ್ವಾತ ಸ್ಥಿತಿಯಿಂದ ಉಂಟಾಯಿತೆನ್ನಬಹುದು. ಜೀವಜಗತ್ತಿನ ಬರ್ಬರತೆ, ಕ್ರೌರ್ಯ, ಸ್ವಾರ್ಥ, ಸ್ವಲೋಲುಪತೆ ಮನುಷ್ಯನಲ್ಲಿ ಹತಾಶ ಭಾವವನ್ನು ಹುಟ್ಟಿಸಿತು. ೧೯೫೦ರ ದಶಕದ ಇಂಗ್ಲೆಂಡಿನ ಶ್ರೇಷ್ಠ ನಾಟಕಕಾರರಾದ ಅಯನೆಸ್ಕೊ, ಆರ್ಸ್ಬೋನ್, ಆಸ್‌ಬರ್ನ್, ಪೀಟರ್, ಪೆಸ್ಕರ್ ಮುಂತಾದವರ ಗಾಢವಾದ ಪ್ರಭಾವ ಕನ್ನಡದ ನವ್ಯ ಹಾಗೂ ಅಸಂಗತ ನಾಟಕಕಾರರ ಹಾಗೂ ರಂಗಕರ್ಮಿಗಳ ಮೇಲೆ ಆಯಿತು.

ಯುದ್ಧಾನಂತರದ ಸಾಂಸ್ಕೃತಿಕ ಹಾಗೂ ಸಾಮಾಜಿಕ ನಿರ್ವಾತ ಸ್ಥಿತಿಯನ್ನು ಸ್ಯಾಮ್ಯುಯೆಲ್ ಬೆಕೆಟ್ ತನ್ನ 'ವೈಟಿಂಗ್ ಫಾರ್ ಗೋಡೋ'ದಲ್ಲಿ ಚಿತ್ರಿಸಿದ್ದನ್ನು ಚಂದ್ರಕಾಂತ ಕುಸನೂರ ಅವರು ತಮ್ಮ 'ವಿದೂಷಕ' ನಾಟಕದಲ್ಲಿ 'ಕ್ರೂರ ಇನ್ನೂ ಬರಲಿಲ್ಲ' ಎಂಬ ಶಬ್ದಗಳ ಪುನರುಕ್ತಿಯಿಂದ ಸಾವಿಗಾಗಿ ಕಾಯುತ್ತಿರುವ ಆಧುನಿಕ ಮನುಷ್ಯನ ಹತಾಶಭಾವವನ್ನು ಅಭಿವ್ಯಕ್ತಿಸಿದ್ದಾರೆ. ಯುದ್ಧದ ಕಪ್ಪುಛಾಯೆ ನಮ್ಮ ದೇಶ, ನಮ್ಮ ನಾಡುಗಳ ಮೇಲೆ ಇಂಗ್ಲೆಂಡ್, ಅಮೆರಿಕಾ, ರಷ್ಯಾ, ಜಪಾನ್, ಜರ್ಮನಿಗಳ ಮೇಲೆ ಆದಷ್ಟು ಆಗಿರಲಿಲ್ಲ. ಆದಾಗ್ಯೂ ಚಂಪಾ, ಲಂಕೇಶ್, ಚೆನ್ನಯ್ಯ, ಕಾರ್ನಾಡ್ ಅವರಂಥ ನಾಟಕಕಾರರು ಕೆಲ ಅಸಂಗತ ಎನ್ನಬಹುದಾದಂಥ ನಾಟಕಗಳನ್ನು ನೀಡಿದರು. ಯೂರೋಪಿನಲ್ಲಿ ಸೃಷ್ಟಿಯಾದಂಥ ಶೂನ್ಯಸ್ಥಿತಿ ನಮ್ಮಲ್ಲಿ ನಿರ್ಮಾಣವಾಗಿರಲಿಲ್ಲವಾದ್ದರಿಂದ ಅಸಂಗತ ನಾಟಕಗಳು ಬರಿ ಪ್ರಯೋಗಗಳಾಗಿ ಮಾತ್ರ ಸುಂಟರಗಾಳಿಯಂತೆ ಬಂದುಹೋದವು.

ಕನ್ನಡದ ನವ್ಯನಾಟಕಗಳ ಪ್ರಯೋಗಗಳು ಹೆಚ್ಚುಕಡಿಮೆ ಐರೋಪ್ಯಮಾದರಿಯಲ್ಲೇ ನಡೆದುವು. ಈ ಸರಣಿಯಲ್ಲಿ ಬಂದ ಕನ್ನಡದ ಅತ್ಯಂತ ಪ್ರಮುಖ ನಾಟಕಕಾರ ಗಿರೀಶ ಕಾರ್ನಾಡ ಅವರ ಆಚಾರ್ಯಕೃತಿ ಎಂದು ಹೇಳಲಾಗುತ್ತಿರುವ 'ತುಘಲಕ್' ಮೇಲೆ ಕಾಮುವಿನ 'ಕ್ಯಾಲಿಗುಲ' ನಾಟಕದ ಪ್ರಭಾವ ಇದೆಯೆಂದು ತಾರಾನಾಥ್ ಅಭಿಪ್ರಾಯಪಡುತ್ತಾರೆ. ಪ್ರಭಾವ ಎಂದರೆ ಅನುಕರಣೆಯೇ ಆಗಬೇಕಿಲ್ಲ, ಮಾದರಿಯಾಗಿ ತೆಗೆದುಕೊಂಡರು ಎಂದು ಹೇಳಬಹುದೇನೋ. ಕಾರ್ನಾಡರು ಯೂರೋಪಿನಿಂದ ಎಷ್ಟನ್ನು ಪಡೆದುಕೊಂಡರೂ ಅಷ್ಟನ್ನು ಯೂರೋಪಿಗೆ ಕೊಟ್ಟದ್ದೂ ಇದೆ. ಅವರ ನಾಟಕಗಳ ಇಂಗ್ಲಿಷ್ ಆವೃತ್ತಿಗಳು ಇಂಗ್ಲೆಂಡ್‌ನಲ್ಲಿ ಪ್ರಯೋಗಗೊಂಡು ಪ್ರಶಂಸೆ ಪಡೆದದ್ದಿದೆ. ಇದು ಯೂರೋಪಿಗೆ ಕನ್ನಡದ ಕೊಡುಗೆಯೆಂದು ಹೇಳುವುದು ಅತಿಶಯೋಕ್ತಿಯಲ್ಲ. ಈ ಕೊಡುಕೊಳ್ಳುವಿಕೆಗೆ ಕಾರಣರಾದ ಗಿರೀಶ್ ಕಾರ್ನಾಡ್, ಅಲೆಕ್ ಪದಂಸೆಯಂಥವರು ಅಭಿನಂದನಾರ್ಹರು. ಸ್ವಾತಂತ್ರ್ಯೋತ್ತರ ಭಾರತದ ಸಾಮಾಜಿಕ, ಆರ್ಥಿಕ ಸ್ಥಿತ್ಯಂತರಗಳು, ಶ್ರೀಸಾಮಾನ್ಯನ ಭ್ರಮನಿರಸನ, ಜನಪ್ರತಿನಿಧಿಗಳ ಬೇಜವಾಬ್ದಾರಿತನ ಇವುಗಳನ್ನೆಲ್ಲ ಗರ್ಭೀಕರಿಸಿಕೊಂಡು ಸಮರ್ಥ ನಾಟಕಗಳನ್ನು ನೀಡುವವರ ಕೊರತೆ ಭಾರತದ ಇತರ ಭಾಷೆಗಳಲ್ಲಿ ಕಂಡುಬಂದಂತೆ ಕನ್ನಡದಲ್ಲೂ ಕಂಡುಬಂದಾಗ ಪಾಶ್ಚಾತ್ಯ ದೈತ್ಯ ಷೇಕ್ಸ್‌ಪಿಯರ್‌ನ ನಾಟಕಗಳ ಮರುವ್ಯಾಖ್ಯಾನದ ಪ್ರಯತ್ನಗಳು ನಡೆದುವು. ಯೂರೋಪಿನ ಉಳಿದ ನಾಟಕಕಾರರಿಗೂ ಷೇಕ್ಸ್‌ಪಿಯರ್‌ಗೂ ಇರುವ ವ್ಯತ್ಯಾಸವೆಂದರೆ ಆತನ ನಾಟಕಗಳು ಬರಿ ಮೆದುಳನ್ನು ಮುಟ್ಟದೆ ಹೃದಯವನ್ನೂ ತಟ್ಟುತ್ತವೆ ಎಂಬುದಾಗಿದೆ. ಆತನ ನಾಟಕಗಳಲ್ಲಿ ಪಾತ್ರ ಮಾಡುತ್ತ ಮಾಡುತ್ತ ಅವುಗಳ ಒಳಗೆ ಇಳಿದ ಆರ್ಮ್‌ಸ್ಟ್ರಾಂಗ್ ಭಾರತದಲ್ಲಿ, ಕರ್ನಾಟಕದಲ್ಲಿ ಆ ಕುರಿತು ಉಪನ್ಯಾಸಗಳನ್ನು ನೀಡಿದ. 'ಮರ್ಚಂಟ್ ಆಫ್ ವೆನಿಸ್' ನಾಟಕದ ಶೈಲಾಕ್ ಪಾತ್ರಧಾರಿಯಾಗಿದ್ದ ಆತ ಶೈಲಾಕ್ ಪಾತ್ರದ ಪ್ರದರ್ಶನವನ್ನು ಬೆಂಗಳೂರಲ್ಲಿ ನೀಡಿದಾಗ ಅದರ ಪರಿಣಾಮದಿಂದ ನರಸಿಂಹನ್ – ಸಿ. ಆರ್. ಸಿಂಹ ಪ್ರೇರಿತರಾಗಿ ಟಿಪಿಕಲ್ ಟಿ. ಪಿ. ಕೈಲಾಸಂ ಹಾಗೂ ರಸಋಷಿಗಳಂಥ ವಿನೂತನ ಪ್ರಯೋಗಗಳಿಗೆ, ಮುಂದಾದರೇನೋ! ಷೇಕ್ಸ್‌ಪಿಯರ್‌ನ ಪಾತ್ರಗಳ ಅಂತರ್ಮುಖತೆ ಕನ್ನಡದ ಕೆಲವಾದರೂ ಪಾತ್ರಗಳಿಗೆ ದಕ್ಕಿದ್ದಕ್ಕೆ ಈ ಮುಕ್ತ ಸ್ವೀಕೃತಿ ಕಾರಣವಾಯಿತೆನ್ನಬೇಕು. ಆದಾಗ್ಯೂ ಒಂದು ವಿಷಾದ ಮನದ ಆಳದಲ್ಲಿ ಉಳಿಯುತ್ತದೆ. ಅದೇನೆಂದರೆ ಕನ್ನಡದಲ್ಲಿ 'ಮೌಸ್‌ಟ್ರ್ಯಾಪ್'ದಂಥ ನಾಟಕ ಹಾಗೂ ಮೆಗಾ ಪ್ರದರ್ಶನಗಳು ಸಾಧ್ಯವಾಗುತ್ತಿಲ್ಲ ಎಂಬುದು. ಅಗಥಾ ಕ್ರಿಸ್ಟಿ ರಚಿಸಿದ 'ಮೌಸ್‌ಟ್ರ್ಯಾಪ್' ಎಂಬ ನಾಟಕ ಐವತ್ತಮೂರು ವರ್ಷಗಳಿಂದ ಲಂಡನ್‌ನಲ್ಲಿ ಸತತ ಪ್ರದರ್ಶನಗಳನ್ನು ಕಾಣುತ್ತಿದೆ. ಈ ನಾಟಕದ ಪ್ರಥಮ ಪ್ರದರ್ಶನದ ದಿನ ಎಲಿಜಬೆಥ್ ರಾಣಿ ಇಂಗ್ಲೆಂಡಿನ ಪಟ್ಟವನ್ನೇರಿದ್ದರು. ಅದರ ಐವತ್ತನೇ ವರ್ಷದ ಗೋಲ್ಡನ್ ಶೋಗೆ ಅವರೂ ಬಂದಿದ್ದರಂತೆ. ಹತ್ತು ಹನ್ನೆರಡು ಮಿಲಿಯನ್ ಪ್ರೇಕ್ಷಕರು ಜಗತ್ತಿನ ನಲವತ್ತಾಲ್ಕು ದೇಶಗಳಲ್ಲಿ ಕನಿಷ್ಠ ೨೮ ಭಾಷೆಗಳಲ್ಲಿ ಈ ನಾಟಕವನ್ನು ನೋಡಿರುವುದು

ಒಂದು ವಿಶ್ವದಾಖಲೆ. ಸರ್ ರಿಚರ್ಡ್ ಅಟನ್‌ಬರೊ 'ಮೌಸ್‌ಟ್ರ್ಯಾಪ್' ನಾಟಕದ ಮೊದಲ ಪ್ರದರ್ಶನದಲ್ಲಿ ನಟರಾಗಿದ್ದವರು ಐವತ್ತನೇ ವರ್ಷದ ಪ್ರದರ್ಶನಕ್ಕೂ ಹಾಜರಿದ್ದರಂತೆ. ಅವರೇ ಮುಂದೆ ಭಾರತದ ಪಿತಾಮಹ ಗಾಂಧಿಯ ಕುರಿತು ಚಲನಚಿತ್ರ ತಯಾರಿಸಿ ವಿಶ್ವದಾಖಲೆ ಸೃಷ್ಟಿಸಿ ಆಸ್ಕರ್ ಪ್ರಶಸ್ತಿ ಪಡೆದದ್ದೊಂದು ವೈಶಿಷ್ಟ್ಯ. ಪಿಟ್ಜ್ ಬೆನೆವಿಟ್ಜ್‌ರ 'ಮಹಾಭಾರತ'ದ ಪ್ರಯೋಗವೂ ಈ ನಿಟ್ಟಿನಲ್ಲಿ ಉಲ್ಲೇಖಾರ್ಹ. ಇಷ್ಟೆಲ್ಲ ಹೇಳಿದಮೇಲೂ ನನಗೆ ಒಂದು ಪ್ರಶ್ನೆಗೆ ಉತ್ತರ ದೊರೆಯುತ್ತಿಲ್ಲ. ಆ ಪ್ರಶ್ನೆ ನಿಮ್ಮೆಲ್ಲರದೂ ಆಗಿರಬಹುದು : ಜಾಗತೀಕರಣವನ್ನೇ ವಸ್ತುವಾಗಿಸಿ ಕೊಂಡು ನಿರೀಕ್ಷಿಸಿದಷ್ಟು ನಾಟಕಗಳು ಕನ್ನಡದಲ್ಲಿ ಬಂದಿಲ್ಲವೇಕೆ ? ಒಬ್ಬ ನಾಟಕಕಾರನಾಗಿಯೂ ಈ ಪ್ರಶ್ನೆಯನ್ನೆದುರಿಸಿದ ನಾನು 'ಚಿಕ್ಕಿ ಮಾತಾಡತಾವ' ಎಂಬ ನಾಟಕದಲ್ಲಿ ಹೊಸದರ ಸ್ವೀಕೃತಿ ಹಾಗೂ ನಿರಾಕರಣಗಳ ನಡುವಿನ ಸಂಘರ್ಷವನ್ನೇ ವಸ್ತುವಾಗಿರಿಸಿ ಕೊಂಡಿದ್ದೇನೆ. ಸಾವಿರದ ಒಂಬೈನೂರ ತೊಂಭತ್ತರ ದಶಕದ ಆರಂಭದಲ್ಲಿ ಬರೆದ ಈ ನಾಟಕದ ಈ ಹಾಡನ್ನು ಗಮನಿಸಿ.

**ತ್ವಾಳ ಬಂದsತಿ**

ತ್ವಾಳ ಬಂದsತಿ ಅಣ್ಣಾs
ತ್ವಾಳ ಬಂದsತಿ
ಜಡದು ಮಲಗಿದ ಜೀವದೊಳಗ
ಬೆಚ್ಚಗಿದ್ದ ಹಟ್ಟಿಯೊಳಗ
ಉಕ್ಕನ್ಹೆಜ್ಜಿಯಿಡುತ ಬಂದು
ತನುವ ಬಿತ್ತೇತಿ, ಅಣ್ಣಾ, ತ್ವಾಳ ಬಂದsತಿ
ಹಗಲು ಬಿತ್ತಿ ರಾತ್ರಿ ಬೆಳೆದು
ಜೀವ ಬತ್ತಿ ಒತ್ತಿ ಹೊಸೆದು
ಕಣ್ಣಲಾಳಕಿಲೆಣ್ಣೆ ಉಣಿಸಿ
ಎಣಿಸಿ ನುಂಗೇತಿ, ಅಣ್ಣಾ, ತ್ವಾಳ ಬಂದsತಿ
ಕಣ್ಣು ತೆರಿಯದ ಕಂದನನ್ನ
ಪಾಪ ಅರಿಯದ ಹಸುಳೆಯನ್ನ



ಹೊಕ್ಕಳ್ಹುರಿಯ ಕಡದು ಎತ್ತಿ
ಕೊಂಡು ಹೋಗೇತಿ, ಅಣ್ಣಾ, ತ್ವಾಳ ಬಂದsತಿ.

ಮುಕ್ತ ಮಾರುಕಟ್ಟೆಯ ಅವಘಡ, ಕುಟೀರೋದ್ಯಮದ ಸರ್ವನಾಶ, ಉಪ ಸಂಸ್ಕೃತಿಗಳ ಧ್ವಂಸ ಹಾಗೂ ಅಮಾಯಕರ ಆಕ್ರಂದನ ಈ ನಾಟಕದ ಅಂತರ್ಚರ್ಚೆ ಯಲ್ಲಿ ಸೇರಿವೆ.

ನಾಟಕದಲ್ಲಿ ಜನಪದೀಯ ಪಾತ್ರ-ಪರಿಸರಗಳನ್ನಿಟ್ಟು ಕೊಂಡು ಸಾಮಾಜಿಕ ಸಂದರ್ಭದ ವಿಶ್ಲೇಷಣೆ ಮಾಡುವ ಪ್ರಯತ್ನ ಮಾಡಿದ್ದೇನೆ. ಇಲ್ಲಿ ಮಕರಂದಪುರದ ಅರಸು ವೀರಸಿಂಹ ಮಹಾರಾಜ ಶೂರ ಹಾಗೂ ಉದಾರಿಯಾಗಿದ್ದು ತನ್ನ ರಾಜ್ಯದ ಆಡಳಿತವನ್ನು ಹಸನಾಗಿ ಇಟ್ಟುಕೊಂಡಿದ್ದ. ಕಡಲುಗಳ್ಳರಿಂದ ದೋಚಲ್ಪಟ್ಟ ಅರಬರು ದಾನ ಕೇಳಲು ಬಂದು ಕತೆಯ ಹುಚ್ಚು ಹಿಡಿಸಿದ ಮೇಲೆ ಮಕರಂದ ಪುರದಲ್ಲಿ ಅರಾಜಕತೆ ತಾಂಡವವಾಡತೊಡಗುತ್ತದೆ. ಅರಬರು ಹೋದಮೇಲೂ ಕತೆ ಕೇಳುವ ಹುಚ್ಚು ಹಿಡಿಸಿಕೊಂಡ ಅರಸ ತನ್ನ ಪ್ರಜೆಗಳು ದಿನಕ್ಕೊಂದು ರೋಚಕ ಕತೆ ಹೇಳಬೇಕೆಂದು ಡಂಗುರ ಸಾರಿಸುತ್ತಾನೆ – ಹೀಗೆ ತನ್ನ ರಾಜ್ಯ, ತನ್ನ ಗಡಿಗಳನ್ನು, ಶತ್ರುಗಳಿಗೆ ಮುಕ್ತವಾಗಿಡುತ್ತಾನೆ, ಮಂತ್ರಿಗಳು, ಸೇನಾಪತಿಗಳು ದ್ರೋಹಿಗಳಾಗುತ್ತಾರೆ. ಪ್ರಜೆಗಳ ಸ್ವಾತಂತ್ರ್ಯ ಗಂಡಾಂತರ ದಲ್ಲಿರುವುದನ್ನು ಗಮನಿಸಿದ ಚಂಪಾ ಎಂಬ ಸುಶಿಕ್ಷಿತ ತರುಣಿ ಹೊಸಕತೆ ಹೇಳಿ ರಾಜನ ಹುಚ್ಚನ್ನು ಬಿಡಿಸುತ್ತಾಳೆ. ಇಷ್ಟು ದಿವಸ ಮರೆದ ದೊರೆ ಗಳಿಸಿದ್ದೇನು ? ಎಂಬ ಪ್ರಶ್ನೆ ಕೇಳುತ್ತಾಳೆ.

ಮೆರದು ಗಳಿಸಿದ್ದೇನ
ಬರದು ಇಟ್ಟಿದ್ದೇನ !
ನೋಡಪ್ಪ ಒಮ್ಮೆ ಗಡಿಯತ್ತ / ಗುಂಡಿsನ
ಚಿಕ್ಕಿ ಮಾತಾಡತಾವ

ಎಂದು ಎಚ್ಚರಿಸುತ್ತಾಳೆ. ಚಂಪಾಳನ್ನು ಸ್ವೀಕರಿಸುವ ಮೂಲಕ – ವೀರಸಿಂಹ ಮತ್ತೆ ಮೊದಲಿನ ಮೊನಚನ್ನು ಪಡೆದುಕೊಳ್ಳುವುದು ಈ ನಾಟಕದ ಮುಕ್ತಾಯ.

ಬಹುರಾಷ್ಟ್ರೀಯ ಕಂಪನಿಗಳು ತೋರಿಸುವ ಆಮಿಷ, ಹುಟ್ಟಿಸುವ ಭ್ರಮೆ, ನಮ್ಮವೇ ವಸ್ತುಗಳ ಪೇಟೆಂಟ್ ಕಸಿದು ಕೊಳ್ಳುವುದು... ಇದೆಲ್ಲ ಜಾಗತೀ ಕರಣದ ದುರಂತ.

ಭಾರತೀಯತೆ ನಿಗೂಢ ಹಾಗೂ ಶ್ರೀಮಂತವಾಗಿದೆ. ಹೊರಗಿನಿಂದ ಬಂದ ದುರಾಕ್ರಮಣಕಾರರೂ ಇಲ್ಲಿಯ ಸಾಂಸ್ಕೃತಿಕ ಶ್ರೀಮಂತಿಕೆಗೆ ಮಾರುಹೋಗಿ ಭಾರತೀಯರಾಗಿ ಹೋದದ್ದು ಚರಿತ್ರೆಯ ಒಂದು ಭಾಗ. ಅಕಬರನ ಜನಾಂಗದ ಮೂಲ ಪುರುಷ ತೈಮೂರ ಹೂಣ ದುರಾಕ್ರಮಣಕಾರ. ಹೀಗಿದ್ದಾಗ್ಯೂ ಅಕಬರ ಅಪ್ಪಟ ಭಾರತೀಯನೆನ್ನಿಸಲಿಲ್ಲವೆ ?

ಹೀಗೆ ಹೊರಗಿನಿಂದ ಬರುವುದೆಲ್ಲವನ್ನೂ ವಿವೇಚನೆಯಿಂದ ಸ್ವೀಕರಿಸಿ ನಮ್ಮತನವನ್ನು ಉಳಿಸಿಕೊಳ್ಳ ಬೇಕಾಗಿರುವುದು ಕನ್ನಡ ರಂಗಭೂಮಿಯ ಆಶಯ ವಾಗಲಿ ಎಂಬುದು ಈ ಲೇಖನದ ಆಶಯ.

**ಬಿ. ಆರ್. ಪೋಲೀಸ್ ಪಾಟೀಲ**
ಪ್ರಾಚಾರ್ಯರು, ಎಸ್.ಆರ್.ಎ.ಸಂ.ಪ.ಪೂ. ಮಹಾವಿದ್ಯಾಲಯ
ಬನಹಟ್ಟಿ - ೫೮೭ ೩೧೧

# ಖೋಜ್

ದಾರಿ ಕಿರಿದಾಗಿದೆ
ಪಯಣ ಹಿರಿದಾಗಿದೆ
ಮತ್ತೆ ಹೇಗೆ ?

ಪಯಣ ನಿಲ್ಲದು
ಹೊಸ ರಸ್ತೆ ನಿರ್ಮಿಸುತ್ತಾ ಹೋಗಲೇಬೇಕು

ಡಾಂಬ್ರ ರಸ್ತೆ ಮುಗಿದು ಹೋಯಿತೇ
ಮಣ್ಣಿನ ರಸ್ತೆ ಎದುರಾಯಿತೇ
ಮಣ್ಣಿನ ರಸ್ತೆ ಮುಗಿದು ಹೋಯಿತೇ
ಬೆಟ್ಟದ ದಾರಿ ಎದುರಾಯಿತೇ

ಅಡ್ಡಿಯಿಲ್ಲ
ಕಾಲುಗಳಿವೆ
ಕಾಲಿಗಳಿಗೆದುರಿಲ್ಲ
ಕಾಲುಗಳಿಂದ ಹೊಸ ದಾರಿಗಳ ತೆರೆಯೋಣ.



ತೆಲುಗು ಮೂಲ : **ಡಾ॥ ಎನ್. ಗೋಪಿ**, ಅನುವಾದ : **ಕೃಷ್ಣಮೂರ್ತಿ ಕಲುಮಂಗಿ**, 'ಶ್ರೀನಿಧಿ', ಪ್ಲಾಟ್ ನಂ. ೧೮೦, ಎಂ. ಎಂ.ಟಿ. ಸಿ. ಕಾಲೋನಿ, ಬಳ್ಳಾರಿ - ೫೮೩ ೧೦೧

# ಶಿಕ್ಷಣ ಕ್ಷೇತ್ರದ ಕ್ರಾಂತಿ

# ಎಜುಸ್ಯಾಟ್

ಶಿಕ್ಷಣ ಕ್ಷೇತ್ರದಲ್ಲಿ ಭಾರತವು ಒಂದು ವಿಶಿಷ್ಟತಮ ಸ್ಥಾನವನ್ನು ಪಡೆದುಕೊಂಡಿದೆ. ಇದಕ್ಕೆ ಕಾರಣ ಬರೀ ಶೈಕ್ಷಣಿಕ ದೃಷ್ಟಿಯಿಂದಲೇ ಉಪಗ್ರಹವೊಂದನ್ನು ಹಾರಿಬಿಟ್ಟಿರುವ ಏಕೈಕ ದೇಶ ಭಾರತ. ಇದರಿಂದಾಗಿ ಭಾರತವು ಶಿಕ್ಷಣಕ್ಕೆ ಕೊಡುತ್ತಿರುವ ಮಹತ್ವವನ್ನು ಜಗತ್ತಿಗೆ ಸಾರಿದಂತಾಗಿದೆ. ಪ್ರಪಂಚವೇ ಬೆರಗಾಗಿ ಭಾರತದ ಕಡೆ ಮುಖಮಾಡಿ ನೋಡುವಂತಾಗಿದೆ. ಪ್ರಾರಂಭದಲ್ಲಿ ಐವತ್ತುಸಾವಿರ ಮಕ್ಕಳು ಈ ಎಜುಸ್ಯಾಟ್‌ನ ಬಳಗದವರಾಗಿದ್ದಾರೆ. ಈ ಮಕ್ಕಳ ಜ್ಞಾನದ ಹಸಿವನ್ನು ಎಜುಸ್ಯಾಟ್ ತಣಿಸಲಿದೆ.

ಭಾರತದ ವ್ಯೋಮ ಕ್ಷೇತ್ರದ ಇಸ್ರೋ ಪಾಲಿಗೆ ಇದೊಂದು ಪ್ರಯತ್ನ ಮಾತ್ರವಲ್ಲ, ಕನಸೂ ಆಗಿತ್ತು. ಈ ಕನಸನ್ನು ನನಸುಮಾಡಲು ಹೊರಟ ಇಸ್ರೋ ಇಂದು ದೂರ ಶಿಕ್ಷಣ ಕ್ಷೇತ್ರದಲ್ಲಿ ಉನ್ನತ ಪ್ರಗತಿಯನ್ನು ಸಾಧಿಸಿದೆ. ಈ ಸಾಧನೆಯ ಸಾಕಾರವೇ ೨೦೦೪ರ ಸೆಪ್ಟೆಂಬರ್ ೨೦ರಂದು ಎಜುಸ್ಯಾಟ್ ಉಪಗ್ರಹ ಅಂತರಿಕ್ಷಕ್ಕೆ ಹಾರಿದ್ದು. ಅಂದು ಸಂಜೆ ೪ ಘಂಟೆಗೆ ಹೊತ್ತೊಯ್ದದ್ದು ಭೂಸ್ಥಿರ ಉಪಗ್ರಹ ಉಡಾವಣಾ ವಾಹಕ (GSLV). ಈ ಎಜುಸ್ಯಾಟ್ ಉಪಗ್ರಹವು ಇಸ್ರೋ ಹಾರಿಸಿದ ಉಪಗ್ರಹಗಳಲ್ಲೇ ಅತ್ಯಂತ ಭಾರವಾದದ್ದು, ಅಂದರೆ ಇದು ೧೯೫೦ ಕೆ.ಜಿ. ತೂಕವಿದೆ. ಈ ಉಪಗ್ರಹವು ೭ ವರ್ಷಗಳ ಕಾಲ ಶಿಕ್ಷಣಕ್ಕೆ ತನ್ನ ಸೇವೆಯನ್ನು ಸಲ್ಲಿಸಲಿದೆ. ಈ ಉಪಗ್ರಹದ ಕಲ್ಪನೆ ಮೂಡಿಸಿದ್ದು ಬೆಂಗಳೂರಿನ ಇಸ್ರೋ. ಈ ಕಲ್ಪನೆಯ ಕೂಸು ಆಂಧ್ರಪ್ರದೇಶದ ಶ್ರೀಹರಿಕೋಟಾದಲ್ಲಿನ ಸತೀಶ ಧಾವನ್ ಬಾಹ್ಯಾಕಾಶ ಕೇಂದ್ರದಿಂದ ಚಿಮ್ಮಿ ಬೃಹದಾಕಾರವಾಗಿ ಬೆಳೆದು ತನ್ನ ಜಾಲವನ್ನು ದೇಶದಲ್ಲೆಲ್ಲ ಹರಡಿದೆ.

**ಪರಮೇಶ್ವರಯ್ಯ ಸೊಪ್ಪಿಮಠ**

ಕೇಂದ್ರ ಸರಕಾರ ೨೦೦೨ರ ಅಕ್ಟೋಬರ್‌ನಲ್ಲಿ ೩೩೨ ಕೋಟಿ ರೂಪಾಯಿ ವೆಚ್ಚದ ಈ ಎಜುಸ್ಯಾಟ್ ಯೋಜನೆಗೆ ಅನುಮತಿ ನೀಡಿತು. ಉತ್ತರ, ಈಶಾನ್ಯ, ಪೂರ್ವ, ದಕ್ಷಿಣ ಮತ್ತು ಪಶ್ಚಿಮ, ಹೀಗೆ ಒಟ್ಟಾರೆ ೫ ಭಾಗಗಳಿವೆ. ೫ ಸ್ಪಾಟ್‌ಬೀಮ್‌ಗಳನ್ನು ಪ್ರಸಾರಮಾಡಿ ಮಾಹಿತಿ ಒದಗಿಸುವ ಸಾಮರ್ಥ್ಯ ಎಜುಸ್ಯಾಟ್‌ದ್ದಾಗಿದೆ. ಈ ಬೀಮ್‌ಗಳನ್ನು ಬಳಸುವ ರೇಡಿಯೋ ಆವೃತ್ತಿಯನ್ನು ಕ್ಯೂ-ಬ್ಯಾಂಡ್ ಎಂದು ಗುರುತಿಸಲಾಗಿದೆ. ಇದಲ್ಲದೆ ಮತ್ತೊಂದು ಕ್ಯೂ-ಬ್ಯಾಂಡ್ ಬೀಮ್‌ನ್ನು ಪ್ರಸಾರಮಾಡುವ ಸಾಮರ್ಥ್ಯವಿದ್ದು ಇದು ರಾಷ್ಟ್ರವ್ಯಾಪಿ ಪಸರಿಸಿದೆ. ಚಿಕ್ಕ ಗಾತ್ರದ ಡಿಶ್ ಆ್ಯಂಟೆನಾಗಳಿಂದ ನಾವು ಸಂಕೇತಗಳನ್ನು ಪಡೆಯಬಹುದಾಗಿದೆ.

ಎಜುಸ್ಯಾಟ್ ಪ್ರಾರಂಭದ ಎರಡು ವರ್ಷಗಳನ್ನು ಸೆಮಿಆಪರೇಷನ್ ಎಂದು ಕರೆಯುತ್ತಾರೆ. ಅಂದರೆ ಇದು ಸಂಪೂರ್ಣವಾಗಿ ಈ ಸಮಯದಲ್ಲಿ ಕೆಲಸಮಾಡಲಾರದು. ಹಾಗಾಗಿ ಒಂದೊಂದು ಸ್ಪಾಟ್‌ಬೀಮ್‌ನಿಂದ ೧೦೦ರಿಂದ ೨೦೦ ಕೇಂದ್ರಗಳಿಗೆ ಮಾತ್ರ ಮಾಹಿತಿ ಒದಗಿಸುತ್ತದೆ. ಇಷ್ಟಾದರೂ ಐವತ್ತು ಸಾವಿರ ವಿದ್ಯಾರ್ಥಿಗಳು ತಕ್ಷಣ ಎಜುಸ್ಯಾಟ್‌ನ ಲಾಭ ಪಡೆಯಲಿದ್ದಾರೆ. ೨ ವರ್ಷಗಳ ನಂತರ ಇದು ಇಡೀ ದೇಶಾದ್ಯಂತ ತನ್ನ ಪ್ರಸಾರವನ್ನು ಹೆಚ್ಚಿಸಲಿದೆ.



ಶಿಕ್ಷಣ ರಂಗದಲ್ಲಿ ಎಜುಸ್ಯಾಟ್ ಮಹತ್ತರ ಪಾತ್ರವನ್ನು ವಹಿಸಲಿದೆ. ನಮ್ಮ ದೇಶದಲ್ಲಿ ಉತ್ತಮ ಹಾಗೂ ಪ್ರತಿಭಾನ್ವಿತ ಶಿಕ್ಷಕರ ಕೊರತೆ ಇದೆ. ಜೊತೆಗೆ ಅಧ್ಯಯನ ಉಪಕರಣಗಳ ಅಭಾವವಿದೆ. ಈ ಎರಡು ಸಮಸ್ಯೆಗಳಿಗೆ ಎಜುಸ್ಯಾಟ್ ಪರಿಹಾರ ನೀಡಲಿದೆ. ಆಯ್ಕೆಯಾದ ಉತ್ತಮ ಶಿಕ್ಷಕರು ಟಿ.ವಿ. ಸ್ಟುಡಿಯೋದಲ್ಲಿ ನಿರ್ದಿಷ್ಟವಾದ ವಿಷಯಗಳ ಮಾಹಿತಿಯನ್ನು ನೀಡಿದಾಗ ದೇಶಾದ್ಯಂತ ಎಜುಸ್ಯಾಟ್ ಕಲಿಕಾ ಕೇಂದ್ರಗಳಲ್ಲಿ ಇದು ಪ್ರಸಾರವಾಗುತ್ತದೆ. ಸಂಪರ್ಕದ ವ್ಯವಸ್ಥೆ ಇದ್ದರೆ ಶಿಕ್ಷಣಾರ್ಥಿಗಳು ತಮ್ಮ ಸಮಸ್ಯೆಗಳಿಗೆ ಸ್ಟುಡಿಯೋದಿಂದಲೇ ನೇರ ಉತ್ತರ ಪಡೆಯಬಹುದು. ಈ ರೀತಿ ಎಜುಸ್ಯಾಟ್‌ಗಾಗಿ ಸಿದ್ಧವಾಗಿರುವ ಪಠ್ಯಕ್ರಮಕ್ಕೆ **ಟೆಕ್‌ನೆಟ್** ಎಂದು ಕರೆಯುತ್ತಾರೆ.

ಬೇರೆ ಬೇರೆ ರಾಜ್ಯಗಳು ಶಿಕ್ಷಣಕ್ಕಾಗಿ ವಿವಿಧ ಚಾನೆಲ್‌ಗಳು ಹಾಗೂ ತರಬೇತಿಗಳನ್ನು ಹಮ್ಮಿಕೊಂಡಿವೆ. ಅಲ್ಲದೆ ಇನ್ಸಾಟ್ ಉಪಗ್ರಹದ ಮೂಲಕ ಶಾಲೆ ಮತ್ತು ಕಾಲೇಜು ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಕಾರ್ಯಕ್ರಮಗಳು ಈಗಾಗಲೇ ಪ್ರಸಾರವಾಗುತ್ತಿವೆ. ಇವೆಲ್ಲವುಗಳ ಜವಾಬ್ದಾರಿಯನ್ನು ಇನ್ನು ಮುಂದೆ ಎಜುಸ್ಯಾಟ್ ಹೊರಲಿದೆ. ಈಗಾಗಲೇ ಎಜುಸ್ಯಾಟ್ ಕಾರ್ಯಕ್ರಮಗಳಿಗಾಗಿ ಪೈಲೆಟ್ ಯೋಜನೆಗಳು ಕಾರ್ಯರೂಪಕ್ಕೆ ಬಂದಿವೆ. ಪೈಲೆಟ್ ಯೋಜನೆಯಲ್ಲಿ ಇಸ್ರೋ ಟರ್ಮಿನಲ್‌ಗಳನ್ನು ಒದಗಿಸಿದೆ. ಮುಂದೆ ಸಂಸ್ಥೆಗಳೇ ಸ್ವತಃ ಡಿಶ್ ಟರ್ಮಿನಲ್‌ಗಳನ್ನು ಖರೀದಿಸಬೇಕಾಗುತ್ತದೆ.

ಕರ್ನಾಟಕದಲ್ಲಿ ಎಜುಸ್ಯಾಟ್‌ನ ಪ್ರಾಥಮಿಕ ಹಂತಕ್ಕಾಗಿ ಚಾಮರಾಜನಗರದ ೬೦೦ ಪ್ರಾಥಮಿಕ ಶಾಲೆಗಳನ್ನು ಸೇರಿಸಿಕೊಳ್ಳಲಾಗಿದೆ. ಕರ್ನಾಟಕ ಸರ್ಕಾರದ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ (DSERT) ತಯಾರುಮಾಡುವ ಶೈಕ್ಷಣಿಕ ಕಾರ್ಯಕ್ರಮಗಳನ್ನು ಆ ಶಾಲೆಯ ಮಕ್ಕಳು ಈ ಎಜುಸ್ಯಾಟ್ ಮೂಲಕ ಪಡೆಯಲಿದ್ದಾರೆ.

**ಎಜುಸ್ಯಾಟ್ ಯಾಕೆ ಬೇಕು ?**

* ಪರಿಣತರ ಜೊತೆಗೆ ಉತ್ತಮ ಬೋಧಕರ ಲಭ್ಯತೆ ನಮ್ಮಲ್ಲಿ ತುಂಬಾ ಕಡಿಮೆ ಇದೆ. ಹಾಗಾಗಿ ಕಡಿಮೆ ಲಭ್ಯತೆಯನ್ನು ಹೆಚ್ಚು ಬಳಕೆ ಮಾಡಿಕೊಳ್ಳುವ ಉದ್ದೇಶ ಎಜುಸ್ಯಾಟ್‌ನಿಂದ ಈಡೇರಲಿದೆ.
* ಬೋಧನೆಯ ಸಮಯದಲ್ಲಿ ಅನೇಕ ಸಂಗತಿಗಳನ್ನು ತರಗತಿಯ ಕೊಠಡಿಯ ಒಳಗಡೆ ಕಲ್ಪನೆ ಮೂಡಿಸಿ ಅರ್ಥಮಾಡಿಸುವುದು ಕ್ಲಿಷ್ಟಕರ. ಅಂತಹ ಸಂದರ್ಭಗಳಲ್ಲಿ ಎಜುಸ್ಯಾಟ್ ಉಪಕಾರಿಯಾಗಲಿದೆ. ಉದಾ : ಕಬ್ಬಿಣ ತಯಾರಿಕೆಯ ವಿಧಾನವನ್ನು ಬಾಯಲ್ಲಿ ಹೇಳುವುದಕ್ಕೂ ಪರದೆ ಮೇಲೆ ಕಾರ್ಖಾನೆಯನ್ನು ನೈಜವಾಗಿ ತೋರಿಸುವುದಕ್ಕೂ ಅಜಗಜಾಂತರ ವ್ಯತ್ಯಾಸವಿದೆ.
* ಪ್ರಯೋಗಗಳನ್ನು ಮಾಡಲು ಉಪಕರಣ ಹಾಗೂ ವಸ್ತುಗಳ ಕೊರತೆ ಇದೆ. ಹಾಗಾಗಿ ಎಜುಸ್ಯಾಟ್‌ನಲ್ಲಿ ಪ್ರಯೋಗಗಳ ನೇರ ದರ್ಶನಕ್ಕೆ ಅವಕಾಶವಿರುವುದರಿಂದ ಕಲಿಕೆ ಹೆಚ್ಚು ಫಲಕಾರಿಯಾಗಲಿದೆ.
* ಕಪ್ಪು ಹಲಗೆ ಬಳಸಿ ಚಿತ್ರ ಬರೆದು, ಸೂತ್ರ ರಚಿಸಿ ವಿವರಿಸುವುದಕ್ಕೂ ಪ್ರತ್ಯಕ್ಷದರ್ಶನಕ್ಕೂ ಇರುವ ವ್ಯತ್ಯಾಸದ ಲಾಭವೇ ಎಜುಸ್ಯಾಟ್.
* ಈ ಎಜುಸ್ಯಾಟ್‌ನಿಂದ ಕಲ್ಪನೆ ಹಾಗೂ ವಾಸ್ತವದ ಅಂತರ ತುಂಬಾ ಕಡಿಮೆಯಾಗಲಿದೆ.
* ಕಾರು ಬಸ್ಸುಗಳನ್ನೇ ಆಶ್ಚರ್ಯಗೊಂಡು ನೋಡುವ ನಮ್ಮ ಗ್ರಾಮೀಣ ಮಕ್ಕಳ ಮುಂದೆ ಇಡೀ ಜಗತ್ತನ್ನೇ ತೆರೆದಿಡಬಹುದಾಗಿದೆ.
* ಶಿಕ್ಷಣ ವಂಚಿತರಿಗೆ ಶಿಕ್ಷಣ ತಲುಪಿಸಲು (ಅನೌಪಚಾರಿಕ ಶಿಕ್ಷಣ)

ಎಜುಸ್ಯಾಟ್‌ನಿಂದ ಸಾಧ್ಯವಿದೆ.

* ವೈಜ್ಞಾನಿಕ ಶಿಕ್ಷಣದ ಪ್ರಮಾಣವನ್ನು ನಾವು ಹೆಚ್ಚು ಮಾಡಬಹುದಾಗಿದೆ.
* ಶಾಲೆ ಮಟ್ಟದ ಪ್ರತಿಭೆಗಳನ್ನು ಇಡೀ ಜಗತ್ತಿಗೆ ಪರಿಚಯಿಸುವ ಸೂಕ್ತ ವೇದಿಕೆ ಎಜುಸ್ಯಾಟ್ ಆಗಲಿದೆ.
* ಪ್ರತಿ ಅಧ್ಯಾಪಕರು ಸಂಪನ್ಮೂಲ ವ್ಯಕ್ತಿಯಾಗಲು ಅವಕಾಶವಿದೆ.

**ಎಜುಸ್ಯಾಟ್ ಈಗ ನಮಗೆ ಅವಶ್ಯಕವೇ ?**

ಎಜುಸ್ಯಾಟ್ ಬಗ್ಗೆ ಬಹಳಷ್ಟು ಹುಸಿ ನಂಬಿಕೆಗಳು ನಮ್ಮಲ್ಲಿ ಬೆಳೆಯುತ್ತಿವೆ. ಅದರಲ್ಲೂ ಶಿಕ್ಷಕರು ಇದು ನಮ್ಮ ವೃತ್ತಿಗೆ ಮಾರಕ ಎಂದು ಭಾವಿಸುತ್ತಿದ್ದಾರೆ.

ಎಜುಸ್ಯಾಟ್ ಬಗ್ಗೆ ಇರುವ ಸಂದೇಹ ಹಾಗೂ ಸಮಸ್ಯೆಗಳು :

* ಎಜುಸ್ಯಾಟ್ ಶಿಕ್ಷಕರನ್ನು ಅಲಸಿಗರನ್ನಾಗಿ ಮಾಡುತ್ತದೆ. ಅವರಲ್ಲಿ ಕೀಳರಿಮೆ ಉಂಟುಮಾಡುತ್ತದೆ. ಒಟ್ಟಾರೆ ಇದರಿಂದ ಶಿಕ್ಷಕರ ಮರ್ಯಾದೆ ಕಡಿಮೆಯಾಗುತ್ತದೆ.
* ನಮಗಿರುವ ಸಮಯ ಈಗಾಗಲೇ ಈ ಪಠ್ಯ ಕ್ರಮದಲ್ಲಿ ಸಾಕಾಗುತ್ತಿಲ್ಲ ಎನ್ನುವಾಗಲೇ ಈ ಎಜುಸ್ಯಾಟ್ ಬಂದಿದೆ. ಇದಕ್ಕೆ ಸಮಯ ಹೆಚ್ಚು ಬೇಕಾಗುತ್ತದೆ.
* ಮಕ್ಕಳ ಲಕ್ಷ್ಯ ಬೇರೆ ಕಡೆಗೆ ಹೊರಳುವ ಸಂಭವವುಂಟು. ಇದರಿಂದ ಮಕ್ಕಳ ಏಕಾಗ್ರತೆಗೆ ಭಂಗ ಬಂದು ಶಿಕ್ಷಕರು ಕಲಿಸುವ ಪಾಠದಲ್ಲಿ ನಿರಾಸಕ್ತರಾಗುತ್ತಾರೆ.
* ಎಜುಸ್ಯಾಟ್‌ನಂಥ ಉನ್ನತ ತಂತ್ರಜ್ಞಾನವನ್ನು ಬಳಸಲು ಇದು ಸಕಾಲವಲ್ಲ. ಏಕೆಂದರೆ, ನಮ್ಮ ಗ್ರಾಮೀಣ ಶಾಲೆಗಳಲ್ಲಿ ಮೂಲಭೂತ ಅವಶ್ಯಕತೆಗಳಾದ ನೀರು, ವಿದ್ಯುತ್, ಕೊಠಡಿ, ಶಿಕ್ಷಕರೇ ಇಲ್ಲದಿರುವಾಗ ಎಜುಸ್ಯಾಟ್ ಅವಶ್ಯವಿತ್ತೇ ?
* ಗ್ರಾಮೀಣ ಮಕ್ಕಳಿಗೆ ಮಾತ್ರ ಇದು ಹೆಚ್ಚು ಉಪಯುಕ್ತ. ನಗರದ ಮಕ್ಕಳಿಗೆ ಲಾಭದಾಯಕವಲ್ಲ.
* ಎಜುಸ್ಯಾಟ್ ಕಾರ್ಯಕ್ರಮಗಳು ಶಾಲೆಗೆ ತಲುಪಲು ತಗಲುವ ಖರ್ಚು ವೆಚ್ಚಗಳು ತುಂಬಾ ದುಬಾರಿಯದ್ದಾಗಿವೆ.
* ವಿದ್ಯಾರ್ಥಿಗಳು ಬರೀ ಮೂಕಪ್ರೇಕ್ಷಕರಾಗಬಹುದು. ಸಂಪರ್ಕದ ಕೊರತೆಯಿಂದಾಗಿ ಅವರಿಗೆ ಪ್ರಶ್ನೆ ಕೇಳುವ ಅವಕಾಶವೇ ಇರುವುದಿಲ್ಲ.
* ಎಜುಸ್ಯಾಟ್ ಒಂದು ವರ್ಗದ ಹಿಡಿತಕ್ಕೆ ಸಿಕ್ಕಿ ಶಿಕ್ಷಣವು ವ್ಯಾಪಾರೀಕರಣವಾಗಬಹುದು. ಹೀಗಾದಲ್ಲಿ ಲಾಭಕ್ಕಿಂತ ದುಷ್ಪರಿಣಾಮಗಳೇ ಹೆಚ್ಚು.
* ಶಿಕ್ಷಣ ಕ್ರಾಂತಿಗೆ ಪರ್ಯಾಯವಾಗಿ ಎಜುಸ್ಯಾಟ್ ಬೆಳೆದು ಬೇರೆಯೇ ಕ್ರಾಂತಿ ಸಂಭವಿಸಲೂಬಹುದು.

**ಮುಂದೇನು ?**

* ಎಜುಸ್ಯಾಟ್ ಬಗ್ಗೆ ಇರಬಹುದಾದ ಸಂದೇಹ ಹಾಗೂ ಸಮಸ್ಯೆಗಳಿಗೆ ತಜ್ಞರು, ವಿಜ್ಞಾನಿಗಳು ಸೂಕ್ತ ಉತ್ತರಗಳನ್ನು ಕೊಡಬೇಕಿದೆ.
* ಎಜುಸ್ಯಾಟ್ ರೂಪರೇಷೆ, ವಿಧಿ ವಿಧಾನಗಳು ಮತ್ತು ಕಾರ್ಯಕ್ರಮಗಳಿಗೆ ಸಂಬಂಧಪಟ್ಟಂತೆ ಎಲ್ಲ ಶಿಕ್ಷಕರಿಗೂ ತರಬೇತಿ ನೀಡುವ ಅವಶ್ಯಕತೆ ಇದೆ.
* ಕಂಪ್ಯೂಟರ್ ಅಥವಾ ಸಾಮಗ್ರಿಗಳ ಬಳಸುವ ವಿಧಾನ, ಚಿಕ್ಕ ಪುಟ್ಟ ದುರಸ್ತಿ ಮಾಡುವುದರ ಬಗ್ಗೆ ಮಾಹಿತಿ ನೀಡಬೇಕು.
* ಪ್ರಸಾರಪೂರ್ವ ಹಾಗೂ ಪ್ರಸಾರೋತ್ತರ ಚಟುವಟಿಕೆಗಳ ಬಗ್ಗೆ ಸಮಗ್ರ ಚರ್ಚೆ ನಡೆಯಬೇಕು.
* ಮಕ್ಕಳ ಪ್ರಾಸಂಗಿಕ ಕಲಿಕೆ ಹೇಗೆ? ಎಂದರೆ, ಸೂಕ್ಷ್ಮ ವೀಕ್ಷಣೆಯ ಬಗ್ಗೆ ಮಾಹಿತಿ ದೊರಕಬೇಕಿದೆ.
* ಸಮಯ, ಬೋಧನೆಗಳು ಗೊಂದಲಕ್ಕೀಡಾಗದಂತೆ ಹೊಂದಾಣಿಕೆಯ ವೇಳಾಪಟ್ಟಿ ಸಿದ್ಧಪಡಿಸಬೇಕು.
* ಕೊನೆಯವರೆಗೂ ಮಕ್ಕಳಲ್ಲಿ ಆಸಕ್ತಿ ಉಳಿಯುವಂತೆ ಪಾಠಗಳನ್ನು ಸಿದ್ಧಗೊಳಿಸಿ ಪ್ರಸಾರಮಾಡಬೇಕು.
* ವಾಸ್ತವ ಭಯಕ್ಕಿಂತ ಕಾಲ್ಪನಿಕ ಭಯವೇ ಹೆಚ್ಚು ಅಪಾಯಕಾರಿ. ಹಾಗಾಗಿ ಎಜುಸ್ಯಾಟ್ ಬಗ್ಗೆ ಇರುವ ಊಹಾಪೋಹಗಳನ್ನು ವೈಜ್ಞಾನಿಕ ರೀತಿಯಲ್ಲಿ ನಿವಾರಿಸಬೇಕಿದೆ.

ಯಾವುದೇ ವೈಜ್ಞಾನಿಕ ಆವಿಷ್ಕಾರಗಳು ಮನುಷ್ಯನಿಗೆ ಅತ್ಯಂತ ಉಪಯುಕ್ತತೆಯನ್ನು ಒದಗಿಸಬೇಕು. ಈ ನಿಟ್ಟಿನಲ್ಲಿ ಎಜುಸ್ಯಾಟ್ ಒಂದು ಉತ್ತಮ ಬೆಳವಣಿಗೆ ಎನ್ನಬಹುದು. ಈಗ ನಮ್ಮೆದುರು ಎಜುಸ್ಯಾಟ್ ಬಂದು ನಿಂತಿದೆ. ನಮ್ಮ ಶಿಕ್ಷಕರು ಹಾಗೂ ಮಕ್ಕಳು ಬದಲಾಗುತ್ತಿರುವ ನವ ವೈಜ್ಞಾನಿಕತೆಗೆ ಹೊಂದಿಕೊಂಡು ಶೈಕ್ಷಣಿಕ ಪ್ರಗತಿಯತ್ತ ಸಾಗಬೇಕಾದಲ್ಲಿ ಎಜುಸ್ಯಾಟ್‌ನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳಬೇಕಾಗಿದೆ. ಹಾಗಾಗಿ ನಾವು ಎಜುಸ್ಯಾಟ್‌ನ್ನು ಸಮರ್ಥವಾಗಿ ಬಳಸಿಕೊಳ್ಳಬೇಕು. ಎಜುಸ್ಯಾಟ್ ಕಾರ್ಯಕ್ರಮವನ್ನು ನಾವು ಸಂಪೂರ್ಣವಾಗಿ ಅನುಷ್ಠಾನಕ್ಕೆ ತಂದು ಜಾರಿಗೊಳಿಸಿದಲ್ಲಿ ಖಂಡಿತವಾಗಿಯೂ ಅಕ್ಷರಕ್ರಾಂತಿಯನ್ನು ಕಾಣಬಹುದಾಗಿದೆ.


ಪರಮೇಶ್ವರಯ್ಯ ಸೊಪ್ಪಿಮಠ
ಶಿಕ್ಷಕರು, ಕೆ.ವಿ.ಓ.ಆರ್. ಕಾಲೋನಿ
ಹಗರಿಬೊಮ್ಮನಹಳ್ಳಿ ತಾಲೂಕು, ಬಳ್ಳಾರಿ ಜಿಲ್ಲೆ - ೫೮೩ ೨೧೨


## ಕಾಡುತಿಹೆ ಏಕೆ ಹೀಗೆ?



ಕಾಡುತಿಹೆ ಏಕೆ ಹೀಗೆ ಸುಮ್ಮಗೆ ?
ಬಯಸಿದೆಲ್ಲವೂ ಬಗಲಿಗೆ ಬಂದು
ಬೀಳುವುದಿಲ್ಲವೆಂಬ ಅರಿವಿದೆ ನಮಗೆ।

ಮನದ ತಕ್ಕಡಿಯೊಳಗೆ
ಕಳಕೊಂಡವುಗಳರದೇ
ತೂಗಲಾರದಷ್ಟು ಭಾರ
ಹಗುರವೆನಿಸುವ ಉಳಿದ
ನೆನಪುಗಳೇ ಮುತ್ತಿನ ಹಾರ।

ಶಾಂತ ಕಡಲು
ಒಳಗೆ ಕುದಿಯುವ ಒಡಲು
ನೀಲ ಆಗಸದಲ್ಲೂ
ಗುಡುಗು ಸಿಡಿಲು।

ಅನ್ನವಾಗುವ ಮೊದಲು
ಆಗಿರಲೇಬೇಕದು ಭತ್ತ
ರೂಪಾಂತರದ ಹಾದಿಯಲ್ಲಿ
ಬದುಕು ಅನುಭವದ ಮೊತ್ತ।

ಬಿಡು ಮತ್ತೆ ,
ಕಾಡುವಿಯೇಕೆ ಹೀಗೆ ಸುಮ್ಮಗೆ
ವರ್ತಮಾನದಲ್ಲಿ ಬದುಕಲು
ಗೊತ್ತಿದೆ ನಮಗೆ।


ಸ್ಮಿತಾ ಅಮೃತರಾಜ್ ಸಂಪಾಜೆ
ಬಾಲೆಬಿಂಗಿ ಅಂಚೆ, ಚೆಂಬು ಗ್ರಾಮ, ಸುಳ್ಯ, ದಕ್ಷಿಣ ಕನ್ನಡ - ೫೭೪ ೨೩೪

**ಮಾ**ನಸಿಕ ಒತ್ತಡ ಇಂದಿನ ದಿನಗಳಲ್ಲಿ ಹೆಚ್ಚಾಗಿ ಕಾಣುತ್ತಿರುವ ಒಂದು ರೋಗ. ಕೆಲವು ವರದಿಗಳ ಪ್ರಕಾರ ಶೇಕಡ ೭೦ರಷ್ಟು ರೋಗಿಗಳಿಗೆ ಮಾನಸಿಕ ಒತ್ತಡದ ಪ್ರಭಾವ ಇರಬಹುದೆಂದು ಹೇಳಲಾಗಿದೆ. ಈ ಮಾನಸಿಕ ಒತ್ತಡ ವೈದ್ಯರು ಮತ್ತು ರೋಗಿಗಳನ್ನು ಕಾಡುವುದರಿಂದ ಇಬ್ಬರೂ ಮಾನಸಿಕ ಒತ್ತಡದ ಬಗ್ಗೆ ತಿಳಿದಿರಬೇಕಾದ ಅಗತ್ಯ ಹೆಚ್ಚಾಗಿದೆ.

ಮಾನಸಿಕ ಒತ್ತಡ ಎಂದರೇನು ಎಂದರೆ ಸರಳವಾಗಿ ವಿವರಿಸುವುದು ಬಹಳ ಕಷ್ಟ. ಅದು ಮನುಷ್ಯರಲ್ಲಿ ಯಾವುದೇ ಬಗೆಯ ರೋಗವಾಗಿ ಅಥವಾ ಯಾವುದೇ ರೋಗದ ಲಕ್ಷಣವಾಗಿ ಹೊರಹೊಮ್ಮಬಹುದೆಂದರೆ ಆಗ ಮಾನಸಿಕ ಒತ್ತಡದ ಗಂಭೀರತೆಯ ಅರಿವಾಗುತ್ತದೆ. ಈ ಎಲ್ಲ ಲಕ್ಷಣಗಳನ್ನು ನಾವು ನಾಲ್ಕು ವರ್ಗಗಳಾಗಿ ವಿಂಗಡಿಸಬಹುದು.

೧. ದೈಹಿಕ ರೋಗಗಳು : ಅಧಿಕ ರಕ್ತದೊತ್ತಡ, ಜಠರದ ವ್ರಣ, ಹೃದ್ರೋಗ ಇತ್ಯಾದಿ.

೨. ಮಾನಸಿಕ ರೋಗಗಳು : ನಿದ್ರಾನಾಶ, ಖಿನ್ನತೆ.

೩. ಭಾವನಾತ್ಮಕ ರೋಗಗಳು

೪. ನಡವಳಿಕೆಯ ರೋಗಗಳು

**ಮಾನಸಿಕ ಒತ್ತಡಕ್ಕೆ ಕಾರಣಗಳನ್ನು ಎರಡು ವಿಧಗಳಾಗಿ ವಿಂಗಡಿಸಬಹುದು**

೧. ಹೊರಗಿನ ಅಥವಾ ಪರಿಸರದ ಕಾರಣಗಳು.

ಉದಾಹರಣೆ : ಸ್ನೇಹಿತರು, ಸಂಬಂಧಿಕರ ರೋಗ, ಅಪಘಾತ, ಮರಣ, ಕೆಲಸ ಹೋಗುವುದು, ಮೇಲಧಿಕಾರಿಗಳಿಂದ ಟೀಕೆ, ವರ್ಗಾವಣೆ ಇತ್ಯಾದಿ.

೨. ಆಂತರಿಕ ಕಾರಣಗಳು: ನಾವೇ ಸೃಷ್ಟಿಸಿಕೊಂಡ ಸನ್ನಿವೇಶಗಳು ಬಹಳಮಟ್ಟಿಗೆ ಮಾನಸಿಕ ಒತ್ತಡಕ್ಕೆ ಕಾರಣ.

ಇದರ ಅರ್ಥವೇನೆಂದರೆ, ಮಾನಸಿಕ ಒತ್ತಡ ಕಡಿಮೆಯಾಗಬೇಕಾದರೆ ನಮ್ಮ ನಡವಳಿಕೆ, ಯೋಚಿಸುವ ಬಗೆ, ನಮ್ಮ ಜೀವನದ ದಿನಚರಿ ಮತ್ತು ನಮ್ಮ ಸುತ್ತಲಿನ ವಾತಾವರಣಗಳನ್ನು ಬದಲಾಯಿಸಿಕೊಳ್ಳಬೇಕು. ಮಾನಸಿಕ ಒತ್ತಡವನ್ನು ಕಡಿಮೆಮಾಡಲು ಅನೇಕ ವಿಧಾನಗಳನ್ನು ಅನುಸರಿಸಬಹುದು. ಅವುಗಳನ್ನು ಸ್ಥೂಲವಾಗಿ ಈ ರೀತಿ ವಿವರಿಸಬಹುದು.



# ಮಾನಸಿಕ ಒತ್ತಡವನ್ನು ತಡೆಗಟ್ಟುವುದು ಹೇಗೆ?

**೧. ಕೆಲಸದ ಮಧ್ಯೆ ವಿರಾಮ :** ನಾವು ಮಾಡುವ ಕೆಲಸದಲ್ಲಿ ನಮ್ಮ ಸಾಮರ್ಥ್ಯದ ಬಗ್ಗೆ ತಿಳಿದಿರಬೇಕು. ದಿನವಿಡೀ ದುಡಿದರೆ ಮಾನಸಿಕ ಒತ್ತಡವೂ ಹೆಚ್ಚಾಗುತ್ತದೆ. ಆದುದರಿಂದ ಕೆಲಸದ ಮಧ್ಯೆ ವಿರಾಮ ತೆಗೆದುಕೊಳ್ಳಬೇಕು. ಮಾನಸಿಕ ಒತ್ತಡ ಹೆಚ್ಚಾದರೆ ನಮ್ಮ ಕೆಲಸದ ಒತ್ತಡವೂ ಆರಂಭದಲ್ಲಿ ಹೆಚ್ಚುತ್ತದೆ. ಆದರೆ ಈ ಒತ್ತಡ ನಮ್ಮ ಮಿತಿಗಿಂತ ಹೆಚ್ಚಾದರೆ ನಮ್ಮ ಸಾಮರ್ಥ್ಯ ಕುಂಠಿತಗೊಳ್ಳುತ್ತದೆ. ಅಂತಹ ಸಮಯದಲ್ಲಿ ಕೆಲಸದಿಂದ ವಿರಾಮ ತೆಗೆದುಕೊಳ್ಳಬೇಕು. ವಿರಾಮದ ನಂತರ ನಮ್ಮ ಕೆಲಸವನ್ನು ಮುಂಚಿನ ಉತ್ಸಾಹದೊಂದಿಗೆ ಮಾಡಬಹುದು. ಇಲ್ಲದಿದ್ದರೆ ಮಾನಸಿಕ ಒತ್ತಡ ಹೆಚ್ಚಾಗಿ, ದಣಿವು ವಿಪರೀತವಾಗಿ, ಅದೊಂದು ಮನೋರೋಗವಾಗಿ ಪರಿಣಮಿಸಬಹುದು.

ಇಲ್ಲಿ ಒಂದು ಅಂಶವನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಕೆಲಸ ಸರಿಯಾಗಿ ಮಾಡಲು ಸ್ವಲ್ಪಮಟ್ಟಿಗಿನ ಮಾನಸಿಕ ಒತ್ತಡ ಅಗತ್ಯ. ಇದನ್ನು ''ಆರೋಗ್ಯಕರ ಮಾನಸಿಕ ಒತ್ತಡ'' ಎನ್ನುತ್ತಾರೆ. ಇದು ನಮ್ಮ ಮಿತಿಗಿಂತ ಹೆಚ್ಚಾದರೆ ಅದೊಂದು ರೋಗದ ರೂಪ ಪಡೆಯುತ್ತದೆ. ಇದನ್ನು ತಪ್ಪಿಸಬೇಕಾದರೆ ವಿರಾಮ ಅಥವಾ ವಿಶ್ರಾಂತಿ ಅತ್ಯಗತ್ಯ.

ಕೆಲವು ವೈದ್ಯಕೀಯ ವರದಿಗಳ ಪ್ರಕಾರ ಸುಮಾರು ೬೦ರಿಂದ ೯೦ ನಿಮಿಷಗಳವರೆಗೆ ಕೆಲಸ ಮಾಡಿದ ಮೇಲೆ ಸುಮಾರು ೨೦ ನಿಮಿಷಗಳ ವಿಶ್ರಾಂತಿ ತೆಗೆದುಕೊಂಡರೆ ಮಾನಸಿಕ ಸಮತೋಲನ ಕಾಪಾಡಿಕೊಳ್ಳಬಹುದು. ಇನ್ನು ಕೆಲವರು ಇದನ್ನೇ ತಮ್ಮ ಕೆಲಸದ ದಿನಚರಿಯಲ್ಲಿಯೇ ಅಳವಡಿಸಿಕೊಂಡಿರುತ್ತಾರೆ. ಉದಾಹರಣೆಗೆ, ಬೆಳಗಿನ ವಿರಾಮ, ಮಧ್ಯಾಹ್ನದ ಹಾಗೂ ರಾತ್ರಿಯ ವಿಶ್ರಾಂತಿ ಇತ್ಯಾದಿ. ಈ ವಿರಾಮ ಅಥವಾ ವಿಶ್ರಾಂತಿಯ ಅವಧಿಯಲ್ಲೇ ಧ್ಯಾನ, ಸ್ನೇಹಿತರ ಜತೆ ಮಾತುಕತೆ, ಸ್ವಲ್ಪ ದೂರ ಓಡಾಟ ಮತ್ತು ತಂಪು ಪಾನೀಯ ಸೇವನೆಗಾಗಿ ಉಪಯೋಗಿಸಬಹುದು. ಇನ್ನು ಕೆಲವರು ಸ್ವಲ್ಪ ಹೊತ್ತು ನಿದ್ರೆ ಮಾಡಬಹುದು. ಇನ್ನು ಕೆಲವರು ಹಗಲು ಕನಸು ಕಾಣಲೂ ಉಪಯೋಗಿಸಬಹುದು. ಸಂಗೀತ ಆಲಿಸುವುದು ಅಥವಾ ಅಷ್ಟಾಗಿ ಮಹತ್ವವಿರದ ಚಿಕ್ಕಪುಟ್ಟ ಕೆಲಸ ಮಾಡಲೂ ಈ ವಿರಾಮದ ವೇಳೆಯನ್ನು ಬಳಸಿಕೊಳ್ಳಬಹುದು. ಈ ರೀತಿ ಮಾಡುವುದರಿಂದ ನಮ್ಮ ಮಾನಸಿಕ ಒತ್ತಡ ಕಡಿಮೆಯಾಗುವುದಲ್ಲದೆ, ನಮ್ಮ ಉತ್ಪಾದನೆ ಕೂಡ ಹೆಚ್ಚಾಗುವುದು ಕಂಡುಬಂದಿದೆ.

ಇತ್ತೀಚಿನ ದಿನಗಳಲ್ಲಿ ನಾವು ದುಡಿಯುವ ಸಮಯ ಹಿಂದಿಗಿಂತಲೂ ಹೆಚ್ಚಾಗಿರುವುದು ಇನ್ನೊಂದು ಅಂಶ. ಕೆಲವು ಅಂಕಿಅಂಶಗಳ ಪ್ರಕಾರ ೨೦ ವರ್ಷಗಳ ಹಿಂದಿಗಿಂತ ಈಗ ವಾರಕ್ಕೆ ಕನಿಷ್ಠ ೩ ಗಂಟೆ ಹೆಚ್ಚಿಗೆ ದುಡಿಯುತ್ತೇವೆ. ಅಂದರೆ, ಒಂದು ವರ್ಷಕ್ಕೆ ಒಂದು ತಿಂಗಳು. ಇದರ ಅರ್ಥ ಹೆಚ್ಚು ದುಡಿಮೆ, ಕಡಿಮೆ ವಿಶ್ರಾಂತಿ ಮತ್ತು ಹೆಚ್ಚು

ಮಾನಸಿಕ ಒತ್ತಡ ಎಂದರೇನು ಎಂದರೆ ಸರಳವಾಗಿ ವಿವರಿಸುವುದು ಬಹಳ ಕಷ್ಟ. ಅದು ಮನುಷ್ಯರಲ್ಲಿ ಯಾವುದೇ ಬಗೆಯ ರೋಗವಾಗಿ ಅಥವಾ ಯಾವುದೇ ರೋಗದ ಲಕ್ಷಣವಾಗಿ ಹೊರಹೊಮ್ಮಬಹುದೆಂದರೆ ಆಗ ಮಾನಸಿಕ ಒತ್ತಡದ ಗಂಭೀರತೆಯ ಅರಿವಾಗುತ್ತದೆ.

**ಡಾ|| ಎಸ್. ದ್ವಾರಕಾನಾಥ್**

ಮಾನಸಿಕ ಒತ್ತಡ. ನಮ್ಮ ಕೆಲಸದ ಹೊರೆ ಶೇಕಡ ೬೦ಕ್ಕಿಂತ ಹೆಚ್ಚಾಗಿದ್ದರೆ ಮತ್ತು ವಿರಾಮ ಶೇಕಡ ೧೦ಕ್ಕಿಂತ ಕಡಿಮೆ ಇದ್ದರೆ ಅದು ಮುಂಬರುವ ತೊಂದರೆಯ ಸೂಚನೆ. ಆದರೆ ಇದೆಲ್ಲದರ ಸಾರ ನಾವು ಕೆಲಸ ಮಾಡದೆ ಕೇವಲ ವಿಶ್ರಾಂತಿಯಲ್ಲಿ ಕಳೆಯಬೇಕೆಂದಲ್ಲ. ಕಾಯಕವೇ ಕೈಲಾಸ. ವಿಶ್ರಾಂತಿಯೇ ಆರೋಗ್ಯವೃದ್ಧಿ.

**೨. ವ್ಯಾಯಾಮ :** ಅಪಾಯ ಎದುರಾದಾಗ, ಮಾನಸಿಕ ಒತ್ತಡ ಉಂಟಾಗಿ ನಮ್ಮ ದೇಹದಲ್ಲಿ ಅನೇಕ ಬದಲಾವಣೆಗಳಾಗುತ್ತವೆ. ಅದು ಮೆದುಳಿನಿಂದ ಸ್ರವಿಸುವ ಅನೇಕ ರಾಸಾಯನಿಕ ವಸ್ತುಗಳ ಮೂಲಕ ದೇಹದ ನಿರ್ನಾಳ ಗ್ರಂಥಿಗಳನ್ನು ಪ್ರಚೋದಿಸಿ ಅವುಗಳ ರಸದೂತಗಳ ಸ್ರವಿಸುವಿಕೆಯನ್ನು ಹೆಚ್ಚಿಸುತ್ತದೆ. ಇದರಲ್ಲಿ ಅತ್ಯಂತ ಮುಖ್ಯವಾದವುಗಳೆಂದರೆ ಅಡ್ರೆನಲ್ ಗ್ರಂಥಿಯ ಅಡ್ರೆನಾಲಿನ್ ಎಂಬ ರಸದೂತ. ಇದರ ಪರಿಣಾಮವಾಗಿ ನಮ್ಮ ನಾಡಿಯ ಬಡಿತ, ಹೃದಯದ ಮಿಡಿತ ವೇಗವಾಗುತ್ತದೆ. ರಕ್ತದ ಒತ್ತಡ ಹೆಚ್ಚುತ್ತದೆ, ಉಸಿರಾಟ ತೀವ್ರವಾಗುತ್ತದೆ. ಮಾಂಸಖಂಡಗಳಲ್ಲಿ ಹೆಚ್ಚಿನ ಒತ್ತಡ ಹಾಗೂ ರಕ್ತದಲ್ಲಿ ಸಕ್ಕರೆಯ ಪ್ರಮಾಣ ಏರುತ್ತದೆ. ಮೆದುಳು ಚುರುಕಾಗುತ್ತದೆ. ಇವುಗಳೆಲ್ಲಾ ನಾವು ಬರಲಿರುವ ಅಪಾಯವನ್ನು ಎದುರಿಸಲು ಅಥವಾ ಅಪಾಯದಿಂದ ಪಲಾಯನ ಮಾಡಲು ಸಹಕಾರಿ. ಆದರೆ ಇಂದಿನ ಸಂದರ್ಭಗಳಲ್ಲಿ ನಾವು ಹೊಡೆದಾಡುವ ಅಥವಾ ಪಲಾಯನ ಮಾಡುವ ಸಂದರ್ಭಗಳು ಬಹಳ ಕಡಿಮೆ. ಆದುದರಿಂದ ಇಂತಹ ಸಂದರ್ಭಗಳಲ್ಲಿ ದೇಹದಲ್ಲಿ ಉತ್ಪತ್ತಿಯಾಗುವ ಈ ಪ್ರವೃತ್ತಿಯನ್ನು ನಿಯಂತ್ರಿಸಲು ಕ್ರಮಬದ್ಧ ವ್ಯಾಯಾಮ ಬಹಳ ಸಹಕಾರಿ. ಪ್ರತಿದಿನ ಕನಿಷ್ಠ ೩೦ ನಿಮಿಷಗಳ ವ್ಯಾಯಾಮ ಮಾಡಿದರೆ ಒಳ್ಳೆಯದು. ಇದು ಬಿರುಸಿನ ನಡಿಗೆ ಇರಬಹುದು, ಓಡುವುದಿರಬಹುದು ಅಥವಾ ಆಟ, ಬೈಸಿಕಲ್ ತುಳಿಯುವುದು, ಈಜುವುದು ಮತ್ತು ನಾಟ್ಯ ಮಾಡುವುದಿರಬಹುದು. ನಿಮಗೆ ಇವುಗಳಲ್ಲಿ ಯಾವುದು ಇಷ್ಟವೋ ಅದನ್ನು ಮಾಡಿದರೆ ಮಾನಸಿಕ ಒತ್ತಡವೂ ಕಡಿಮೆಯಾಗಿ, ಮನಸ್ಸೂ ಹಗುರವಾಗಿ, ಆರೋಗ್ಯವೂ ವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ.

**೩. ಧ್ಯಾನ ಹಾಗೂ ಶಾಂತಿ :** ಮಾನಸಿಕ ಒತ್ತಡವನ್ನು ತಡೆಗಟ್ಟುವ ಇನ್ನೊಂದು ತಂತ್ರವೆಂದರೆ, ಧ್ಯಾನ ಹಾಗೂ ಮಾನಸಿಕ ಶಾಂತಿಯನ್ನು ಪಡೆಯುವುದು. ಮನದ ಹಾಗೂ ದೇಹದಲ್ಲಿ ಉಂಟಾಗುವ ಕ್ರಿಯೆಗಳು ಮಾನಸಿಕ ಒತ್ತಡದ ಸಂದರ್ಭಗಳಲ್ಲಿ ಹಾನಿಕಾರಕವಾದರೆ, ಅವುಗಳನ್ನು ತಪ್ಪಿಸಲು ಮಾನಸಿಕ ಶಾಂತಿ ನೆರವಾಗುತ್ತದೆ. ಅಂದರೆ ಧ್ಯಾನದಿಂದ ಮಾನಸಿಕ ಸ್ಥಿರತೆ ಮತ್ತು ಶಾಂತಿ ಉಂಟಾಗಿ ಮತ್ತು ನಾಡಿಯ ಹಾಗೂ ಹೃದಯದ ಬಡಿತಗಳು ಕಡಿಮೆಯಾಗಿ ಮಾಂಸಖಂಡಗಳು ಸಡಿಲಗೊಳ್ಳುತ್ತವೆ. ಇದನ್ನು ಪ್ರಶಾಂತ ಸ್ಥಳಗಳಲ್ಲಿ, ಉದ್ಯಾನವನದಲ್ಲಿ, ಕೆರೆಯ ಅಥವಾ ನದಿಯ ದಡಗಳಲ್ಲಿ ನಿರ್ಯೋಚನೆಯಿಂದ ಕಾಲಕಳೆದು ಪಡೆಯಬಹುದು. ಸಾಕುಪ್ರಾಣಿಗಳ ಜೊತೆ ಆಟ, ಕೈತೋಟಗಳಲ್ಲಿ ಓಡಾಟದಿಂದ ಕೂಡ ಮಾನಸಿಕ ಶಾಂತಿ ದೊರೆಯುತ್ತದೆ. ಧ್ಯಾನ ಹಾಗೂ ಯೋಗಾಭ್ಯಾಸಗಳನ್ನು ಕಲಿತು ಪ್ರತಿನಿತ್ಯ ಮಾಡಿದರೆ ಮಾನಸಿಕ ಶಾಂತಿ ಹೆಚ್ಚಾಗುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ.

**೪. ನಿದ್ರೆ :** ಸರಿಯಾಗಿ ಸಹಜವಾಗಿ ನಿದ್ರಿಸಿದರೆ ಮಾನಸಿಕ ಒತ್ತಡ ಕಡಿಮೆಯಾಗುವುದು ಸಾಮಾನ್ಯ ವಿಚಾರ. ಏಕೆಂದರೆ, ಮಾನಸಿಕ ಒತ್ತಡದಿಂದ ನರಳುವ ಬಹಳಷ್ಟು ರೋಗಿಗಳಿಗೆ ಸರಿಯಾಗಿ ನಿದ್ರೆ ಬರುವುದಿಲ್ಲ. ಇದರಿಂದ ಮಾನಸಿಕ ಹಾಗೂ ದೈಹಿಕ ಆಯಾಸ ಅನುಭವಿಸುತ್ತಾರೆ. ಮಾನಸಿಕ ಒತ್ತಡದಿಂದ ನಿದ್ರೆ ಕಡಿಮೆಯಾದರೆ ಅದರಿಂದ ಮಾನಸಿಕ ಒತ್ತಡ ಹೆಚ್ಚಾಗುವ ಒಂದು ವಿಷವರ್ತುಲದ ರಚನೆಯಾಗುತ್ತದೆ. ಆರೋಗ್ಯವಂತ ಜನರಿಗೆ ಸಾಮಾನ್ಯವಾಗಿ ೫ರಿಂದ ೧೦ ಘಂಟೆ ಅವಧಿಯಷ್ಟು ನಿದ್ರೆ ಬೇಕು. ಆದರೆ ಬಹುತೇಕ ಜನರಿಗೆ ಇಷ್ಟು ನಿದ್ರಿಸಲು ಕಾಲಾವಕಾಶ ದೊರೆಯುವುದಿಲ್ಲ. ಬೆಳಿಗ್ಗೆ ಬೇಗ ಏಳಬೇಕಾಗುವವರು ರಾತ್ರಿ ಬೇಗ ಮಲಗಿಕೊಳ್ಳುವ ಅಭ್ಯಾಸ ಮಾಡಿಕೊಳ್ಳಬೇಕು. ಸರಿಯಾಗಿ ನಿದ್ರಿಸಿ ಉಲ್ಲಸಿತರಾಗಿ ಎದ್ದರೆ ದಿನಪೂರ್ತಿ ಉಲ್ಲಾಸ ಬರುತ್ತದೆ. ಇನ್ನು ಕೆಲವರು ಮಧ್ಯಾಹ್ನ ೧೦-೨೦ ನಿಮಿಷದ 'ಬೆಕ್ಕಿನ ನಿದ್ದೆ'' ಮಾಡಿ ದೈಹಿಕ ಹಾಗೂ ಮಾನಸಿಕ ದಣಿವನ್ನು ಪರಿಹರಿಸಿಕೊಳ್ಳುತ್ತಾರೆ.

**೫. ಕೆಫೀನ್ ಯುಕ್ತ ಪಾನೀಯಗಳ ವರ್ಜನೆ :** ಕಾಫಿ, ಟೀ, ಕೋಕಾಕೋಲಾ, ಚಾಕೋಲೇಟ್ ಮುಂತಾದ ಪಾನೀಯ ಹಾಗೂ ವಸ್ತುಗಳಲ್ಲಿ ಕೆಫೀನ್ ಎಂಬ ವಸ್ತು ಇರುತ್ತದೆ. ಇದೊಂದು ಮೆದುಳನ್ನು ಉದ್ರೇಕಿಸುವ ಔಷಧ. ದಿನನಿತ್ಯ ಇವುಗಳನ್ನು ಸೇವಿಸುವ ಹವ್ಯಾಸ ಹೆಚ್ಚಾಗಿಬಿಟ್ಟಿದೆ. ಆದರೆ ಕೆಫೀನ್ ಮಾನಸಿಕ ಒತ್ತಡದಲ್ಲಿ ಸ್ರವಿಸುವ ರಾಸಾಯನಿಕಗಳನ್ನು ಉತ್ಪಾದಿಸಲು ಸಹಕರಿಸುತ್ತದೆ, ಎಂದರೆ ಮಾನಸಿಕ ಒತ್ತಡ ಹೆಚ್ಚಾಗಲು ಕಾರಣವಾಗುತ್ತದೆ. ಈ ರೀತಿಯ ಪಾನೀಯಗಳನ್ನು ಸೇವಿಸುವುದನ್ನೂ ಕ್ರಮೇಣ ಕಡಿಮೆಮಾಡಿದರೆ ಮಾನಸಿಕ ಒತ್ತಡ ಕಡಿಮೆಯಾಗುವುದಲ್ಲದೆ ದೇಹದ ದಣಿವೂ ನಿವಾರಣೆಯಾಗಿ ಹೊಸ ಶಕ್ತಿ, ಉತ್ಸಾಹ ಬರುತ್ತದೆ. ಕನಿಷ್ಠ ಪಕ್ಷ ೭೦ರಿಂದ೮೦ರಷ್ಟು ಪ್ರತಿಶತ ರೋಗಿಗಳಿಗೆ ಕೆಫೀನ್ ಬಿಡುವುದರಿಂದ ಉಪಯೋಗವಾಗುತ್ತದೆ.

**೬. ವಾಸ್ತವಿಕ ನಿರೀಕ್ಷೆಗಳು :** ಮಾನಸಿಕ ಒತ್ತಡ ಬರಲು ಕಂಡುಬರುವ ಒಂದು ಸಾಮಾನ್ಯ ಕಾರಣವೆಂದರೆ ನಮ್ಮ ನಿರೀಕ್ಷೆಗಳು ವಾಸ್ತವವಾಗಿಲ್ಲದಿರುವುದು. ಜನರಲ್ಲಿ ಅನೇಕ ಹಂಬಲ, ಆಸೆ ಮತ್ತು ಆಕಾಂಕ್ಷೆಗಳಿರುತ್ತವೆ. ನಿರೀಕ್ಷಿಸಿದಂತೆ ಅವು ಕೈಗೂಡದೆ ಹೋಗುವುದು ಮಾನಸಿಕ ಒತ್ತಡಕ್ಕೆ ಕಾರಣವಾಗುತ್ತದೆ. ಇದು ಅನಿರೀಕ್ಷಿತವಾದರೆ ಒತ್ತಡ ಹೆಚ್ಚುತ್ತದೆ. ಈ ರೀತಿಯ ಸಂದರ್ಭವನ್ನು ಮೊದಲೇ ಊಹಿಸಿದ್ದರೆ ದೈಹಿಕ ಹಾಗೂ ಮಾನಸಿಕವಾಗಿ ಎದುರಿಸಬಹುದು. ಇನ್ನು ಕೆಲವು ನಿರೀಕ್ಷೆಗಳನ್ನು ನಾವು ವಾಸ್ತವಿಕ ನೆಲೆಗಟ್ಟು, ನಮ್ಮ ಸ್ವಸಾಮರ್ಥ್ಯ ಮತ್ತು ಹಣಕಾಸಿನ ಹಾಗೂ ಜನರ ಬೆಂಬಲಕ್ಕೆ ಅನುಸಾರವಾಗಿ ಬದಲಿಸಬೇಕು ಅಥವಾ ಕೈಬಿಡಬೇಕು.

**೭. ದೃಷ್ಟಿಕೋನಗಳ ಬದಲಾವಣೆ :** ನಾವು ನಮ್ಮ ಬದುಕನ್ನು ನಮ್ಮದೇ ಆದ ದೃಷ್ಟಿಕೋನದಲ್ಲಿ ವೀಕ್ಷಿಸುತ್ತೇವೆ. ನಮ್ಮ ಅನುಭವ, ಶಿಕ್ಷಣ, ಮನೆಯ ವಾತಾವರಣ ಇತ್ಯಾದಿ ಸಂಗತಿಗಳು ನಮ್ಮ ದೃಷ್ಟಿ ಕೋನವನ್ನು ರೂಪಿಸಿರುತ್ತವೆ. ಆದರೆ ಇವುಗಳು ಸಾರ್ವಕಾಲಿಕ ಸತ್ಯವಲ್ಲದಿರಬಹುದು. ಅಲ್ಲದೆ ಅನುಭವಗಳು ವ್ಯತ್ಯಾಸವಾಗುತ್ತಾ ಹೋಗಬಹುದು. ಇನ್ನೊಂದು ವಿಚಾರವೇನೆಂದರೆ, ಯಾವುದೇ ಒಂದು ಸಮಸ್ಯೆಗೂ ಅನೇಕ ಮುಖಗಳಿರುತ್ತವೆ. ಕುರುಡರು ಆನೆಯನ್ನು ನೋಡಿ ಅದರ ಆಕಾರ ನಿರ್ಧರಿಸುವಂತೆ ಅಥವಾ ಲೋಟದಲ್ಲಿ ಹಾಲನ್ನು ಅರ್ಧಕ್ಕೆ ತುಂಬಿದ್ದರೆ, ಕೆಲವರು ಹಾಲು ಅರ್ಧ ತುಂಬಿದೆ ಎಂದರೆ, ಕೆಲವರು ಲೋಟವು ಅರ್ಧ ಖಾಲಿ ಇದೆಯೆಂದು ಪರಿಗಣಿಸುತ್ತಾರೆ. ಯಾವುದೇ ಸಮಸ್ಯೆಯನ್ನು ಸಕಾರಾತ್ಮಕವಾಗಿ ನೋಡಿದಾಗ ಮಾನಸಿಕ ಒತ್ತಡ ಕಡಿಮೆ ಯಾಗುತ್ತದೆ. ಅದೇ ನಕಾರಾತ್ಮಕವಾಗಿ ನೋಡಿದರೆ ಮಾನಸಿಕ ಒತ್ತಡಕ್ಕೆ ಎಡೆಯಾಗುತ್ತದೆ. ಈ ರೀತಿ ಯಾವುದೇ ಸಮಸ್ಯೆಯನ್ನು ವಿವಿಧ ಕೋನಗಳಿಂದ ನೋಡುವುದರಿಂದ ಸಮಸ್ಯೆಯನ್ನು ಎದುರಿಸಲು ನಾವು ಸಮರ್ಥರಾಗುತ್ತೇವೆ.

**೮. ನಂಬಿಕೆಗಳು :** ನಮ್ಮ ಜೀವನದಲ್ಲಿ ನಮ್ಮದೇ ಆದ ನಂಬಿಕೆಗಳು ಬಾಳಿನುದ್ದಕ್ಕೂ ಬಂದಿರುತ್ತವೆ. ನಾವು ಅದನ್ನೇ ಸಾರ್ವಕಾಲಿಕ ಸತ್ಯವೆಂದು ತಿಳಿದು ಆಚರಿಸುತ್ತೇವೆ. ಅಷ್ಟೇ ಅಲ್ಲ, ನಾವು ನಮ್ಮ ನಂಬಿಕೆಯಂತೆ ಬದುಕಬೇಕೆಂದು ಆಶಿಸುತ್ತೇವೆ. ನಮ್ಮ ನಂಬಿಕೆಗಳು ಅಸತ್ಯವಾದರೆ ಅಥವಾ ಬದಲಾಯಿಸಬೇಕಾದ ಸಂದರ್ಭ ಬಂದರೆ ಮಾನಸಿಕ ಒತ್ತಡ ಉಂಟಾಗುತ್ತದೆ. ಉದಾಹರಣೆಗೆ, ''ಗಂಡಸರು ಅಳಬಾರದು'', ''ಹೆಂಗಸರು ನಗಬಾರದು'' ''ಸಂಜೆಯಾಗುತ್ತಲೆ ಎಲ್ಲರೂ ಮನೆ ಸೇರಬೇಕು'' ಇತ್ಯಾದಿ. ಇದರಲ್ಲಿ ವ್ಯತ್ಯಾಸವಾದರೆ ಮಾನಸಿಕ ಒತ್ತಡಕ್ಕೆ ಕಾರಣ ವಾಗುತ್ತದೆ. ಇದೇ ರೀತಿ ನಮ್ಮ ನಂಬಿಕೆಯನ್ನು ಬೇರೆಯವರ ಮೇಲೆ ಬಲವಂತವಾಗಿ ಹೇರಿದರೆ ಅವರಿಗೂ ಮಾನಸಿಕ ಒತ್ತಡ ಉಂಟಾಗುತ್ತದೆ. ಅವರು ಅದನ್ನು ಪಾಲಿಸದಿದ್ದರೆ ಅವರ ನಂಬಿಕೆಗೂ, ನಿಮ್ಮ ನಂಬಿಕೆಗೂ ಘರ್ಷಣೆಯಾಗಿ ಇಬ್ಬರಿಗೂ ಮಾನಸಿಕ ಒತ್ತಡ. ಅವರವರ ನಂಬಿಕೆಯನ್ನು

೩೫ನೇ ಪುಟಕ್ಕೆ



# ದೇವರ ಜಾಡ್ಯ ಮತ್ತು ವಚನಕಾರರು

ಕೆ.ಡಿ. ಮುತ್ತೂರ

ದೇವರನ್ನು ಕಲ್ಪಿಸಿಕೊಳ್ಳುವುದಾಗಲಿ, ಅದನ್ನು ಕಟ್ಟಿಕೊಳ್ಳುವುದಾಗಲಿ, ಪ್ರೋತ್ಸಾಹಿಸುವುದಾಗಲಿ ಮತ್ತು ಸಹಿಸಿಕೊಳ್ಳುವುದಾಗಲಿ, ಇವುಗಳಲ್ಲಿ ಯಾವುದಾದರೊಂದು ಕ್ರಿಯೆಯಲ್ಲಿ ತೊಡಗಿದರೂ ಮಾನವೀಯತೆಯ ಎಲ್ಲೆಯನ್ನು ಮೀರಿ ತನ್ನನ್ನು ತಾನು ಅವಮಾನಪಡಿಸಿಕೊಳ್ಳುತ್ತಾನೆ. ವೈಚಾರಿಕ ದೃಷ್ಟಿಯಿಂದ ನೋಡಿದರೆ ಆತ ಬಹಳ ಕೀಳುಮಟ್ಟಕ್ಕೆ ಇಳಿಯುತ್ತಿರುವುದು ಗೋಚರಿಸುತ್ತದೆ. ಇಂತಹ ಸಂದರ್ಭದಲ್ಲಿ ವ್ಯಕ್ತಿ ತನ್ನ ಕರ್ತವ್ಯ ಮತ್ತು ಕೆಲಸ ಕಾರ್ಯಗಳನ್ನು ತೊರೆದು, ವೈಯಕ್ತಿಕ ಚಿಂತನೆಯಲ್ಲಿ ತನ್ನನ್ನು ತಾನು ಮೆಚ್ಚಿಕೊಳ್ಳುವುದರಲ್ಲಿ ತೊಡಗಿಕೊಳ್ಳುತ್ತಾನೆ. ಅಲ್ಲದೆ ಅಹಂಕಾರ ಮಮಕಾರಗಳಲ್ಲಿ ಸಿಕ್ಕು ಖುಷಿಪಡುತ್ತಾನೆ. ಇತರರನ್ನು ನಿಂದಿಸಿ, ಹೀಯಾಳಿಸುತ್ತಾನೆ. ಸಾಮಾಜಿಕ ದೃಷ್ಟಿಯಿಂದ ನೋಡುವುದಾದರೆ ಈ ಮನುಷ್ಯ ದೇವರ ದಯೆ ಎಂದು ಹೇಳಿಕೊಳುತ್ತಾ ಶೋಷಣೆಯ ಎಲ್ಲ ಬಾಗಿಲುಗಳನ್ನು ತೆರೆದು ದುಡ್ಡು ಸಂಪಾದನೆ ಮಾಡುತ್ತ ತನ್ನ ಶೋಷಕ ಪ್ರವೃತ್ತಿಯನ್ನು ಪ್ರದರ್ಶಿಸುತ್ತಾನೆ. ಇದು ಬಂಡವಾಳಶಾಹಿಯ ಅಥವಾ ಶ್ರೀಮಂತಿಕೆಯ ಮುಖ್ಯ ಲಕ್ಷಣವಾಗಿದೆ. ಈ ಮಾತು ಯಾವ ದೇಶದವರಾಗಲಿ, ಯಾವುದೇ ಜನಾಂಗದವರಾಗಲಿ, ಯಾವುದೇ ಧರ್ಮದವರಾಗಲಿ ಎಲ್ಲರಿಗೂ ಭೇದ ಭಾವ ಇಲ್ಲದೆ ಅನ್ವಯವಾಗುತ್ತದೆ.

ಅಂದಿನ ಸಂದರ್ಭದಲ್ಲಿ ನಮ್ಮ ನಾಡಿನ ಧಾರ್ಮಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿಯ ಬಗ್ಗೆ ವಚನಕಾರರು ಕಂಡುಂಡ ಸತ್ಯವನ್ನು ವಿವರಿಸುವುದಾದರೆ, ರಾಜಮಹಾರಾಜರು ಮತ್ತು ಪುರೋಹಿತರು ಶೋಷಣೆಯನ್ನೇ ಮುಖ್ಯ ಗುರಿಯನ್ನಾಗಿಟ್ಟುಕೊಂಡು ತಮ್ಮ ಸ್ವಾರ್ಥಪರ ಕಾನೂನುಗಳನ್ನು ರಚಿಸಿ ರಾಜನ ಮುಖಾಂತರ ಅವುಗಳನ್ನು ಚಲಾವಣೆಗೆ ತರುತ್ತಿದ್ದರು. ದುಡಿಯುವ ಜನ, ಶೂದ್ರಾತಿಶೂದ್ರರು, ಕೂಲಿಕಾರರು, ಬಡವರು, ಎಲ್ಲಾ ಶ್ರಮಜೀವಿಗಳು ಇವರುಗಳೇ ಬಲಿಯಾಗುವ ನರಗುರಿಗಳು. ಇದಕ್ಕೆ ಕಾರಣವಾದ ಸಾಧನ ಸಲಕರಣೆಗಳೆಂದರೆ ರಾಜ್ಯದಾಡಳಿತ ವಸೂಲಾತಿಯನ್ನು ಹೊರತುಪಡಿಸಿ ಸಾಮಾಜಿಕ ಪಿಡುಗುಗಳಾದ ಮತಗಳು, ದೇವರುಗಳು, ಗುಡಿ-ಗುಂಡಾರಗಳು, ಪೂಜೆಗಳು, ನಿರಂತರ ಬೋಧನೆಗೊಳಗಾದ ಪಾಪ-ಪುಣ್ಯ, ಸ್ವರ್ಗ-ನರಕ ಇವುಗಳ ಮುಖಾಂತರ ಶೋಷಣೆ ನಡೆಯುತ್ತಿತ್ತು ಎಂಬುದು ವಚನಕಾರರಿಗೆ ಮನದಟ್ಟಾಗಿತ್ತು. ಅದಕ್ಕಾಗಿ ಅವರು ಮೊದಲು ಧಾರ್ಮಿಕ ಹಾಗೂ ಸಾಮಾಜಿಕ ಕ್ರಾಂತಿಗೆ ಕೈಹಾಕಿದರು. ವ್ಯಕ್ತಿ ತನ್ನ ಕಾಲ ಮೇಲೆ ತಾನು ನಿಲ್ಲುವಂತಾಗಲು ಕಾಯಕದ ಸೂತ್ರವನ್ನು ಆಚರಣೆಗೆ ತಂದರು. ಸ್ವಾವಲಂಬನೆಯ ಬದುಕಿಗೆ ನಾಂದಿ ಹಾಡಿದರು. ಧರ್ಮವು ವ್ಯಕ್ತಿ ಜೀವನವನ್ನಲ್ಲದೆ, ಇಡೀ ಮಾನವ ಕುಲವನ್ನೇ ಸುವ್ಯವಸ್ಥಿತವಾಗಿ ರೂಪಿಸುತ್ತದೆ ಎಂಬುದು ಸೂರ್ಯ ಪ್ರಕಾಶಿಸಿದಷ್ಟು ಸತ್ಯ. ಅದಕ್ಕಾಗಿ ಮೂಢನಂಬಿಕೆಗಳಾದ ಮತಗಳು, ಪೂಜೆಗಳು, ಗುಡಿ-ಗುಂಡಾರಗಳು, ದೇವತಾರಾಧನೆಗಳು ಮೊದಲಾದವುಗಳನ್ನು ತಿರಸ್ಕರಿಸಿ ಪುರೋಹಿತಶಾಹಿಗಳಿಗೆ ಹೀಗೆ ಹೇಳುತ್ತಾರೆ :

*ಕಲ್ಲುದೇವರು ದೇವರಲ್ಲ*
*ಮಣ್ಣುದೇವರು ದೇವರಲ್ಲ*
*ಮರದದೇವರು ದೇವರಲ್ಲ*
*ಪಂಚಲೋಹದಲ್ಲಿ ಮಾಡಿದ ದೇವರು ದೇವರಲ್ಲ*
*ಸೇತು ರಾಮೇಶ್ವರ, ಗೋಕರ್ಣ, ಕಾಶಿ, ಕೇದಾರ*
*ಮೊದಲಾಗಿ ಅಷ್ಟಾಷಷ್ಟಿ ಕೋಟಿ*
*ಪುಣ್ಯ ಕ್ಷೇತ್ರಗಳಲ್ಲಿಹ ದೇವರು ದೇವರಲ್ಲ*
*ತನ್ನತಾನರಿದು ತಾನಾರೆಂದು ತಿಳಿದಡೆ ತಾನೇ ದೇವ*
*ನೋಡಾ ಅಪ್ರಮಾಣ ಕೂಡಲ ಸಂಗಮದೇವಾ*

ಕಲ್ಲು ಮೂರ್ತಿಗಳು, ಮಣ್ಣಿನ ಮತ್ತು ಕಟ್ಟಿಗೆಯ ಗೊಂಬೆಗಳು, ಲೋಹದಲ್ಲಿ ಮಾಡಿದ ಮೂರ್ತಿಗಳು, ದೇವರಾಗುವುದಿಲ್ಲ, ಅವು ಆಟಿಕೆ ವಸ್ತುಗಳು. ಅಲ್ಲದೆ ರಾಮೇಶ್ವರ, ಗೋಕರ್ಣ ಮತ್ತು ಕೇದಾರ ಮೊದಲಾದ ನಿಸರ್ಗಧಾಮಗಳು ದೇವರ ಸ್ಥಾನಗಳಲ್ಲ. ಅವು ಸೃಷ್ಟಿ ಸೌಂದರ್ಯದ ಸ್ಥಳಗಳು ಎಂದು ಬಾಲಸಂಗಯ್ಯನವರು ಮೇಲಿನ ವಚನದಲ್ಲಿ ಹೇಳುತ್ತಾರೆ. ತನ್ನ ತಾನರಿಯುವುದೆಂದರೇನು ? ನಾನು ಮನುಷ್ಯ ನಿಜ. ಆದರೆ ಗುರು, ಲಿಂಗ, ಜಂಗಮ, ಕಾಯಕ, ಪ್ರಸಾದ ಮತ್ತು ದಾಸೋಹ ಈ ಆರು ಪದಗಳು ನನ್ನ ಅರಿವಿಗೆ ಬರುತ್ತವೆ. ಅವುಗಳನ್ನು ಅರ್ಥೈಸಿಕೊಂಡು ಮುಂದೆ ಹೋಗಬೇಕು. ಅದು ನನ್ನ ಕರ್ತವ್ಯ ಕೂಡ ಹೌದು.

ಕಾಯಕ ಎಂದರೆ ಉಪಜೀವನಕ್ಕೆ ಯಾವುದಾದರೊಂದು ಉತ್ಪಾದನೆ ಚಟುವಟಿಕೆ. ಪ್ರಸಾದ ಎಂದರೆ ಜ್ಞಾನ. ಈ ಜ್ಞಾನವು ಕ್ರಿಯೆಯಿಂದಲೇ ಅಥವಾ ತನ್ನ ಕಾಯಕದಿಂದಲೇ ಪ್ರಾಪ್ತವಾಗುವಂಥದ್ದು. ಕಾಯಕದಿಂದ ದೇಹ ಮತ್ತು ಪ್ರಸಾದದಿಂದ ಮನಸ್ಸು, ಶಕ್ತಿಯನ್ನು ಸುಜ್ಞಾನವನ್ನು ಸುಸಂಸ್ಕೃತಿಯನ್ನು ಪಡೆಯುತ್ತದೆ. ದಾಸೋಹ ಎಂದರೆ ಕಲಿಸುವುದು, ಕಲಿಯುವುದು ಮತ್ತು ಜನತೆಗೆ ಕಾಯಕ ಪ್ರಸಾದದ ತರಬೇತಿ ಕೊಡುವುದು. ತನಗಾದ ಅನುಭವ ಮತ್ತು ಜ್ಞಾನವನ್ನು ಇತರರಿಗೆ ಹಂಚುವುದೇ ದಾಸೋಹ. ಈ ಮಾತನ್ನು ಪ್ರಾಮಾಣಿಕವಾಗಿ ತಿಳಿದುಕೊಂಡರೆ ತನ್ನ ತಾನರಿತುಕೊಂಡಂತೆ ಎಂದು ವಚನಕಾರರ ಅಭಿಪ್ರಾಯ. ಹೀಗೆ ನಡೆದುಕೊಳ್ಳುವುದಾದಲ್ಲಿ ತಾನೇ ದೇವರು, ತನ್ನ ಬಿಟ್ಟು ದೇವರಿಲ್ಲವೆಂದು ಘೋಷಿಸುತ್ತಾರೆ.

ಗುರು ಎಂದರೆ ಅರಿವು ಜ್ಞಾನ. ಲಿಂಗ ಎಂದರೆ ಸತ್ಯ ಪ್ರಾಮಾಣಿಕತೆ ಮತ್ತು ಸತ್ ಅಂದರೆ ಒಳ್ಳೆಯದು. ಜಂಗಮ ಎಂದರೆ ನಾನು ಯಾವ ಜನಜಂಗುಳಿಯ ಘಟಕವಾಗಿ ಬದುಕುತ್ತೇನೆಯೋ ಆ ಸಮಾಜ. ಅದುವೇ ಜಂಗಮ.

ಕಾಯಕ ಎಂದರೆ ಉಪಜೀವನಕ್ಕೆ ಯಾವುದಾದರೊಂದು ಉತ್ಪಾದನೆ ಚಟುವಟಿಕೆ. ಪ್ರಸಾದ ಎಂದರೆ ಜ್ಞಾನ. ಈ ಜ್ಞಾನವು ಕ್ರಿಯೆಯಿಂದಲೇ ಅಥವಾ ತನ್ನ ಕಾಯಕದಿಂದಲೇ ಪ್ರಾಪ್ತವಾಗುವಂಥದ್ದು. ಕಾಯಕದಿಂದ ದೇಹ ಮತ್ತು ಪ್ರಸಾದದಿಂದ ಮನಸ್ಸು, ಶಕ್ತಿಯನ್ನು ಸುಜ್ಞಾನವನ್ನು ಸುಂಸ್ಕೃತಿಯನ್ನು ಪಡೆಯುತ್ತದೆ. ದಾಸೋಹ ಎಂದರೆ ಕಲಿಸುವುದು, ಕಲಿಯುವುದು ಮತ್ತು ಜನತೆಗೆ ಕಾಯಕ ಪ್ರಸಾದದ ತರಬೇತಿ ಕೊಡುವುದು. ತನಗಾದ ಅನುಭವ ಮತ್ತು ಜ್ಞಾನವನ್ನು ಇತರರಿಗೆ ಹಂಚುವುದೇ ದಾಸೋಹ. ಈ ಮಾತನ್ನು ಪ್ರಾಮಾಣಿಕವಾಗಿ ತಿಳಿದುಕೊಂಡರೆ ತನ್ನ ತಾನರಿತುಕೊಂಡಂತೆ ಎಂದು ವಚನಕಾರರ ಅಭಿಪ್ರಾಯ. ಹೀಗೆ ನಡೆದುಕೊಳ್ಳುವುದಾದಲ್ಲಿ ತಾನೇ ದೇವರು, ತನ್ನ ಬಿಟ್ಟು ದೇವರಿಲ್ಲವೆಂದು ಘೋಷಿಸುತ್ತಾರೆ.

*ಬ್ರಹ್ಮ ದೇವರಲ್ಲ ವಿಷ್ಣು ದೇವರಲ್ಲ*
*ರುದ್ರ ದೇವರಲ್ಲ ಈಶ್ವರ ದೇವರಲ್ಲ*
*ಸದಾಶಿವ ದೇವರಲ್ಲ ಸಹಸ್ರ ಶಿರ*
*ಸಹಸ್ರಾಕ್ಷ ಸಹಸ್ರ ಪಾದವನುಳ್ಳ*
*ವಿರಾಟಪುರುಷ ದೇವರಲ್ಲ*
*ವಿಶ್ವತೋಮುಖ, ವಿಶ್ವತೋಚಕ್ಷು*
*ವಿಶ್ವತೋಬಾಹು ವಿಶ್ವತೋಪಾದವನುಳ್ಳ*
*ಮಹಾಪುರುಷ ದೇವರಲ್ಲ*
*ಸಹಜ ನಿರಾಲಂಬವೇ ತಾನೆಂದರಿದ ಮಹಾಶರಣ*
*ತಾನೇ ದೇವ ನೋಡಾ ಅಪ್ರಮಾಣ ಕೂಡಲ*
*ಸಂಗಮದೇವಾ*

ಇಲ್ಲಿ ವಚನಕಾರರು ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಮೊದಲಾದವರು ದೇವರೇ ಅಲ್ಲ; ಸಾವಿರ ಶಿರಸ್ಸು, ಸಾವಿರ ಕಣ್ಣು, ಸಾವಿರ ಪಾದಗಳು ಇರುವಂಥ ದೊಡ್ಡ ಮನುಷ್ಯನೂ ದೇವರಲ್ಲ; ವಿಶ್ವದ ತುಂಬ ದೊಡ್ಡ ಮುಖ, ವಿಶ್ವದ ತುಂಬ ದೊಡ್ಡ ಕಣ್ಣು, ವಿಶ್ವದ ತುಂಬ ಆಜಾನುಬಾಹುಗಳು, ವಿಶ್ವದ ತುಂಬ ಪಾದಗಳು, ಎಂದು ಭಗವದ್ಗೀತೆಯಲ್ಲಿ ವರ್ಣಿಸಿದಂಥ ವಿರಾಟಪುರುಷನೂ ಕೂಡ ದೇವರಲ್ಲ. ಮೇಲಿನ ವಚನದಲ್ಲಿ ವಿವರಿಸಿದಂತೆ ಅತ್ಯಂತ ಸರಳ ಸಹಜವಾಗಿ ಯಾರನ್ನೂ ಅವಲಂಬಿಸದ, ಯಾರ ಆಶ್ರಯವನ್ನೂ ಬಯಸದ ಸುಜ್ಞಾನ ಸತ್‌ಕ್ರಿಯೆಗಳಲ್ಲಿ ತೊಡಗಿಸಿಕೊಂಡ ಮನುಷ್ಯನನ್ನೇ ದೇವರೆಂದು ಕರೆಯಲಾಗಿದೆ.

ರುದ್ರನೇ ದೇವರೆಂದು ಆರಾಧಿಸಿ

ಶಿಲೆಯೊಳಗೆ ಹೋರಟೆಗೊಂಡು ಕೆಟ್ಟರಲ್ಲ
ಭಕ್ತಜನಂಗಳು
ವಿಷ್ಣುವೇ ದೇವರೆಂದು ಆರಾಧಿಸಿ
ಕೆಟ್ಟರಲ್ಲ ಭೂ ಸುರಾದಿಗಳು
ಬ್ರಹ್ಮನೇ ದೇವರೆಂದಾರಾಧಿಸಿ ಬೆಂಕಿಯೊಳಗೆ
ಬೆಂದರಲ್ಲ
ಮರ್ತ್ಯಲೋಕದ ಮಹಾಜನಂಗಳು
ಧಾರುಣಿಯೊಳಗೆ ಹೇರಿನಕ್ಕಿ, ಲಳಿಗೆ ಎಣ್ಣೆ,
ಹೂವು, ಕಾಯಿ, ಹಣ್ಣು, ಮೊದಲಾದವನು
ತಪ್ಪ ಸಾಧಿಸಿ ತರಿಸಿಕೊಂಡುಂಬ
ಇವರುಗಳಿಗೆಲ್ಲಿಯದೋ ನೆಟ್ಟನೆಯ ದೇವತ್ವ
ಎನ್ನ ದೇವಂಗೆ ಇಂಥವರಿಂದ ಒಂದೂ ಇಲ್ಲ.
ಕಾಲದೊಳಗಾದ ಪ್ರಳಯ ವಿರಹಿತ
ಕರ್ಮದೊಳಗಾದ ಚತುರ್ವಿಧ ಪದರಹಿತ
ಗಂಗೆ ವಾಳುಕ ಸಮಾ ರುದ್ರರೊಳಗಾದ ಬಂಧನ
ವಿರಹಿತ
ಲೀಲೆಗೆ ಹೊರಗಾದ ಸ್ವಯಂಭುವಯ್ಯಾ ಎನ್ನದೇವ
ಇಂತಿವರೆಲ್ಲರೂ ಪ್ರತಿಷ್ಠೆಯನಾಧರಿಸಿ
ಪ್ರಸನ್ನರಾದವರಯ್ಯಾ
ಇಂತೀ ಪುಣ್ಯದ ಫಲ ಎನಗೊಂದು ಬೇಡ
ಇವೆಲ್ಲ ಒಳಗಿರಲಿ ನಾ ಹೊರಗಯ್ಯಾ ನಿಮ್ಮಾಣೆ ನಿಮ್ಮ
ಪ್ರಮಥರಾಣೆ
ಅಲಸಿದನಲಸಿದೆ ನಿಮ್ಮ ಕಷ್ಟದ ಸೇವೆ ಏನಯ್ಯಾ ?
ಎನ್ನಹೊರಗಿರಿಸಿ ನಿಮ್ಮೊಳಗಾದೆನಯ್ಯಾ ನೀಃಕಳಂಕ
ಮಲ್ಲಿಕಾರ್ಜುನ

ರುದ್ರ ದೇವರೆಂದು ಕಲ್ಲಿನಲ್ಲಿ ದೇವರನ್ನು ಕಟಿಕಟಿದು ಕೆಟ್ಟರು. ವಿಷ್ಣು ದೇವರೆಂದು ಪೂಜಿಸಿ ಭೂಸುರರು ಕೆಟ್ಟರು. ಬ್ರಹ್ಮ ದೇವರೆಂದು ಯಜ್ಞ ಯಾಗಾದಿಗಳನ್ನು ಮಾಡಿ ಬೆಂದುಹೋದರು ಮಹಾಜನರು. ಬಂಡಿಯ ತುಂಬ ಅಕ್ಕಿ, ಬ್ಯಾರಲ್ ತುಂಬ ಎಣ್ಣೆ, ಹೂವು, ಹಣ್ಣು , ಕಾಯಿ, ಇನ್ನೂ ಅನೇಕ ವಸ್ತುಗಳನ್ನು ತರಿಸಿ ಹೊಟ್ಟೆತುಂಬಾ ತಿಂದು ಸುಳ್ಳನ್ನೇ ಸಾಧಿಸಿದರು. ದೇವರ ಹೆಸರಿನಲ್ಲಿ ಇದನ್ನೆಲ್ಲಾ ಮಾಡಿದ್ದಾರೆ. ಇವರಿಗೆಲ್ಲಿ ದೇವರಿದೆ ಹೇಳಿ. ಕಾಲಕ್ಕೊಳಗಾದರೂ ಪ್ರಳಯವಿಲ್ಲ. ಕರ್ಮಕ್ಕೊಳಗಾದರೂ ಪದವಿಗಳಿಲ್ಲ. ಅಸಂಖ್ಯಾತ ರುದ್ರರಿದ್ದರೂ ಇವರಿಗೆ ಬಂಧನವಿಲ್ಲ. ಆಟ ಮಾಟಗಳಿಲ್ಲ. ತಮ್ಮ ಪ್ರತಿಷ್ಠೆಗೆ ಶಬ್ದಗಳಲ್ಲಿ ವಾಗಾಡಂಬರಗಳಲ್ಲಿ ಪ್ರಸಿದ್ಧಿಯನ್ನು ಪಡೆದವರು ಪುಣ್ಯಸಂಪಾದಿಸಿದವರು. ಇಂಥ ಪುಣ್ಯದ ಫಲಗಳು ನಮಗೆ ಬೇಡವೇ ಬೇಡ. ಇವೆಲ್ಲವುಗಳಿಂದ ಮುಕ್ತವಾದ ಸುಜ್ಞಾನ ಸತ್‌ಕ್ರಿಯೆಗಳಲ್ಲಿ ತಲ್ಲೀನರಾಗಿ ಅವಗುಣಗಳಿಂದ ಹೊರಗಾಗಿ ಸದಾಚಾರಕ್ಕೆ ಒಳಗಾಗಿ ನಡೆವೆನಯ್ಯಾ ನೀಃಕಳಂಕ ಮಲ್ಲಿಕಾರ್ಜುನ ಎಂದು ಮೋಳಿಗೆ ಮಾರಯ್ಯನವರು ಹೇಳುತ್ತಾರೆ.

ಶ್ರದ್ಧಾಂಜಲಿ



ಮುಗ್ಗಟ್ಟಿನಲ್ಲೇ ಅರಳಿದ್ದ ಕಲಾವಿದ ಕುಶಾಲ್ ಕುಮಾರ್ ರಚಿಸಿದ್ದ ಚಿತ್ರಗಳು 'ಹೊಸತು' ಏಪ್ರಿಲ್ ೨೦೦೧ರ ಮುಖಪುಟವನ್ನು ಅಲಂಕರಿಸಿದ್ದವು. ಖ್ಯಾತ ಕಲಾವಿದರಾದ ಪ. ಸ. ಕುಮಾರ್ ಅವರ ಪುತ್ರ ಕುಶಾಲ್ ಇತ್ತೀಚೆಗಷ್ಟೇ ನಿಧನರಾದರು. ಈ ಎಳೆಯ ಕಲಾವಿದನ ನೆನಪಿಗೆ ಹೊಸತು ಶ್ರದ್ಧಾಂಜಲಿ ಅರ್ಪಿಸುತ್ತದೆ.

ಕಲ್ಲು, ಮಣ್ಣು, ಮರದಲ್ಲಿ ದೇವನಿದ್ದಿಹನೆಂದು
ಎಲ್ಲಿಯೂ ತೊಳಲುತ್ತಿರ್ಪ ಅಣ್ಣಗಳು ಕೇಳಿರೋ
ಅದ ಅಲ್ಲಲ್ಲಿಟ್ಟ ಬಲ್ಲತನದ ಕುರುಹಲ್ಲದೇ
ಸೊಲ್ಲಿಗತೀತನರಿಯೆಯಾ
ಮನದಿರವೆಲ್ಲಿಹುದು ಅವನಲ್ಲಿಹ
ನೀಃಕಳಂಕ ಮಲ್ಲಿಕಾರ್ಜುನ

ಕಲ್ಲು, ಮಣ್ಣು, ಮರದಲ್ಲಿ ದೇವನಿರುವನೆಂದು ತೊಳಲಿ ಬಳಲುತ್ತಿರುವ ಅಣ್ಣಗಳಿರಾ, ನಾನು ಹೇಳುವುದನ್ನು ಕೇಳಿ. ನೀವು ಅದನ್ನು ಅಲ್ಲಿಟ್ಟು, ನಿಮ್ಮ ಅಹಂಭಾವದಿಂದ ಪ್ರದರ್ಶನಮಾಡಿದ ವಸ್ತುವಿನ ಗುರುತು ಹೊರತಾಗಿ ಅದು ದೇವರಲ್ಲ. ದೇವನೆಂಬುವವ ಮಾತಿಗೆ ಮಾಲೆಗೆ ಸಿಗಲಾರದ ವಸ್ತು. ಅದು ಜ್ಞಾನದಲ್ಲಿ ಕ್ರಿಯೆಯಲ್ಲಿ ಕಂಡುಬರುವ ಕ್ರಿಯಾಸ್ವರೂಪದ ಕಲ್ಯಾಣಕಾರಕವಾದ ಕೆಲಸವೆಂದು ಮೋಳಿಗೆ ಮಾರಯ್ಯನವರು ಹೇಳುತ್ತಾರೆ.

ಹೀಗೆ ಇನ್ನೂ ಅನೇಕ ವಚನಗಳನ್ನು ಉದಾಹರಿಸಬಹುದು. ವಚನಕಾರರು ಜಾತಿ-ಮತ, ಗುಡಿ-ಗೋಪುರ, ಮಠ-ಮಂದಿರ ಇವುಗಳಿಗಾಗಿ ತಲೆ ಕೆಡಿಸಿಕೊಂಡವರಲ್ಲ. ಶ್ರೀಸಾಮಾನ್ಯರ ಬದುಕು ಹಸನಾಗಬೇಕು. ಸಾಮಾಜಿಕ ಸಮಾನತೆ ಬರಬೇಕು. ಆರ್ಥಿಕ ಸಂಪನ್ನತೆ ಕೈಗೂಡಬೇಕು. ಧರ್ಮ ಪ್ರತಿಯೊಬ್ಬನ ನೆರವಿಗೆ ಬರಬೇಕು. ರಾಜಕೀಯದಲ್ಲಿ ಎಲ್ಲರೂ ಭಾಗವಹಿಸುವಂತಾಗಬೇಕು. ಯಾವತ್ತೂ ಜನರು ನಾವು ಹಿಂದುಗಳೆಂದು ಹೇಳಿಕೊಳ್ಳಲಿ ಬಿಡಲಿ ಅದೇನು ಮಹತ್ವದ್ದಲ್ಲ. ಆದರೆ ನಾವೆಲ್ಲಾ ಬಂಧುಗಳೆನ್ನುವುದನ್ನು ಮರೆಯಬಾರದು. ಒಂದೇ ತಾಯಿಯ ಮಕ್ಕಳೆಂದು ಹೇಳಿ ಹೇಳಿಕೊಂಡು ಅದರಂತೆ ಎಲ್ಲರೂ ಬದುಕಲು ಕಲಿಯಲೆಂಬುದು ವಚನಕಾರರ ಹಿರಿಯಾಸೆಯಾಗಿತ್ತು. ವಚನ ಸಾಹಿತ್ಯವನ್ನು ಸಮಗ್ರವಾಗಿ ಚೆನ್ನಾಗಿ ಓದಿಕೊಂಡವನಿಗೆ ಈ ಮಾತಿನ ಅರ್ಥವಾಗುತ್ತದೆ ಎಂಬುದರಲ್ಲಿ ಸಂದೇಹವೇ ಇಲ್ಲ.

ಯಾವನಾದರೂ ಇದು ತಿಳಿದಿಲ್ಲ ಎನ್ನುವುದಾದರೆ, ಅವನು ಹುಚ್ಚನಾಗಿರಬೇಕು. ಇಲ್ಲವೆ ಜಾತಿವಾದಿಯಾಗಿರಬೇಕು. ಮತೀಯವಾದಿಯಾಗಿರಬೇಕು. ಇದಾವುದೂ ಅಲ್ಲವೆಂದರೆ ಆತ ಕಲಹಪ್ರಿಯನಾಗಿರಬೇಕು ಅಷ್ಟೇ.

ಕೆ.ಡಿ. ಮುತ್ತೂರ
ಮಲ್ಲಮ್ಮನಗರ, 'ಕಲ್ಯಾಣ ಕುಂಜ', ಮುಧೋಳ - ೫೮೭ ೩೧೩

೩೩ನೇ ಪುಟದಿಂದ *(ಮಾನಸಿಕ ಒತ್ತಡ....)*

ಅವರವರಿಗೆ ಬಿಟ್ಟುಕೊಟ್ಟು ಅದರಂತೆ ಜೀವಿಸುವ ಸ್ವಾತಂತ್ರ್ಯ ಕೊಟ್ಟರೆ ಆಗ ಮಾನಸಿಕ ಒತ್ತಡಕ್ಕೆ ಪರಿಹಾರ ದೊರೆಯುತ್ತದೆ.

**೯. ಹಾಸ್ಯಪ್ರಜ್ಞೆ :** ಹಾಸ್ಯಮಯ ಪ್ರವೃತ್ತಿ ಮಾನಸಿಕ ಒತ್ತಡ ಪರಿಹರಿಸುವಲ್ಲಿ ಅತ್ಯಂತ ಸಹಾಯಕವಾದುದು. ನಗುವುದರಿಂದ ಮಾನಸಿಕ ಒತ್ತಡ ಕಡಿಮೆಯಾಗುತ್ತದೆ. ಮನಸ್ಸು ಹಗುರವಾಗುತ್ತದೆ. ಸಮಸ್ಯೆಗಳು ತಮ್ಮ ಕ್ಲಿಷ್ಟತೆಯನ್ನು ಕಳೆದುಕೊಂಡು ಸೌಮ್ಯವಾಗಿ ಕಾಣಬರುತ್ತವೆ. ಆದರೆ ಒಬ್ಬೊಬ್ಬರ ಹಾಸ್ಯಪ್ರವೃತ್ತಿ ಒಂದೊಂದು ಬಗೆಯದಾಗಿರುತ್ತದೆ. ತಿಳಿಯಾಗಿ ಯಾರನ್ನೂ ನೋಯಿಸದಂತೆ ಎಲ್ಲರ ಮನಸೆಳೆಯುವಂತೆ ಹಾಸ್ಯದಲ್ಲಿ ತೊಡಗುವುದು, ಹೇಳುವುದು ಒಂದು ಕಲೆ. ಡಿ.ವಿ.ಜಿ.ಯವರು ಹೇಳಿದಂತೆ "ನಗುವುದು ಸಹಜ ಧರ್ಮ, ನಗಿಸುವುದು ಪರ ಧರ್ಮ, ನಕ್ಕು ನಗಿಸುವ ವರವ ನೀ ಕೇಳಿಕೊಳ್ಳೊ ಮಂಕುತಿಮ್ಮ" ಎಂಬುದು ಮಾನಸಿಕ ಒತ್ತಡ ಪರಿಹರಿಸುವ ಪರಮೋಪಾಯ.

**೧೦. ಪರಾವಲಂಬನೆ :** ಕೆಲವು ವೇಳೆ ನಮ್ಮ ಮಾನಸಿಕ ಒತ್ತಡ ಅತಿಯಾಗಿ ಏನೂ ಮಾಡಲು ತೋಚುವುದಿಲ್ಲ. ಜಗತ್ತೇ ಶೂನ್ಯವೆನಿಸುತ್ತದೆ. ಆಗ ನಮ್ಮ ದುಃಖಗಳನ್ನು ಸ್ನೇಹಿತರಲ್ಲಿ, ಹಿತೈಷಿಗಳಲ್ಲಿ ಬಂಧುಗಳಲ್ಲಿ ಅಥವಾ ವೈದ್ಯರಲ್ಲಿ ಹೇಳಿಕೊಂಡರೆ ಮನಸ್ಸು ಹಗುರವಾಗಿ ಮಾನಸಿಕ ಒತ್ತಡ ಕಡಿಮೆಯಾಗುತ್ತದೆ. ಇದಕ್ಕಾಗಿಯಾದರೂ ನಮ್ಮನ್ನು ಅನುಕಂಪದಿಂದ ನೋಡುವ ನಮ್ಮ ಸುಖ ದುಃಖ ಹಂಚಿಕೊಳ್ಳವವರನ್ನು ಇಟ್ಟುಕೊಳ್ಳುವುದು ಮಾನಸಿಕ ಆರೋಗ್ಯಕ್ಕೆ ಸಹಕಾರಿ. ಎಷ್ಟೋ ವೇಳೆ ಬೇರೆಯವರ ಸಮಸ್ಯೆಗಳನ್ನು ನಾವು ಶಾಂತರೀತಿಯಿಂದ, ಅನುಕಂಪ ಪೂರಿತ ಭಾವನೆಯಿಂದ ಆಲಿಸಿದರೂ ಸಾಕು ಅವರ ಮಾನಸಿಕ ಒತ್ತಡ ಕಡಿಮೆಯಾಗುತ್ತದೆ. ಆದರೆ ಇದನ್ನೇ ಅತಿಯಾಗಿಸಿ ಚಿಕ್ಕಪುಟ್ಟ ಸಮಸ್ಯೆಗಳನ್ನು ಎಲ್ಲರಲ್ಲಿ ಹೇಳಿಕೊಳ್ಳುವ ಅಭ್ಯಾಸ ಮಾಡಬಾರದು. ಅದೇ ರೀತಿ ನಾವು ಒಬ್ಬರಿಗೊಬ್ಬರು ಆಸರೆಯಾದರೆ ನಮ್ಮ ಮಾನಸಿಕ ಒತ್ತಡ ಕಡಿಮೆಯಾಗುತ್ತದೆ. ಅಲ್ಲದೆ, ಪರಸ್ಪರ ಸ್ನೇಹ, ಪ್ರೀತಿ ವಿಶ್ವಾಸ, ಗೌರವಗಳು ವೃದ್ಧಿಗೊಂಡು ಸಮಾಜದ ಮಾನಸಿಕ ಆರೋಗ್ಯ ಉತ್ತಮವಾಗುವುದರಲ್ಲಿ ಸಂದೇಹವಿಲ್ಲ.

"ದುಃಖವನ್ನು ಹಂಚಿಕೊಂಡರೆ ಕಡಿಮೆಯಾಗುತ್ತದೆ. ಸಂತೋಷವನ್ನು ಹಂಚಿಕೊಂಡರೆ ಹೆಚ್ಚಾಗುತ್ತದೆ" ಎಂಬ ಹೇಳಿಕೆಯನ್ನು ನಾವು ನಮ್ಮ ಜೀವನದಲ್ಲಿ ಅಳವಡಿಸಿಕೊಂಡರೆ ಮಾನಸಿಕ ಒತ್ತಡ ಒಂದು ರೋಗವಾಗಿ ಪರಣಮಿಸುವುದರ ಬದಲು ಮಾನಸಿಕ ಆರೋಗ್ಯ ಅಭಿವೃದ್ಧಿಯಾಗುವುದು ಖಂಡಿತ.

[redacted] ಎಸ್. ದ್ವಾರಕಾನಾಥ್
೨೬, ೨ನೇ ಮುಖ್ಯರಸ್ತೆ, ಪೂರ್ಣಪ್ರಜ್ಞ ಬಡಾವಣೆ, ಬೆಂಗಳೂರು - ೫೬೦ ೦೮೫

# ನಮ್ಮ ಕಾಡುವ ಅಡ್ಡಹೆಸರುಗಳು



ಬಸವರಾಜ ಹೂಗಾರ

ಉತ್ತರಕರ್ನಾಟಕದಲ್ಲಿ ಹೆಸರಿನ ಮುಂದೆ ಅಡ್ಡ ಹೆಸರು ಬರೆಯುವದು ಸಾಮಾನ್ಯ. ಪ್ರತಿ ಅಡ್ಡಹೆಸರಿನ ಹಿಂದೆ ಒಂದೊಂದು ಚರಿತ್ರೆಯೇ ಅಡಕವಾಗಿರುತ್ತದೆ. ನಮ್ಮ ಸಾಂಸ್ಕೃತಿಕ ಬದುಕಿನಲ್ಲಿ ಈ ಅಡ್ಡಹೆಸರುಗಳು ಮಾಡುವ ಪರಿಣಾಮ ಮಹತ್ವದ್ದು. ನಮ್ಮ ಗ್ರಾಮೀಣ ಭಾಗದ ಕಲಾವಿದರ ಬದುಕಿನ ಪರಿಚಯವನ್ನೇ ಮುಂದಿಟ್ಟುಕೊಂಡು ನೋಡಿದರೆ ಪ್ರತಿಯೊಬ್ಬ ಕಲಾವಿದನ ಹಿಂದೆಯೂ ಒಂದೊಂದು ಕತೆಗಳಿವೆ. ಬಡತನ, ಅನಕ್ಷರತೆ, ಶೋಷಣೆ ಎಲ್ಲವನ್ನೂ ಕಟ್ಟಿಕೊಂಡು ಬದುಕುವ ಅವರು ತಾವು ಇರುವ ಹಳ್ಳಿಗಳ ಸುತ್ತಮುತ್ತ ಕಲಾವಿದರಾಗಿ ಹೆಸರು ಮಾಡಿರುತ್ತಾರೆ. ಮ್ಯಾಳದ ಹಿಂದೆ ಬಿದ್ದವರು, ತತ್ವಪದಕಾರರು, ಗೀಗೀಪದ ಹಾಡುವವರು, ಹಾರ್ಮೋನಿಯಂ ಮಾಸ್ತರರು, ತಬಲಾ ನುಡಿಸುವವರು, ತೊಗಲು ಗೊಂಬೆಯಾಟದವರು, ಇನ್ನೂ ಅನೇಕ ಪ್ರಕಾರದ ಕಲಾವಿದರು ಈ ಗುಂಪಿನಲ್ಲಿದ್ದಾರೆ. ಆರ್ಥಿಕ ವಾಗಿ ಸದೃಢವಾಗುವದರ ಬಗ್ಗೆ ಇವರು ಅಪ್ಪಿತಪ್ಪಿಯೂ ತಲೆಕೆಡಿಸಿಕೊಂಡಿರುವದಿಲ್ಲ; ಸಾಮಾನ್ಯವಾಗಿ ಇಂಥ ಕಲಾವಿದರ ಮನೆಗಳಲ್ಲಿ ಹೆಂಡತಿಯರೇ ಸಂಸಾರ ತೂಗಿಸುತ್ತಿರುತ್ತಾರೆ. ಈ ಕಲಾವಿದರೇನಿದ್ದರೂ ಸಂಚಾರಿಗಳು.

ಸಂಸಾರದ ಗೊಡವೆಯನ್ನು ಬಿಟ್ಟು ಇವರನ್ನು ಮಾತನಾಡಿಸಿದರೆ ಸಾಕು, ತಾವು ನಿಂತ ನೆಲೆಯಲ್ಲಿ ಹೆಸರು ಮಾಡಿಕೊಂಡ ಹೆಮ್ಮೆ ಮಾತ್ರ ಅವರ ಮಾತು, ಕಣ್ಣುಗಳಲ್ಲಿ ಹೊರಸೂಸುತ್ತಿರುತ್ತದೆ. ಹಳ್ಳಿಯಲ್ಲಿ ಅವರದೇ ಜನರ ಮಧ್ಯದಲ್ಲಿ ಅವರಿಗೊಂದು ಅಭಿಮಾನದ ಗೌರವ ಪ್ರಾಪ್ತವಾಗಿರುತ್ತದೆ. ಎಂಥ ಕೀಳರಿಮೆಯ ಮಧ್ಯದಲ್ಲಿಯೂ ಕಲೆ ಅವರಿಗೆ ಆತ್ಮವಿಶ್ವಾಸವನ್ನು ತಂದುಕೊಟ್ಟಿರುತ್ತದೆ. 'ಆ ಊರ ಜನ ಬೆಳತನಕ ನನ್ನ ಹಾಡು ಕೇಳಿದರು', 'ಪ್ರತಿವರ್ಷ ಬಿಡದs ಊರ ಹನುಪ್ಪನ ಜಾತ್ರಿಗೆ ನಮ್ಮ ಮ್ಯಾಳ ಕರಸ್ತಾರ', 'ಅವತ್ತ ನಿಂತ ಸಭಾದಾಗ ಸ್ವಂತ ಪದಕಟ್ಟಿ ಎರಡು ತಾಸು ಹಾಡಿದ್ಯಾ', ಎನ್ನುವ ಮಾತುಗಳು ಅವರ ಜೀವನದ ಸಾರ್ಥಕ ಕ್ಷಣಗಳು.

ಈ ರೀತಿಯ ಕಲಾವಿದರು ಕೆಲವು ಸಾರಿ ಮೂರು ಅಥವಾ ನಾಲ್ಕನೆಯ ಇಯತ್ತೆಯವರೆಗೆ ಓದಿರುತ್ತಾರೆ. ತಪ್ಪು-ತಪ್ಪಾಗಿ ಹೆಸರು ಬರೆದು, ಅವುಗಳ ಮುಂದೆ ಫೋನ್ ನಂಬರ್ ಬರೆದಿಟ್ಟುಕೊಳ್ಳುವಷ್ಟು ಅಕ್ಷರಜ್ಞಾನ ಇರುತ್ತದೆ. ಈ ರೀತಿಯ ಅಕ್ಷರಜ್ಞಾನವಿದ್ದವರು ಸರಕಾರಿ ಕಛೇರಿಗಳಿಗೆ ಬರಲು ಸ್ವಲ್ಪಮಟ್ಟಿನ ಧೈರ್ಯ ತಂದುಕೊಂಡಿರುತ್ತಾರೆ. ತಮ್ಮದೇ ಆದ ಕಾಗದ ಪತ್ರಗಳನ್ನು ಹಳೇ ಪ್ಲಾಸ್ಟಿಕ್ ಚೀಲದಲ್ಲಿ ಜೋಡಿಸಿಟ್ಟುಕೊಂಡಿರುತ್ತಾರೆ. ಈ ರೀತಿಯ ಕಲಾವಿದರು ಶೇಕಡ ತೊಂಭತ್ತರಷ್ಟು ಭಾಗ ಶೋಷಿತ ಹಾಗೂ ಹಿಂದುಳಿದ ಸಮುದಾಯದಿಂದ ಬಂದವರು. ಇಂಥ ಕಲಾವಿದರು ತಮ್ಮ ಅಡ್ಡಹೆಸರನ್ನು ತಮ್ಮ ಹೆಸರಿನ ಮುಂದೆ ಬರೆದುಕೊಳ್ಳುವದು ಇತ್ತೀಚೆಗೆ ಕಡಿಮೆಯಾಗುತ್ತದೆ. (ಮೈಸೂರು ಕರ್ನಾಟಕದಲ್ಲಿ ಸಂಕ್ಷಿಪ್ತ ಹೆಸರನ್ನು ಮಾತ್ರ ಬರೆಯುವ ರೂಢಿ ಇದೆ.) ಉತ್ತರ ಕರ್ನಾಟಕದಲ್ಲಿ ಹೆಸರು ಬರೆಯುವ ಪದ್ಧತಿಯಲ್ಲಿ ಅಡ್ಡ ಹೆಸರು ಕೈಬಿಡುವದರ ಹಿಂದೆ ಒಂದು ರೀತಿಯ ಮುಜುಗರ ಅವರನ್ನು ಕಾಡುತ್ತಿರುವುದು ಕಾಣುತ್ತದೆ. ತಮ್ಮ ಮನೆತನದ ಐಡೆಂಟಿಟಿ ಅವರಿಗ್ಯಾಕೊ ಕಿರಿ - ಕಿರಿ ಮಾಡುತ್ತದೆ. ಇಲ್ಲಿ ಮೇಲರಿಮೆ - ಕೀಳರಿಮೆ ಪ್ರಶ್ನೆ ಇದೆ.

ಸಾಮಾಜಿಕ ಅಸಮಾನತೆಯ ಸಂಕೇತಗಳಾಗಿ ಕಾಣುತ್ತಿರುವ ಅಡ್ಡಹೆಸರುಗಳನ್ನು ಕೈಬಿಟ್ಟು, ತಾವು ಬರೀ ಕಲಾವಿದರಾಗಿ ಗುರ್ತಿಸಿಕೊಳ್ಳಬೇಕೆಂದು ಅವರ ತಹತಹಿಕೆ. ಇದು ಸರಿತಪ್ಪುಗಳ ಪ್ರಶ್ನೆ ಅಲ್ಲ, ಸಾಮಾಜಿಕ ವಾಸ್ತವ. ಉದಾ : ಹನುಮಂತಪ್ಪ ಭಜಂತ್ರಿ ಎನ್ನುವುದನ್ನು ಬಿ. ಹನುಮಂತಪ್ಪ ಎಂದು ಬರೆಯುವದು, ಶಿವಪ್ಪ ಕಿಳ್ಳೆಕ್ಯಾತರ – ಕೆ. ಶಿವಪ್ಪ, ದೇವರಾಜ ಹಡಪದ – ಹೆಚ್. ದೇವರಾಜ್, ಶರಣಪ್ಪ ಕೊರವರ – ಕೆ. ಶರಣಪ್ಪ, ಶಿವಪುರದ ಮಾಶಪ್ಪ ಮಾದರನ ಹೆಸರು – ಮಾಶಪ್ಪ ಎಮ್. ಶಿವಪೂರ ಎಂದಾಗುತ್ತದೆ. ಕಲಾವಿದರು ತಾವು ಮಾಡುವ ಕಾರ್ಯಕ್ರಮದ ಕರಪತ್ರದಲ್ಲಿ ಈ ರೀತಿಯ ಬದಲಾವಣೆ ಮಾಡಿದರೆ, ಸಾಮಾನ್ಯರು ದಾಖಲೆಗಳಲ್ಲಿ ಈ ರೀತಿಯ ಬದಲಾವಣೆ ಬಯಸುತ್ತಾರೆ.

ಗಾಂಧೀಜಿ ಶೋಷಿತ ಸಮುದಾಯವನ್ನು 'ಹರಿಜನ' ಎಂದು ಕರೆದರು. 'ಹರಿಜನ' ಎಂಬ ಪದ ಬಳಸಬಾರದು ಎಂದು ಕೆಲವರು ವಾದಿಸುತ್ತಿದ್ದಾರೆ. ಇತ್ತೀಚೆಗೆ ರಾಜ್ಯ ಹಡಪದ ಸಮಾಜದವರು 'ಹಡಪದ' ಎಂಬ ಪದದ ಬದಲಾಗಿ ನಮ್ಮನ್ನು 'ಸವಿತಾ ಸಮಾಜ' ಎಂದು ಕರೆಯಬೇಕೆಂದು ಸರಕಾರಕ್ಕೆ, ಸಮಾಜಕ್ಕೆ ಮನವಿ ಮಾಡಿಕೊಂಡರು. ಅಂದರೆ, ಹೆಸರಿನ ಮುಂದೆ ಅಡ್ಡ ಹೆಸರು ಬಂದರೆ, ನಾವು ಹಿಂದುಳಿದವರು, ಕಸಬುದಾರರು, ಕೀಳುಕುಲದಲ್ಲಿ ಹುಟ್ಟಿದವರು, ಎಂದು ಗೊತ್ತಾದೀತು ಎನ್ನುವ ಅಳುಕು ಅವರನ್ನು ಕಾಡುತ್ತಿದೆ. ಒಂದು ಮಾತು ಸತ್ಯ, ಈ ರೀತಿಯಾದ ಅಡ್ಡಹೆಸರುಗಳು ಮೂಲತಃ ಅಸ್ಪೃಶ್ಯ ವಾಗಿರುವದಿಲ್ಲ, ಸಾಮಾಜಿಕ ಶೋಷಣೆಯ ಕರಾಳ ಮುಖದ ಕಣ್ಣು, ಪದಗಳಿಗೆ ಅಂಥದ್ದೊಂದು ಸ್ಥಿತಿಯನ್ನು ನಿರ್ಮಾಣ ಮಾಡಿರುತ್ತವೆ. ಹಾಗೆ ನೋಡಿದರೆ, ಪ್ರತಿಯೊಂದು ಮನೆತನದ ಹೆಸರಿನ ಹಿಂದೆ ತನ್ನನ್ನು ಸುತ್ತಿಕೊಳ್ಳುವ, ಚಾಲೆಂಜ್ ಆಗಿ ಕಾಡುವ, ಹುಡುಕಲು ಹಚ್ಚುವ, ಕೀಳರಿಮೆ ಹುಟ್ಟಿಸುತ್ತಲೇ ಎದ್ದು ನಿಲ್ಲಿಸುವ ಗುಣವಿರುತ್ತದೆ. ಎಲ್ಲಾ ನಮೂನೆಯ ಅಡ್ಡಹೆಸರು

೩೮ನೇ ಪುಟಕ್ಕೆ

# ಆಚರಣೆಗಳಲ್ಲಿ ಮತೀಯತೆ - ಸಾಮರಸ್ಯ

## ಅಂತರಾಳ ಮುಖಗಳು

ಡಿ. ಎಂ. ನದಾಫ್

ಪ್ರತಿಗಾಮಿ ಸಂಸ್ಕೃತಿಯ ಆಚರಣೆಗಳ ನಡುವೆ ನಮ್ಮ ಗ್ರಾಮೀಣ ಜನಪದರು ಆಚರಿಸುವ, ಹಾಡುವ ಮತ್ತು ಪಾಲಿಸುವ ಹಲವಾರು ಸಂಪ್ರದಾಯಗಳಲ್ಲಿ ಇರುವ ಸಾಮರಸ್ಯದ ಮುಖವನ್ನು ನಮ್ಮ ಸಮೂಹ ಮಾಧ್ಯಮಗಳು ಮತ್ತು ಸಾಂಸ್ಕೃತಿಕ ಸಂಸ್ಥೆಗಳು ಗಂಭೀರ ಅಧ್ಯಯನಕ್ಕೆ ಒಳಪಡಿಸಿಲ್ಲ ಎಂದು ತೋರುತ್ತದೆ. ಆರ್ಷೇಯವಾಗಿ ಬಂದ ಪಶು ಪೂಜೆ ದೀಪಾವಳಿಯಲ್ಲಿ ಗ್ರಾಮೀಣ ಜನರ ಪ್ರಮುಖ ಆಚರಣೆ. ಆ ಸಂದರ್ಭದಲ್ಲಿ ಹಾಡುವ ಜಾನಪದ ಹಾಡುಗಳಲ್ಲಿ ಫಸಲು, ಪಶು, ಮಾನವ ಜನಾಂಗ, ಅಷ್ಟೇ ಅಲ್ಲ ಜಲಚರಗಳು ಕೂಡ ಹುಲುಸಾಗಿ ಬೆಳೆಯಲಿ ಎಂಬ ಆಶಯಗಳು ವ್ಯಕ್ತವಾಗುತ್ತವೆ. ಅಂತೆಯೇ ಈ ಭೂಮಿತಾಯಿ ಮಕ್ಕಳು ತಮ್ಮ ಸಹಚರರಾದ ಸಾಕುಪ್ರಾಣಿಗಳೊಂದಿಗೆ ದೀಪಾವಳಿಯನ್ನು ಆಚರಿಸುವ ಸಂದೇಶವನ್ನು ಈ ಸಂಪ್ರದಾಯಗಳು ಕೊಡುತ್ತವೆ. ''ಜೋತ್ ಸೆ ಜೋತ್ ಜಗಾತೆ ಚಲೋ'' ಎಂಬ ರೂಪಕದ ಕಾವ್ಯಬೆಳಕಿನಲ್ಲಿ ಜೀವಪರವಾದ ಇಂಥ ಆಚರಣೆಗಳು ಧ್ವನಿ ಕಳೆದುಕೊಳ್ಳುತ್ತಿವೆ. ಇಂತಹ ಅದೆಷ್ಟೋ ಆಚರಣೆಗಳನ್ನು ಶ್ರಮಸಂಸ್ಕೃತಿಯಿಂದ ಕಡಿದುಕೊಂಡಿರುವ ನಮ್ಮ ಪ್ರತಿಗಾಮಿ ಸಂಸ್ಕೃತಿ ಯಾವತ್ತೂ ಸೌಹಾರ್ದಯುತ ನಂಬಿಕೆಗಳನ್ನು ವಿಕೃತಗೊಳಿಸುವಲ್ಲಿ ಸದಾ ಮುಂದಿರುತ್ತದೆ.

ಗೌತಮ ಬುದ್ಧ, ಕೃಷಿ ಚಟುವಟಿಕೆಗಾಗಿ ಪಶುಸಂಪತ್ತೇ ಇಲ್ಲದಂತಾಗುವ ಆತಂಕ ಎದುರಾದಾಗ ಯಜ್ಞ-ಯಾಗದಂತಹ ಪಶುಬಲಿಗಳನ್ನು ವಿರೋಧಿಸಿದರು. ಇದರಿಂದ ಪಶುಸಂಪತ್ತಿನ ರಕ್ಷಣೆಗೆ ಇಂಬು ದೊರೆಯಿತು. ಆಗ ಇದೇ ಪ್ರತಿಗಾಮಿಗಳು ''ಗೋಹತ್ಯೆ ಪಾಪ'' ಎಂಬ ವಾದ ಮಂಡಿಸಿ ಬುದ್ಧ ನೀಡಿದ ಸಂದೇಶವನ್ನೇ ಇಡಿಯಾಗಿ ವಿಕೃತಗೊಳಿಸಿದರು. ಪಶುಗಳಲ್ಲಿ ಮೇಲು-ಕೀಳು, ಅಸಮಾನತೆಯ ಗೊಂದಲ ಹುಟ್ಟಿಹಾಕಲಾಯಿತು. ಮುಂದೊಂದು ದಿನ ಬುದ್ಧ ಕಾಲವಾದಾಗ ಬುದ್ಧನೂ ಒಬ್ಬ ಅವತಾರ ಪುರುಷ ಎಂಬಂತೆ ಇತಿಹಾಸ ಸೃಷ್ಟಿಸಲಾಯಿತು. ಬುದ್ಧ ದಶಾವತಾರಗಳಂತೆ ಒಂದು ಅವತಾರವೇ ಹೌದು ಎಂದು ವಾದಿಸುವ ಪಡೆಯೇ ಅವನ ಸಂದೇಶವನ್ನೇ ತಿರಸ್ಕರಿಸಿತು. ಅಷ್ಟೇ ಅಲ್ಲ, ಸಂಘದ ಕುರಿತು ಅಪಪ್ರಚಾರದ ಹುಯಿಲೆಬ್ಬಿಸಿದರು. ಸ್ತ್ರೀಯರಿಗೂ ಸಂಘದ ಸದಸ್ಯರಾಗುವ, ಭಿಕ್ಕುಣಿಯರಾಗುವ ಸ್ವಾತಂತ್ರ್ಯ ನೀಡಿದ ಬೌದ್ಧಧರ್ಮ ಇಂದಿಗೂ ವೈಜ್ಞಾನಿಕತೆ, ವೈಚಾರಿಕತೆಯ ಸಂದೇಶಗಳನ್ನು ನೀಡುವಂಥದ್ದು. ಮಹಿಳೆಯರಿಗೆ ಭಿಕ್ಕುಣಿಯರಾಗುವ, ಸನ್ಯಾಸಿನಿಯಾಗುವ ಸ್ವಾತಂತ್ರ್ಯ ನೀಡಿದ ಬೌದ್ಧಮತದ ಆಚರಣೆಯಿಂದ ''ಸ್ತ್ರೀಯರೆಲ್ಲಾ ಅನೀತಿ ಮತ್ತು ದುರ್ಮಾರ್ಗಗಳಿಂದ ಚಾರಿತ್ರ್ಯಹೀನರಾದರು'' ಎಂಬಂಥ ಆಧಾರರಹಿತ ಅನಧಿಕೃತ ಸುದ್ದಿಗಳನ್ನು ಅಂದಿನಿಂದ ಇಂದಿನವರೆಗೂ ಹಬ್ಬಿಸುತ್ತಲೇ ಹೊರಟ ವೈದಿಕರು ವಿಕೃತ 'ಅಯೋನಿಜ'ರೆಂಬ ಸಂತಾನವನ್ನು ಮಾತ್ರ ಸದಾ ದೇವಲೋಕಕ್ಕೆ ಕಳುಹಿಸುವುದು ಎಂತಹ ಹಾಸ್ಯಾಸ್ಪದ.

ಶ್ರಮಸಂಸ್ಕೃತಿಯ ಸಂಕೇತವಾದ ಹಬ್ಬದಲ್ಲಿನ ಆಚರಣೆಗಳು ಶ್ರಮಿಕರ ಬದುಕಿನಲ್ಲಿ ಮನರಂಜನೆ ಕೊಡುವ, ಆಯಾಸವನ್ನು ನಿವಾರಿಸುವ ಸಾಧನಗಳಾಗಿದ್ದವು. ಕೆಲವೊಮ್ಮೆ ಮಾದಕ ಪೇಯಗಳ ಸೇವನೆಯಿಂದ ಉನ್ಮಾದಗೊಂಡು ನಲಿದಾಡುತ್ತಿದ್ದ ಶ್ರಮಿಕರಲ್ಲಿ ಈ ದಿನಗಳಿಗೆ ಪ್ರಾಮುಖ್ಯತೆ ಒದಗಿತು. ಅಂತೆಯೇ ಪ್ರತಿ ಹಬ್ಬದೊಂದಿಗೆ ವೃಕ್ಷ, ಪಶುಗಳ ಪೂಜೆ, ನಕ್ಷತ್ರಗಳ ಉಪಾಸನೆ, ಸೂರ್ಯ-ಚಂದ್ರರ ಕುರಿತ ವ್ರತ ನೇಮಗಳು ಅನೂಚಾನವಾಗಿ ನಡೆದುಕೊಂಡು ಬಂದವು. ಇಂಥ ಆಚರಣೆಗಳು ಪ್ರಾಮುಖ್ಯತೆ ಪಡೆದಾಗ ಹಬ್ಬದಂಥ ಆಚರಣೆಗಳಲ್ಲಿ ಕಂದಾಚಾರಗಳ ಪ್ರಚಾರ ಆರಂಭವಾಯಿತು. ಉದಾಹರಣೆಗೆ, ಮದುವೆ ಮನೆಯಲ್ಲಿ ಬೆಕ್ಕನ್ನು ಕಟ್ಟಿಹಾಕುವುದು, ಶುಭಕಾರ್ಯದಲ್ಲಿ ಸೀನಬಾರದು, ಎಂಬಂಥ ಕ್ಷುದ್ರ ಆಚರಣೆಗಳ ಜೊತೆ ಜೊತೆಗೆ ಶಮೀ ವೃಕ್ಷವೇ ಕೇಂದ್ರ ಬಿಂದುವಾಗಿದ್ದ ದಸರೆಯಲ್ಲಿ ಶಕ್ತಿಪ್ರದರ್ಶನದ ಪ್ರಶ್ನೆ ಎದುರಾಗಿ ಅದರ ಸ್ಥಾನವನ್ನು ಆಯುಧಗಳು ಪಡೆದುಕೊಂಡು ಆಯುಧಪೂಜೆಗೆ ಅವಕಾಶವಾಗಿರಬಹುದು. ಆಯುಧಗಳಿಗೆ ಪಶುಬಲಿಯಂತಹ ಆಚರಣೆಗಳು ಒಂದಾದ ನಂತರ ಒಂದರಂತೆ ಸೇರುತ್ತಾ ಹೋಗಿರಬಹುದು.

ಸಾಮಾಜಿಕ ಪ್ರಜ್ಞಾವಲಯ ಒಮ್ಮೆ ಒಂದು ಕಂದಾಚಾರವನ್ನು ಒಪ್ಪಿತ ಮೌಲ್ಯವೆಂದು ಅಂಗೀಕರಿಸಿದಾಗ ಅದೇ ಆಚರಣೆಯ ಪ್ರಮುಖ ಅಂಗವಾಗಿ ಬಿಡುತ್ತದೆ. ಒಮ್ಮೆ ಪಟಾಕಿ ಸಿಡಿಸುವುದು ದೀಪಾವಳಿಯ ಆಚರಣೆಯೇ ಆಗಿರಲಿಲ್ಲವೇನೋ, ಇಂದು ಪಟಾಕಿ ಸಿಡಿಸದೇ ಹಬ್ಬವಿಲ್ಲ, ದೀಪಾವಳಿಯಲ್ಲಿ ಜೂಜಾಟ ಒಂದು ಸಂಪ್ರದಾಯವೇ ಅಲ್ಲ, ಇಂದು ದೀಪಾವಳಿಯ ಲಕ್ಷ್ಮೀಪೂಜೆ ನಡೆಯುವ ಬಹುತೇಕ ಅಂಗಡಿಗಳ ಮುಂದೆ ರಾತ್ರಿಯಿಡೀ ಜೂಜಿನ ಅಡ್ಡೆಗಳು ನಡೆದಿರುತ್ತವೆ. ಇಂದು ಹಬ್ಬಗಳ ಆಚರಣೆಯ ಸ್ವರೂಪ ದುರ್ವ್ಯಸನಗಳಿಗೆ ದಾರಿಯಾಗುತ್ತಿರುವುದು ಎಂತಹ ವಿಪರ್ಯಾಸ! ಎತ್ತ ಅಂದಿನ ವೃಕ್ಷಪೂಜೆ, ಪಶುಪೂಜೆಗಳ ಸೌಹಾರ್ದ ಬದುಕು! ಎತ್ತ ಇಂದಿನ ದುರ್ವ್ಯಸನ ದುರಾಸೆ ಸಂಸ್ಕೃತಿ!

ನಮ್ಮ ಇಂದಿನ ಹಬ್ಬ ಆಚರಣೆಯೊಂದಿಗೇ ಆತಂಕಗಳೂ ಆರಂಭವಾಗುತ್ತಿವೆ. ನಗರ ಪ್ರದೇಶಗಳಲ್ಲಿ ಕೋಮುಗಲಭೆಗಳ ಆತಂಕ. ಹಳ್ಳಿಗಳಲ್ಲಿ ಜಾತಿ ಸಂಘರ್ಷಗಳ ಆತಂಕ. ಜೊತೆಗೆ ದೈನಂದಿನ ಅಗತ್ಯ ವಸ್ತುಗಳ ಬೆಲೆಯೇರಿಕೆಯಿಂದ ಪರದಾಟ. ಇವುಗಳಿಗೆಲ್ಲ ನಮ್ಮ ಅಂತರಾಳದಲ್ಲಿ ಉತ್ತರಗಳೇ ಇಲ್ಲವೇ? ಎಂಬ ಪ್ರಶ್ನೆ ಮೂಡುತ್ತದೆ. ಬಾಬರಿ ಮಸೀದಿ-ರಾಮಜನ್ಮಭೂಮಿ ವಿವಾದ ತಾರಕಕ್ಕೇರಿದ ದಿನಗಳು. ಕೆ. ಶಿವರಾಮ ಕಾರಂತರು ''ನಾವು ನಮ್ಮ ಶಕ್ತಿಯನ್ನೊಮ್ಮೆ ಪ್ರದರ್ಶಿಸಿದರೆ ತಪ್ಪೇನಿದೆ'' ಎಂಬ ಅರ್ಥಬರುವಂತಹ ಮಾತುಗಳನ್ನು (ಬಾಬರಿ ಮಸೀದಿ ಧ್ವಂಸ ಪ್ರಕರಣಕ್ಕೆ ಪ್ರತಿಕ್ರಿಯೆಯಾಗಿ) ಆಡಿದರು ಎಂಬ ಸುದ್ದಿ ಓದಿದ ನೆನಪು. ಇತ್ತೀಚೆಗೆ

ಸಾಮಾಜಿಕ ಪ್ರಜ್ಞಾವಲಯ ಒಮ್ಮೆ ಒಂದು ಕಂದಾಚಾರವನ್ನು ಒಪ್ಪಿತ ಮೌಲ್ಯವೆಂದು ಅಂಗೀಕರಿಸಿದಾಗ ಅದೇ ಆಚರಣೆಯ ಪ್ರಮುಖ ಅಂಗವಾಗಿಬಿಡುತ್ತದೆ. ಒಮ್ಮೆ ಪಟಾಕಿ ಸಿಡಿಸುವುದು ದೀಪಾವಳಿಯ ಆಚರಣೆಯೇ ಆಗಿರಲಿಲ್ಲವೇನೋ, ಇಂದು ಪಟಾಕಿ ಸಿಡಿಸದೇ ಹಬ್ಬವಿಲ್ಲ, ದೀಪಾವಳಿಯಲ್ಲಿ ಜೂಜಾಟ ಒಂದು ಸಂಪ್ರದಾಯವೇ ಅಲ್ಲ, ಇಂದು ದೀಪಾವಳಿಯ ಲಕ್ಷ್ಮೀಪೂಜೆ ನಡೆಯುವ ಬಹುತೇಕ ಅಂಗಡಿಗಳ ಮುಂದೆ ರಾತ್ರಿಯಿಡೀ ಜೂಜಿನ ಅಡ್ಡೆಗಳು ನಡೆದಿರುತ್ತವೆ. ಇಂದು ಹಬ್ಬಗಳ ಆಚರಣೆಯ ಸ್ವರೂಪ ದುರ್ವ್ಯಸನಗಳಿಗೆ ದಾರಿಯಾಗುತ್ತಿರುವುದು ಎಂತಹ ವಿಪರ್ಯಾಸ! ಎತ್ತ ಅಂದಿನ ವೃಕ್ಷಪೂಜೆ, ಪಶುಪೂಜೆಗಳ ಸೌಹಾರ್ದ ಬದುಕು! ಎತ್ತ ಇಂದಿನ ದುರ್ವ್ಯಸನ ದುರಾಸೆ ಸಂಸ್ಕೃತಿ!

'ತಟ್ಟು ಚಪ್ಪಾಳೆ-ಪುಟ್ಟಮಗು' ಪುಸ್ತಕದ ಪುಟ ತಿರುವುತ್ತಿದ್ದಾಗ ಕಾರಂತರ ಎರಡು ಸಾಲುಗಳು ನನ್ನನ್ನು ತಡೆದು ನಿಲ್ಲಿಸಿದವು. ಮಕ್ಕಳಲ್ಲಿ ಪ್ರಾಸ ಅಭ್ಯಾಸ ಬೆಳೆಸಲು...

ಇವನ ಹೆಸರು ಸೂಫಿ !
ಕುಡಿಯಲು ಇಷ್ಟ ಇವಗೆ ಕಾಫಿ.

ಎಂಬ ಪ್ರಾಸಪದಗಳ ಕವಿತೆ ಉದಾಹರಿಸಿದ್ದರು. ಸೂಫಿ ಮಹ್ಮದೀಯ ಧರ್ಮದ ಸಂತ ಸಂಪ್ರದಾಯದ ಒಂದು ಶಾಖೆ. ಈ ಸಂತರಿಗೆ ತಮ್ಮದೆನ್ನುವ ಯಾವ ಸ್ಥಾವರದ ಹಂಗೂ ಇಲ್ಲ. ತಾವು ಬಂದಿದ್ದ ನಾಡಿನಿಂದ ಕಾಫಿಬೀಜ-ಸಸಿಗಳನ್ನು ತಂದು ಇಲ್ಲಿಯೂ ಬೆಳೆಸಿದರು. ಇಂದು ಕಾಫಿ ಕರುನಾಡಿನ ಸಾಂಪ್ರದಾಯಿಕ ಪಾರಂಪರಿಕ ಬೆಳೆಯಾಗಿ ಕನ್ನಡ ನಾಡಿನ ಅವಿಭಾಜ್ಯ ಫಸಲಾಗಿ ಜನಪ್ರಿಯತೆ ಪಡೆದಿದೆ. ಇತಿಹಾಸದಲ್ಲಿನ ಈ ಸಂಗತಿಯನ್ನು ಕಾರಂತರು ಎರಡೇ ಸಾಲಿನಲ್ಲಿ ಮಕ್ಕಳ ಮನ ಮುಟ್ಟುವಂತಹ ಪ್ರಾಸದಿಂದ ವಿವರಿಸಿದ್ದು ಸೊಗಸಾಗಿತ್ತು. ಕಾರಂತರ ಮನೋಲೋಕದ ಸೌಹಾರ್ದ ಸಾಗರವನ್ನು ಇದು ಪರಿಚಯಿಸುತ್ತದೆ. ಆದರೆ ಒಂದೇ ಕಾಲಮಾನದಲ್ಲಿ ಎರಡು ವಿರುದ್ಧ ನಿಲುವುಗಳನ್ನು ತಾಳುವಷ್ಟು ದ್ವಂದ್ವಮಯ ವ್ಯಕ್ತಿತ್ವ ಕಾರಂತರದ್ದಾಗಿರಲಿಕ್ಕಿಲ್ಲ.

ಸೂಫಿ ಪಂಥದ ತಾತ್ವಿಕತೆಯನ್ನು ಅಭ್ಯಸಿಸಿದ್ದ ಕಾರಂತರು ಧರ್ಮಗಳಿಗೆ ಸಂಬಂಧಿಸಿದಂತೆ ಸ್ಪಷ್ಟ ನಿಲುವಿಗೆ ಹೆಸರಾದವರು. ಕಾರಂತರಂಥ ದಾರ್ಶನಿಕರನ್ನೂ ಒಂದು ಸಾಂದರ್ಭಿಕ ಚೌಕಟ್ಟಿನಲ್ಲಿ ಗಮನಿಸಿ ಯಾವುದೇ ನಿರ್ಧಾರಕ್ಕೆ ಬರಲಾಗದು ಎನಿಸುತ್ತದೆ. ಅಂತೆಯೇ ನಮ್ಮೆಲ್ಲರ ಅಂತರಾಳವನ್ನೊಮ್ಮೆ ಅವಲೋಕಿಸಿಕೊಂಡಾಗ ಆದಿಕಾಲದಿಂದಲೂ ಮಾನವನ ಮನೋಸಾಮ್ರಾಜ್ಯದಲ್ಲಿ ಇಬ್ಬಾಯ ಕತ್ತಿ ಕೊರೆಯುತ್ತಲೇ ಇರುತ್ತದೆ. ಒಳಿತು-ಕೆಡುಕು, ಕ್ರೌರ್ಯ-ಕರುಣೆ, ದುರಾಸೆ-ವೈರಾಗ್ಯ, ಸ್ನೇಹ-ದ್ವೇಷ, ನಿರಭಿಮಾನ-ದುರಭಿಮಾನ ಇವುಗಳಂತೆಯೇ ರಜೋಗುಣ- ತಮೋಗುಣ, ಕ್ರಿಯಾಶೀಲತೆ- ನಿಷ್ಕ್ರಿಯಂತೆ ಇಂತಹ ಹಲವಾರು ಮೂಲಪ್ರವೃತ್ತಿಗಳು ನಮ್ಮ ಮಾನಸಿಕ ವಲಯದಲ್ಲಿ ಬೆಳೆಯುತ್ತ ಬರುತ್ತಿರುತ್ತವೆ. ಅವುಗಳಂತೆಯೇ ಮನದಾಳದಲ್ಲಿ ಒಂದು ಕಡೆ ಮೂಲಭೂತವಾದದ ಬೀಜ ಮೊಳೆಯುತ್ತಿದ್ದರೆ ಮತ್ತೊಂದೆಡೆಗೆ ಸಾಮರಸ್ಯದ ಹೂ ಕೂಡ ಮೊಗ್ಗಾಗಿ ಅರಳಲು ತವಕಿಸುತ್ತದೆ. ನಮ್ಮ ಮುಂದಿರುವ ಪ್ರಶ್ನೆ ನಾವು ಯಾವುದಕ್ಕೆ ನೀರೆರೆಯುತ್ತೇವೆ ಎಂಬುದು. ಭಾರತದ ಆಚರಣೆಗಳಲ್ಲಿ ಸಾಮರಸ್ಯದ ಹೂಬಳ್ಳಿಗಳಿಗೆ ನೀರು ಎರೆದಿದ್ದಿದೆ. ಜೊತೆಗೆ ಮೂಲಭೂತ ವಾದದ ಬೀಜಕ್ಕೂ ಕೊರತೆಯಿಲ್ಲ. ಖಡ್ಗ-ತ್ರಿಶೂಲ ಹಿರಿಯುವ ಅವಕಾಶ ಸೃಷ್ಟಿಸಿಕೊಳ್ಳಲು ಹಬ್ಬಹರಿದಿನಗಳನ್ನು ಬಳಸುವ ಮನಸ್ಸುಗಳಿಗೆ ಜೆಹಾದ್‌ನ ಹೆಸರಲ್ಲಿ ಶಸ್ತಾಸ್ತ್ರಗಳನ್ನು ಯುವಕರ ಕೈಗಿಡುವ ಮದ್ರಸಾಗಳು ಎಂದೆಂದೂ ಉತ್ತರವಾಗಲಾರವು. ಎಲ್ಲ ಕಡೆಗಳಲ್ಲೂ ಶಸ್ತ್ರಬಳಕೆಗೆ ಬಲಿಯಾಗುವುದು ಪ್ರಭುತ್ವದ ಅಥವಾ ಧಾರ್ಮಿಕ ಸಂಸ್ಥೆಗಳ ಸನಾತನಿಗಳಲ್ಲ. ಅವರೆಂದೂ ಸಶಸ್ತ್ರ ಸಂಘರ್ಷದ ಸರದಿ ಬಂದಾಗ ಮುಂದಿನ ಸಾಲಿನಲ್ಲಿ ನಿಂತವರಲ್ಲ. ಧಾರ್ಮಿಕ ಸಮ್ಮೋಹನಕ್ಕೆ ಮರುಳಾದ ಯುವಕರೇ ಇಲ್ಲಿನ ಬಲಿಗಳು. ಅವರದೇನಿದ್ದರೂ ಆಳುವ ಅರಸೊತ್ತಿಗೆಯಲ್ಲಿ ಪವಡಿಸುವ ತಂತ್ರ ಮಾತ್ರ.

ಡಿ. ಎಂ. ನದಾಫ್
ನಂ. ೪-೫-೪೬೯, ರೇವಣಸಿದ್ದೇಶ್ವರ ಕಾಲನಿ, ಅಫಜಲಪುರ - ೫೮೫ ೩೦೧, ಗುಲಬರ್ಗಾ ಜಿಲ್ಲೆ

೩೬ನೇ ಪುಟದಿಂದ (ಅಡ್ಡ ಹೆಸರು...)

ಗಳಿಗೂ ಇದು ಅನ್ವಯವಾಗುತ್ತದೆ. ಇದಕ್ಕೆ ಕಾರಣ ಮೇಲರಿಮೆ - ಕೀಳರಿಮೆಗೆ ವ್ಯಕ್ತಿ ಹಾಗೂ ಸಮಾಜ ಕೇಂದ್ರಿತ ಮನಃಸ್ಥಿತಿ.

ಅಡ್ಡಹೆಸರಿನ ಬದಲಾಗಿ ಊರಹೆಸರನ್ನು ಕೆಲವರು ತಮ್ಮ ಹೆಸರಿನ ಮುಂದೇ ಬರೆಯುತ್ತಾರೆ. ಅನಿವಾರ್ಯವಾಗಿ ಅವರು ಊರನ್ನು ಬಿಡುತ್ತಾರೆ. ಆದರೆ ಊರು ಅವರನ್ನು ಬಿಡಬಾರದು. ಇದೊಂದು ರೀತಿಯ ಕರುಳು ಬಳ್ಳಿಯ ಸಂಬಂಧ. ಉದಾ: ಬರಗೂರು ರಾಮಚಂದ್ರಪ್ಪ. ಅವರೇ ಒಂದು ಕಡೆ ಹೇಳುತ್ತಾರೆ : ''ಪ್ರತಿಯೊಬ್ಬರಿಗೂ ತನ್ನ ನೆಲೆ ಮುಖ್ಯವಾಗಬೇಕು. ಕರ್ನಾಟಕ ಶ್ರೀಗಂಧದ ನಾಡು ಎಂದು ಕರೆಯುತ್ತೇವೆ. ಶ್ರೀಗಂಧವನ್ನು ನೋಡದೇ ಇರುವ ಜನ ಕರ್ನಾಟಕದಲ್ಲಿ ತುಂಬ ಇದ್ದಾರೆ. ಕುವೆಂಪು ಅವರಿಗೆ ಮಲೆನಾಡು ಎಷ್ಟು ಮುಖ್ಯವೋ, ಮಳೆಯೇ ಕಾಣದ ಶಿರಾ ತಾಲೂಕಿನ ಬರಗೂರಿನ ಜಾಲಿಕಂಟಿಯೂ ನನಗೆ ಅಷ್ಟೇ ಮುಖ್ಯ.''

ಹನ್ನೆರಡನೇ ಶತಮಾನದಲ್ಲಿ ಶರಣರಾದ ಬಸವಣ್ಣ, ಅಕ್ಕಮಹಾದೇವಿ, ಚನ್ನಬಸವಣ್ಣ, ಗಂಗಾಂಬಿಕೆ, ಇವರಿಗೆ ಈ ರೀತಿಯ ಅಡ್ಡಹೆಸರುಗಳಿಲ್ಲ. ಆದರೆ ಕಲ್ಯಾಣ ಕ್ರಾಂತಿಯಲ್ಲಿ ಬಹುತೇಕ ಶರಣರು ಕುಲ ಪರಂಪರೆಯ ಹೆಸರನ್ನಿಟ್ಟುಕೊಂಡಿದ್ದಾರೆ. ಹಡಪದ ಅಪ್ಪಣ್ಣ, ನುಲಿಯ ಚಂದಯ್ಯ, ಡೋಹರ ಕಕ್ಕಯ್ಯ, ಮಡಿವಾಳ ಮಾಚಯ್ಯ, ಆಯ್ದಕ್ಕಿ ಲಕ್ಕಮ್ಮ ಇತ್ಯಾದಿ. ವ್ಯಷ್ಟಿಯಿಂದ ಸಮಷ್ಟಿಯ ಕಡೆಗೆ ಸಾಗುವ ಹಠ ಅವರಿಗೆ. ಹೀಗೆ ಸಾಗುವಾಗ, ಇಡಿ ಸಮಷ್ಟಿ ಚಳುವಳಿ ಯಲ್ಲಿ ಆ ಯಾವ ಪದಗಳೂ ಜಾತಿಯಾಧಾರಿತ ಪದಗಳಾಗಿ ಕಾಣಿಸಿಕೊಳ್ಳುವದೇ ಇಲ್ಲ. ಇದು ತುಂಬ ಮುಖ್ಯ ಅಂಶ. ಸಾಂಸ್ಕೃತಿಕವಾಗಿ ಏನೋ ಅದು ಬಹಳ ಮುಖ್ಯ ಚಳುವಳಿ. ಅದಕ್ಕಿಂತಲೂ ಮುಖ್ಯವಾಗಿ ನೆಲ ಮೂಲ ಪದಗಳನ್ನು ಬಳಸಿ ಕ್ರಾಂತಿಗೆ ಕಸಬುದಾರಿಕೆಯ ಕಸುವನ್ನು ಅವರು ತಂದುಕೊಟ್ಟರು.

ಇತ್ತೀಚಿನ ಉದಾಹರಣೆಯನ್ನೇ ತೆಗೆದುಕೊಳ್ಳುವುದಾದರೆ, ಬೆಂಗಳೂರಿನ ಕೆನ್ ಕಲಾಶಾಲೆಯ ರೂವಾರಿ ದಿ|| ಆರ್. ಎಂ. ಹಡಪದ, ಕವಿ ಚಂದ್ರಶೇಖರ ಕಂಬಾರ, ಆಕಾಶವಾಣಿಯ ಧ್ವನಿ ಬಸಪ್ಪ ಮಾದರ, ಕವಿಗಳಾದ ಗಂಗಾರಾಮ ಚಂಡಾಳ, ಸುಬ್ಬು ಹೊಲೆಯಾರ್, ಈ ಎಲ್ಲ ಹೆಸರುಗಳ ಹಿಂದೆ ಕಾಡಿಸುವ, ಪೀಡಿಸುವ, ಮೈ ಕೊಡವಿಕೊಂಡು ಎದ್ದುನಿಲ್ಲುವ ಗುಣವಿರುವುದು ಸತ್ಯ.

ಹೆಸರುಗಳೇ ಇಲ್ಲದ ಸಮಾಜವನ್ನು ನಿರ್ಮಾಣ ಮಾಡುವುದು ನಮ್ಮ ಗುರಿಯಾಗಿರಬೇಕು, ನಿಜ. ಆದರೆ ಹೆಸರುಗಳು ಇರುವ ಸಮಾಜದಲ್ಲಿ ಹುಟ್ಟಿದ್ದೇವೆ. ಹೆಸರಿಟ್ಟುಕೊಂಡೂ ಹೆಸರಿರದ ಸಮಾಜ ನಿರ್ಮಾಣ ಮಾಡುವ ಕನಸುಕಂಡರಲ್ಲಾ ಶರಣರು, ಆ ಮಾರ್ಗ ನಮ್ಮದಾಗಬೇಕಿದೆ.

ಒಂದು ವಿಶೇಷ ಎಂದರೆ ಕಲೆ ಮತ್ತು ಕುಲ ಪರಂಪರೆ ಒಟ್ಟೊಟ್ಟಾಗಿ ಬೆಳೆದು ಬಂದಿರುವ ಸಮಾಜ ನಮ್ಮದು. ಕುಲ – ಕಲೆ ಬೇರೆ ಬೇರೆಯಾಗದೆ ಕಲೆಯೇ ಕುಲವಾಗಿರುವ ಹೆಸರುಗಳೂ ನಮ್ಮ ಸಮಾಜದಲ್ಲಿ ಬೇಕಾದಷ್ಟು ಇವೆ. ನಮ್ಮ ನೆಲಮೂಲ ಸಂಸ್ಕೃತಿ ಅಧ್ಯಯನದ ಪ್ರಮುಖ ಭಾಗ ಅದು. ನಮ್ಮ ಬದುಕಿನ ಹಾಡು ಇರುವುದೇ ಅಲ್ಲಿ. ಅಸಾಧ್ಯ ಗೊಂದಲಗಳನ್ನು ಮೂಡಿಸುವ ವರ್ತಮಾನಕ್ಕೆ ಉತ್ತರ ಸಿಗಬೇಕಾದರೆ ಅವರು ಹಿಡಿದ ನಾದದ ತಂಬೂರಿಯನ್ನು ನಾವು ಮೀಟಬೇಕು. ಗೊಲ್ಲರ ಗಣೆಯ ನಾದಕ್ಕಿರುವ ಅರ್ಥ ಸಾಧ್ಯತೆಯನ್ನು ಹುಡುಕಬೇಕು. ಉಸಿರಿಟ್ಟು ಊದುವ ಸನಾದಿಯ ಧ್ವನಿಯನ್ನೊಮ್ಮೆ ಲಕ್ಷ್ಯಗೊಟ್ಟು ಕೇಳಬೇಕು.

ಹೆಳವರು, ಡೊಂಬರು, ಕಿಳ್ಳೆಕ್ಯಾತರು, ಹಕ್ಕಿಪಿಕ್ಕಿಗಳು ಪ್ರತಿಯೊಂದು ಹೆಸರುಗಳ ಮಧ್ಯೆಯೇ ನಾವು ನಮ್ಮ ಚರಿತ್ರೆಯನ್ನು ಹುಡುಕಬೇಕು.

ಚರಿತ್ರೆ ಇಲ್ಲದೇ ವರ್ತಮಾನಕ್ಕೆ ಅರ್ಥವಿಲ್ಲ!

ಬಸವರಾಜ ಹೂಗಾರ
ಕೇರಾಫ್ ಫಕೀರಪ್ಪ, ಸಿಮಿಕೇರಿ ಅಂಚೆ
ಬಾಗಲಕೋಟೆ ಜಿಲ್ಲೆ



## ಸದ್ದು

ಗೆಜ್ಜೆ ಕಟ್ಟಿದವರು
ಹೆಜ್ಜೆ ಹಾಕಿದರೆ
ಸದ್ದು : ಘಲ್ ಘಲ್ ಜಣ್‌ಜಣ್ !

ಬೂಟು ಕಾಲಿನವರು
ಓಡಾಡಿದರೆ
ಸದ್ದು : ಟಕ್ ಟಕ್ ಟಾಕ್ ಟೀಕ್ !

ಬರಿಗಾಲಿನವರು
ನಡೆದಾಡಿದರೆ
ಸದ್ದು ಕೇಳದೇ ? ನಿಮಗೆ ಕೇಳದೇ ?

ಬಂದಗದ್ದೆ ರಾಧಾಕೃಷ್ಣ, ಪುಸ್ತಕ ಹೊಂಬಾಳೆ
ಕೆಳದಿ - ೫೭೭ ೪೦೧, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

# ಕುವೆಂಪು ಅವರ ಕವನಗಳಲ್ಲಿ ಬಡತನದ ಪರಿಕಲ್ಪನೆ

— ಎಚ್. ಕೆ. ವೆಂಕಟೇಶ್



**ಸಾ**ಹಿತ್ಯ ಸಮಾಜದ ಪ್ರತಿಬಿಂಬ. ಯಾವ ಸಾಹಿತ್ಯ ಪ್ರಕಾರವನ್ನು ಗಮನಿಸಿದರೂ ಸಿರಿತನ-ಬಡತನ, ಮೇಲ್ವರ್ಗ-ಕೆಳವರ್ಗ, ಬಿಳಿಯ-ಕರಿಯ, ಜಮೀನ್ದಾರ-ಗುಲಾಮ, ಪ್ರಧಾನ ಸಂಸ್ಕೃತಿ-ಅಧೀನ ಸಂಸ್ಕೃತಿ – ಈ ಬಗೆಯ ವೈರುಧ್ಯಗಳ ಚಿತ್ರಣ ಕಾಣಿಸಿಕೊಳ್ಳುತ್ತದೆ. 'ಮೂಲಭೂತ ಸೌಲಭ್ಯಗಳು ಇಲ್ಲದ ಪ್ರತಿಯೊಬ್ಬರೂ ಬಡವರೇ' ಎಂಬುದು ಬಡತನಕ್ಕಿರುವ ಸರಳ ಅರ್ಥವಾಗಿದೆ. ಕಾಲ, ದೇಶ, ವರ್ಗಗಳ ಅತ್ಯಾವಶ್ಯಕ ವಸ್ತುಗಳ ಭಿನ್ನತೆ ಬಡತನದ ಅರ್ಥವನ್ನು ಸಂಕೀರ್ಣಗೊಳಿಸುತ್ತದೆ. ಬಡತನ ಎಂಬುದು ಮೇಲುವರ್ಗದವರು ಹುಟ್ಟುಹಾಕಿದ ಭೂತ ಎಂಬುದು ಪಾಕ್ಷಿಕ ಸತ್ಯ. ಬಡತನವು ಪ್ರಾಕೃತಿಕವಾಗಿಯೂ ಮಿಂಚಿನಂತೆ (ಭುಜ್ ಭೂಕಂಪ, ಇತ್ತೀಚಿನ ಸುನಾಮಿಗಳ ದುರಂತ, ಇತ್ಯಾದಿ) ಎರಗಿಬಿಡುವ ಸಾಧ್ಯತೆಯನ್ನು ಅಲ್ಲಗಳೆಯಲಾಗದು. ಪ್ರಾಕೃತಿಕ ವಿಕೋಪಕ್ಕಿಂತ ಮಾನವನಿರ್ಮಿತ ಬಡತನ ಬಹಳ ಅಪಾಯಕಾರಿ. ಬಡತನದ ಅರ್ಥವ್ಯಾಪ್ತಿ ವಿಸ್ತಾರವಾಗುತ್ತಿದ್ದರೂ ಹಣ ಮತ್ತು ಇತರ ಮೂಲಭೂತ ಸೌಲಭ್ಯಗಳ ಅಭಾವವನ್ನೇ ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಲಾಗಿದೆ.

೨೦ನೇ ಶತಮಾನದ ದಾರ್ಶನಿಕ ಕವಿ ಕುವೆಂಪು ಅವರು ಬಡವರ ಬಗ್ಗೆ, ಶೋಷಿತರ ಪರವಾಗಿ, ಕೆಳವರ್ಗದವರ ಧ್ವನಿಯಾಗಿ ಯಾವ ನಿಲುವು ತಳೆದಿದ್ದಾರೆ ಎಂಬುದು ಅತ್ಯಂತ ಕುತೂಹಲಕಾರಿ ಅಂಶವಾಗಿದೆ. ಕುವೆಂಪು ಸಾಮಾಜಿಕ ಕಳಕಳಿಯುಳ್ಳ ನವೋದಯ ಕವಿ ಎಂಬುದರಲ್ಲಿ ಎರಡು ಮಾತಿಲ್ಲ. ಮಹಾ ಛಂದಸ್ಸು, ಪಕ್ಷಿಕಾಶಿ... ಮುಂತಾದ ಪಾರಿಭಾಷಿಕ ಪದಗಳನ್ನು ಕೊಟ್ಟ ಕುವೆಂಪು 'ಶ್ರೀಸಾಮಾನ್ಯ' ಎಂಬ ಅರ್ಥಪೂರ್ಣ ಪದವನ್ನು ಕನ್ನಡಕ್ಕೆ ಕಾಣಿಕೆಯಾಗಿ ನೀಡಿದ್ದಾರೆ. 'ಶ್ರೀ' ಎಂಬ ಪದವನ್ನು ಸಾಮಾನ್ಯವಾಗಿ ಗೌರವ ಸೂಚಕವಾಗಿ ಸಿರಿವಂತರಿಗೆ, ಸಮಾಜದ ಮೇಲುಕುಲದವರಿಗೆ ಬಳಸುವುದು ರೂಢಿ. ಆದರೆ ಮಾನವ ಸಮಾನತೆಯ ಬಗ್ಗೆ ಅಹರ್ನಿಶಿ ಆಲೋಚನೆ ನಡೆಸಿದ ಕುವೆಂಪು ಶ್ರೀಯನ್ನು ಸಾಮಾನ್ಯರಿಗೆ ಸೇರಿಸಿ 'ಶ್ರೀಸಾಮಾನ್ಯ' ಎಂಬ ಪದವಿ ಕೊಟ್ಟು ಮಾನ್ಯ ಮಾಡಿದ್ದಾರೆ. ಶತಶತಮಾನಗಳಿಂದ ಮೂಕರಾಗಿದ್ದವರಿಗೆ ಮಾತುಕೊಟ್ಟ ಇವರು ಬಂಡಾಯ ಮನೋಧರ್ಮದ ಕವಿ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವೀಯ ನೆಲೆಯಲ್ಲಿ ಪ್ರತಿಯೊಂದನ್ನು ನೋಡುವ ಕವಿ ಕುವೆಂಪು ಎಂಬುದು ಇಲ್ಲಿ ಗಮನಾರ್ಹ, ಅಷ್ಟೇ ಸ್ಮರಣೀಯ.

ಕುವೆಂಪು ಅವರ ಕವನಗಳನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿ ಬಡತನದ ಬಗೆಗಿನ ಕವನಗಳನ್ನು ಗುರುತಿಸಿ, ಆ ಮೂಲಕ ಬಡತನದ ಕಾರಣ, ಪರಿಣಾಮ, ಪರಿಹಾರಗಳನ್ನು ಶೋಧಿಸುವ ಪ್ರಯತ್ನವನ್ನು ಮಾಡಬಹುದು.

ಈವರೆಗಿನ ವಿದ್ವಾಂಸರು ಕುವೆಂಪು ಅವರ ಕವನಗಳಲ್ಲಿ ಕೆಳಗಿನ ಮೂರು ಅಂಶಗಳನ್ನು ಪ್ರಧಾನವಾಗಿ ಗುರುತಿಸುತ್ತಾ ಬಂದಿರುತ್ತಾರೆ.

೧. ಕುವೆಂಪು ಅವರ ಕವನಗಳಲ್ಲಿ ನಿಸರ್ಗ, ೨. ಕುವೆಂಪು ಅವರ ಕವನಗಳಲ್ಲಿ ಅಧ್ಯಾತ್ಮ ೩. ಕುವೆಂಪು ಅವರ ಕವನಗಳಲ್ಲಿ ವೈಚಾರಿಕತೆ.

ಕುವೆಂಪು ಅವರ ಕವನಗಳಲ್ಲಿ ಈ ಪ್ರಧಾನ ಅಂಶಗಳನ್ನು ಗುರುತಿಸುವುದರ ಜೊತೆಗೆ ಅವರ ಕವನಗಳಲ್ಲಿ ಅಂತರ್‌ವಾಹಿನಿಯಂತೆ ಗುಪ್ತಗಾಮಿನಿಯಾಗಿ ಹರಿದುಬಂದಿರುವ ಬಡವರ, ಶೋಷಿತರ, ಕೆಳವರ್ಗದವರ ಪರವಾದ ಕವನಗಳನ್ನು ಗುರುತಿಸಬಹುದಾಗಿದೆ.

ಕುವೆಂಪು ಅವರ ನೇಗಿಲಯೋಗಿ, ಜಡವಾದಿ, ಕಲ್ಕಿ, ರಕ್ತಧುನಿ, ಕಿಟ್ಟಯ್ಯ, ರೈತನ ದೃಷ್ಟಿ, ಕೋಗಿಲೆ ಮತ್ತು ಸೋವಿಯತ್ ರಷ್ಯಾ, ಗೊಬ್ಬರ, ಓ, ಬನ್ನಿ ಸೋದರರೇ, ಬೇಗ ಬನ್ನಿ! ಹೊಸಬಾಳಿನ ಗೀತೆ, ಕ್ರಾಂತಿಕಾಳಿ, ಬೆಕ್ಕು – ಇಲಿ, ಲೆನಿನ್, 'ಶ್ರೀಸಾಮಾನ್ಯ'ರ ದೀಕ್ಷಾಗೀತೆ, ಬ್ರಾಹ್ಮನಾಯಿ – ಶೂದ್ರಕೋಳಿ, ಅಷ್ಟಗ್ರಹಯೋಗಸಿದ್ಧಿ, ಮಠಾಧಿಪತಿ, ಕರಿಸಿದ್ದ, ನಾಗಿ, ಅಮಲನ ಕಥೆ, ಹಾಳೂರು – ಪ್ರಧಾನವಾಗಿ ಈ ಕವನಗಳಲ್ಲಿ ರೈತರ, ಬಡವರ, ಶೋಷಿತರ ಪರವಾದ ಧ್ವನಿ ಅಭಿವ್ಯಕ್ತಗೊಂಡಿದೆ.

ಕುವೆಂಪು ಅವರು ನವೋದಯದ ಇತರ ಕವಿಗಳಿಗಿಂತ ವಿಭಿನ್ನ ಪರಿಸರದ ಹಿನ್ನೆಲೆಯಿಂದ ಬಂದವರು. "ಕನ್ನಡ ನವೋದಯ ಸಾಹಿತ್ಯ ಸಂದರ್ಭದಲ್ಲಿ ಬಹುತೇಕ ಮೇಲುವರ್ಗದಿಂದ ಬಂದ ಬರಹಗಾರರ ನಡುವೆ, ನಗರ, ನಾಗರಿಕ ಪರಿಸರದಿಂದ ದೂರವಾದ ಮಲೆನಾಡಿನ ಕಾಡಿನ ನಡುವಣ, ಅಪ್ರತಿಷ್ಠಿತ ಜನಸಮುದಾಯದ, ಅದರಲ್ಲೂ ಶೂದ್ರವರ್ಗದಿಂದ ಬಂದ ಮೊದಲ ಮಹತ್ವದ ಲೇಖಕರಾಗಿದ್ದಾರೆ ಕುವೆಂಪು ಎನ್ನುವುದು ಅವರ ಸಾಹಿತ್ಯವನ್ನು ಅರ್ಥ ಮಾಡಿಕೊಳ್ಳಲು ಅಗತ್ಯವಾದ ಹಲವು ಒಳನೋಟಗಳನ್ನು ಒದಗಿಸುತ್ತದೆ." ಈ ಹಿನ್ನೆಲೆಯಿಂದ ಕುವೆಂಪು ಅವರ ಮೇಲ್ಕಂಡ ಕವನಗಳನ್ನು ಅಧ್ಯಯನದ ಅಗತ್ಯತೆಗಾಗಿ ನಾಲ್ಕು ಭಾಗಗಳಾಗಿ ವಿಂಗಡಿಸಿ ಬಡತನದ ಬಗೆಗಿನ ಅವರ ಧೋರಣೆಯನ್ನು ಗ್ರಹಿಸುವ ಉದ್ದೇಶವಿದೆ. ಆ ನಾಲ್ಕು ಭಾಗಗಳು ಇಂತಿವೆ :

೧. ಕುವೆಂಪು ಅವರ ರೈತರ ಪರವಾದ ಕವನಗಳು
೨. ಕುವೆಂಪು ಅವರ ತತ್ವ ಪ್ರಧಾನ ಅಥವಾ ಸಾಮಾಜಿಕ ವಸ್ತುವುಳ್ಳ ಕ್ರಾಂತಿಕಾರಿ ಕವನಗಳು
೩. ಕುವೆಂಪು ಅವರ ಕಥನಕವನಗಳು ಮತ್ತು ನೀಳ್ಗವಿತೆಗಳು
೪. ಕುವೆಂಪು ಅವರ ಇತರ ಕವನಗಳು.

**೧) ಕುವೆಂಪು ಅವರ ರೈತರ ಪರವಾದ ಕವನಗಳಲ್ಲಿ ಬಡತನದ ವಸ್ತು**: ನೇಗಿಲಯೋಗಿ, ಸುಗ್ಗಿ ಹಾಡು, ಸಗ್ಗದ ಬಾಗಿಲು, ರೈತನ ದೃಷ್ಟಿ, ಗೊಬ್ಬರ, ಕುಳದ ಕಲಿಗೆ – ಪ್ರಮುಖವಾಗಿ ಈ ಕವನಗಳಲ್ಲಿ ಕುವೆಂಪು ರೈತರ ಪರವಾಗಿ, ಬಡವರ ಬೆಂಬಲಿಗರಾಗಿ ಧ್ವನಿ ಎತ್ತಿದ್ದಾರೆ.

ರೈತರು ಭಾರತದ ಬೆನ್ನೆಲುಬಿದ್ದ ಹಾಗೆ. ಅದರಲ್ಲೂ ಭಾರತ ಕೃಷಿಪ್ರಧಾನ ದೇಶ. ಹಳ್ಳಿಗಳನ್ನೇ ಅಧಿಕವಾಗಿ ಹೊಂದಿರುವ ನಾಡು ನಮ್ಮದು. ಹಳ್ಳಿಗಳ ಉದ್ಧಾರವಾಗದೇ ಭಾರತದ ಅಭಿವೃದ್ಧಿ ಅಸಾಧ್ಯದ ಮಾತು. ಮನುಷ್ಯನ ಮೂಲಭೂತ ಅವಶ್ಯಕತೆಗಳಲ್ಲಿ ಆಹಾರ ಅತಿ ಮುಖ್ಯವಾದುದು. ದೇಶದ ಸಮಸ್ತ ಜನರಿಗೆ ಬೇಕಾಗುವ ಅನ್ನ ನೀಡುವ ಅನ್ನದಾತ ರೈತ. ಇಂತಹ ರೈತನ ಸ್ಥಿತಿ ಶೋಚನೀಯವಾಗಿದೆ. ನಮ್ಮ ರೈತರು ಸಾಮಾನ್ಯವಾಗಿ ಅಂದಿನಿಂದ ಇಂದಿನವರೆಗೂ ಜಮೀನುದಾರರಿಂದ, ಬಂಡವಳಿಗರಿಂದ, ರಾಜರಿಂದ, ಮೇಲ್ವರ್ಗದವರಿಂದ ನಿತ್ಯನಿರಂತರ ಶೋಷಣೆಗೊಳಗಾಗುತ್ತಲೇ ಬಂದಿದ್ದಾರೆ. ಇಂತಹ ಶೋಷಿತರ ಪರವಾಗಿ ಧ್ವನಿ ಎತ್ತುವ ಕವಿಯ ನಿಲುವು ಸದಾ ಸ್ವಾಗತಾರ್ಹ.

ಕುವೆಂಪು ಅವರಿಗೆ ಸಮಾಜದ ಅಡಿಪಾಯದ ಅರಿವಿನ ಮಹತ್ವ ತಿಳಿದಿತ್ತು. ಅನ್ನವೆಂಬ ಅಮೃತವನೀಯುವ ರೈತನ ಅವಶ್ಯಕತೆ ಸಮಾಜಕ್ಕೆ ಅನಿವಾರ್ಯ. 'ಯೋಗಿ' ಸಾಮಾನ್ಯವಾಗಿ ಸ್ವಾರ್ಥ ರಹಿತನಾಗಿ ಜಗದೇಳ್ಗೆಗೆ ದುಡಿಯುವ ಆತ್ಮೋನ್ನತಿ ಪಡೆದ ವ್ಯಕ್ತಿ. ಕವಿ ಇಲ್ಲಿ ನೇಗಿಲ ಮೂಲಕ ಜಗದೋದ್ಧಾರಕನಾದ ರೈತನನ್ನು 'ನೇಗಿಲ ಯೋಗಿ' ಎಂದು ಕರೆದಿರುವುದು ಬಹಳ ಔಚಿತ್ಯಪೂರ್ಣವಾಗಿದೆ.

ಕುವೆಂಪು ಅವರ 'ಕಿಟ್ಟಯ್ಯ' ಕವನ ಕುವೆಂಪು ಅವರ ಆಸಕ್ತಿ, ಆಲೋಚನೆಗಳನ್ನು ಪರಿಚಯ ಮಾಡಿಕೊಡುತ್ತದೆ. ಸಾಮಾಜಿಕ ಕಾಳಜಿಯನ್ನು ಬಿತ್ತರಿಸುತ್ತದೆ.

*ನಾನವಗೆ ನುಡಿದಂತೆ ಬಹುಜನಕೆ ನುಡಿದಿಲ್ಲ;*
*ಅವನಿಗೆ ಕರಗಿದಂತೆ ಬಹುಜನಕೆ ಕರಗಿಲ್ಲ!* (ಪು. ೩೨೦, ಸಂ. ೧. ನವಿಲು, ಕಿಟ್ಟಯ್ಯ)

ಈ ಮಾತು 'ಕಲೆಗಾಗಿ ಕಲೆ ಮಾತ್ರವಲ್ಲ ಬದುಕಿಗಾಗಿ ಕಲೆ' ಎಂಬ ಅವರ ನಿಲುವನ್ನು ಮತ್ತೆ ಮತ್ತೆ ಒತ್ತಿ

ಹೇಳುತ್ತದೆ. ಸೃಜನಶೀಲ ವ್ಯಕ್ತಿಗಿರಬೇಕಾದ ಸಾಮಾಜಿಕ ಪ್ರಜ್ಞೆಯನ್ನಿದು ಬಿಂಬಿಸುತ್ತದೆ.

*ಹೊಟ್ಟೆ ಬಟ್ಟೆಯ ಹಿಡಿದು, ಮಕ್ಕಳುಣಿಸನೆ ಕಡಿದು*
*ಕಂದಾಯ ಕೊಡಬೇಕು ಮಳೆ ಬರಲಿ, ಬರದಿರಲಿ*
*ಬೆಳೆ ಕೊಡಲಿ, ಬೆಳೆ ಸುಡಲಿ ಕಂದಾಯ ತಪ್ಪದಿದೆ !*

(ಪು. ೩೧೩, ಸಂ. ೧, ನವಿಲು, ಕಿಟ್ಟಯ್ಯ)

ಎಂಬ ರೈತ ಕಿಟ್ಟಯ್ಯನ ಮಾತು ಆತನ ಬಡತನಕ್ಕೆ ಇರುವ ಸ್ಪಷ್ಟ ಕಾರಣಗಳನ್ನು ತೆರೆದಿಡುತ್ತದೆ. ಈ ಕವನದಲ್ಲಿಯೇ ಕುವೆಂಪು ತಮ್ಮ ಮಲೆನಾಡಿನ ರೈತನ ಸ್ಥಿತಿಯನ್ನು, ಬಯಲು ಸೀಮೆಯ ರೈತನ ಪರಿಸ್ಥಿತಿಯನ್ನು ಕಟ್ಟಿಕೊಡುತ್ತಾರೆ.

''ಕುವೆಂಪು ಸಾಹಿತ್ಯದ ಸೂಕ್ಷ್ಮ ಅಧ್ಯಯನ ಇವತ್ತಿನ ಅನೇಕ ಸಾಮಾಜಿಕ-ಸಾಂಸ್ಕೃತಿಕ ಬಿಕ್ಕಟ್ಟುಗಳಿಗೆ ಅರ್ಥಪೂರ್ಣ ಒಳನೋಟ ಒದಗಿಸುವ ಸಾಧ್ಯತೆಯಿದೆ. ಆಳುವ ಸಂಸ್ಕೃತಿ ಹಾಗೂ ಅಧೀನ ಸಂಸ್ಕೃತಿಗಳ ಸಂಬಂಧದ ಸ್ವರೂಪದ ಅನೇಕ ಎಳೆಗಳು ಕುವೆಂಪು ಸಾಹಿತ್ಯದಲ್ಲಿ ಅನುಭವದ ನೆಲೆಯಲ್ಲಿಯೇ ಸಹಜವಾಗಿ ಅನಾವರಣಗೊಳ್ಳುತ್ತವೆ.''

*ಕರಿಯರದೊ ಬಿಳಿಯರದೊ ಯಾರದಾದರೆ ಏನು ?*
*ಸಾಮ್ರಾಜ್ಯವಾವಗಂ ಸುಲಿಗೆ ರೈತರಿಗೆ !*
*ವಿಜಯನಗರವೋ ? ಮೊಗಲರಾಳ್ವಿಕೆಯೋ ?*
*ಇಂಗ್ಲಿಷರೋ ?*
*ಎಲ್ಲರೂ ಜಿಗಣೆಗಳೇ ನನ್ನ ನೆತ್ತರಿಗೆ !*
*ಕತ್ತಿ ಪರದೇಶಿಯಾದರೆ ಮಾತ್ರ ನೋವೆ !*
*ನಮ್ಮವರೆ ಹದಹಾಕಿ ತಿವಿದರದು ಹೂವೆ ?*

*(ಪು. ೩೫೯, ಸಂ. ೧, ಕೋ. ಸೋ. ರಷ್ಯಾ, ರೈತನ ದೃಷ್ಟಿ)*

ಆಳ್ವಿಕೆ ಯಾರದಾದರೂ ಆಗಿರಲಿ ಅಂದರೆ ಮೊಗಲರು, ಬ್ರಿಟಿಷರು, ವಿಜಯನಗರದರಸರು ಹೀಗೆ ಯಾರೇ ಆಳಲಿ ರೈತರ ಶೋಷಣೆ ನಿರಂತರ ಎಂದು ಸಾರುವ ಈ ಕವಿತೆ ಬಡತನಕ್ಕೆ ಕಾರಣಗಳನ್ನು ಹುಡುಕಿ ಕೊಡುತ್ತದೆ.

ರಾಮ, ಭೀಮ, ಅರ್ಜುನ, ಕೃಷ್ಣ ಮುಂತಾದ ಮೇಲ್ವರ್ಗದವರನ್ನೇ ವಸ್ತುವಾಗುಳ್ಳ ಕವಿತೆ, ಇಂದು ಕರಿಸಿದ್ದ, ಕಿಟ್ಟಯ್ಯರಂತಹ ಸಾಮಾನ್ಯರನ್ನು ಕುರಿತು ಬರೆಯುವಂತಾಯಿತು. ಸಿದ್ಧಸಂಸ್ಕೃತಿಗೆ ಕೊಡಲಿ ಪೆಟ್ಟು ಕೊಡುವ ಸಲುವಾಗಿ ಕುವೆಂಪು ಗೊಬ್ಬರವನ್ನು ಕುರಿತು ಕವಿತೆ ಬರೆದು ಆ ಮಾರ್ಗದಲ್ಲಿ ದಿಟ್ಟ ಹೆಜ್ಜೆ ಇಟ್ಟರು. ''ಕೆಳ ಸಂಸ್ಕೃತಿಯ ವಕ್ತಾರರಾಗಿ ಕುವೆಂಪು ಇಲ್ಲಿ ಮೇಲುಸಂಸ್ಕೃತಿಯನ್ನು ಪ್ರಶ್ನಿಸುತ್ತಿದ್ದಾರೆ, ಮಾತ್ರವಲ್ಲ, ಮೇಲುಸಂಸ್ಕೃತಿಯ ಅಸ್ತಿತ್ವದ ಬೇರುಗಳು ಎಲ್ಲಿವೆ ಎಂದು ಕೇಳುವ ಮೂಲಕ ಕೆಳ ಸಂಸ್ಕೃತಿಯ ಪ್ರಾಮುಖ್ಯತೆ ಪ್ರತಿಪಾದಿಸುತ್ತಿದ್ದಾರೆ. 'ಅವರೊ ಹೆಸರು, ನೀನು ಉಸಿರು' ಎಂಬ ಮಾತು ಇಲ್ಲಿ ನೆನಪಾಗುತ್ತದೆ.'' ಶತಶತಮಾನಗಳಿಂದ ಬಂದ ಇತಿಹಾಸವನ್ನು ಬದಲಾಯಿಸಬೇಕೆನ್ನುವ ಹಂಬಲ ಕುವೆಂಪು ಅವರ ಈ ಗೊಬ್ಬರ ಕಾವ್ಯದ ಕಾಣ್ಕೆ.

ಹೀಗೆ ಕುವೆಂಪು ಅವರ ರೈತ 'ನೇಗಿಲ ಯೋಗಿ'ಯಾಗಿ ಕಾಣಿಸಿಕೊಂಡು ಅನಂತರ ನಾಡಿಗೇ ಉಸಿರಾಗಿ, ಹೊಲದ ಗಾಂಧಿಯಾಗಿ ಎತ್ತರೆತ್ತರಕ್ಕೆ ಬೆಳೆಯುವುದು ಅವರ ರೈತನ ಆತ್ಮಶಕ್ತಿಯ ಚೇತನವೂ ಹೌದು, ಅವರ ಕಾವ್ಯದ ಶಿಖರ, ಸಿದ್ಧಿಯೂ ಹೌದು.

**೨. ಕುವೆಂಪು ಅವರ ತತ್ವಪ್ರಧಾನ ಕವನಗಳಲ್ಲಿ ಅಥವಾ ಸಾಮಾಜಿಕ ವಸ್ತುವುಳ್ಳ ಕ್ರಾಂತಿಕಾರಿ ಕವನಗಳಲ್ಲಿ ಬಡತನದ ವಸ್ತು :** ಜಡವಾದಿ, ರಕ್ತಧುನಿ, ಕಲ್ಕಿ, ಕೋಗಿಲೆ ಮತ್ತು ಸೋವಿಯತ್ ರಷ್ಯಾ, ಹೊಸಬಾಳಿನ ಗೀತೆ, ಕ್ರಾಂತಿಕಾಳಿ, ಬೆಕ್ಕು-ಇಲಿ, ಲೆನಿನ್, 'ಶ್ರೀಸಾಮಾನ್ಯ'ರ ದೀಕ್ಷಾಗೀತೆ, ಬ್ರಾಹ್ಮಣಾಯಿ- ಶೂದ್ರ ಕೋಳಿ, ಅಷ್ಟಗ್ರಹಯೋಗಸಿದ್ದಿ, ಮಠಾಧಿಪತಿ – ಪ್ರಧಾನವಾಗಿ ಈ ಕವನಗಳು ಈ ಭಾಗದಲ್ಲಿ ಮುಖ್ಯವಾಗುತ್ತವೆ.

''ಕುವೆಂಪು ಅವರಿಗೂ ನವೋದಯದ ಇತರ ಸಾಹಿತಿಗಳಿಗೂ ಇದ್ದ ಪ್ರಮುಖ ವ್ಯತ್ಯಾಸವನ್ನಿಲ್ಲಿ ಗುರುತಿಸಬಹುದು. ಕುವೆಂಪು ಅವರಿಗೆ ಹೊರಗಿನ ಹೋರಾಟದಷ್ಟೇ, ಒಳಗಿನ ಹೋರಾಟವೂ ಮುಖ್ಯವಾಗಿತ್ತು. ಉಳಿದವರಿಗೆ ಹೊರಗಿನ ಹೋರಾಟದ ಬಗ್ಗೆ ಆಸಕ್ತಿ; ಒಳಗಿನ ಸ್ಥಿತಿಯ ಬಗ್ಗೆ ಸಹಾನುಭೂತಿ. ಆದರೆ ಕುವೆಂಪು ಅವರಂತೆ ಅದಕ್ಕಾಗಿ ಅವರು ಹೋರಾಡಬೇಕಾದ ಅಗತ್ಯವಿರಲಿಲ್ಲ.'' (ಇದಕ್ಕೆ ನನ್ನ ಒಮ್ಮತವಿಲ್ಲ. ಹೀಗೆ ಬ್ರಿಟಿಷರ ಒಡೆದು ಆಳುವ ನೀತಿಯನ್ನು ಮತ್ತೆ ಬಳಸುವುದು ಸಲ್ಲದು. ಬಳಸಿದರೆ ಅವಸಾನ ನಮ್ಮದೇ. ಕುವೆಂಪು ಅವರಂತೆ ಇತರರು ಹೃದಯಪೂರ್ವಕವಾಗಿ ಹೋರಾಡಿದರೆಂಬುದು ನನ್ನ ನಂಬಿಕೆ.)

'ಜಡವಾದಿ', 'ರಕ್ತಧುನಿ', 'ಪಾಂಚಜನ್ಯ' ಈ ಕವನಗಳಲ್ಲಿ ಕುವೆಂಪು ಅವರ ಈ ನಿಲುವು ಬಹಳ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತದೆ. ಭಾರತವು ಬ್ರಿಟಿಷರ ದಾಸ್ಯದಿಂದ ಬಿಡುಗಡೆ ಹೊಂದಬೇಕು, ಜೊತೆಗೆ ಭಾರತದಲ್ಲಿಯೇ ಬಹುಕಾಲದಿಂದ ನೆಲೆಯೂರಿರುವ ಮೇಲ್ವರ್ಗದವರ ಹಿಡಿತ ತೊಲಗಬೇಕು, ಸಾಮಾನ್ಯ ಜನರು ಈ ಎರಡು ಬಗೆಯ ಕ್ರೂರ ಹಿಡಿತದಿಂದ ಪಾರಾಗಿ ಸ್ವತಂತ್ರರಾಗಿರಬೇಕೆಂದು ಕವಿ ಬಯಸಿದರು ಎಂಬುದನ್ನು

*ದಾಸ್ಯಶಿಲೆಯನೊಡೆದು ಹೊಮ್ಮಿ*
*ಶ್ರೀಮಂತರ ಕೊಳಕ ಬಿಚ್ಚಿ*
*ಹಳತನೆಲ್ಲ ಕೊಚ್ಚಿ ಕೊಚ್ಚಿ*

(ಪು. ೧೩೭, ಸಂ. ೧, ಪಾಂಚಜನ್ಯ, ರಕ್ತಧುನಿ)

ಎಂಬ ಸಾಲುಗಳು ಸ್ಪಷ್ಟಪಡಿಸುತ್ತವೆ.

ಕುವೆಂಪು ಬಂಡಾಯ ಧ್ವನಿಯನ್ನು, ಕ್ರಾಂತಿಯ ಕಿಡಿಯನ್ನು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಪಡಿಸಿದ ನವೋದಯ ಕವಿಗಳಲ್ಲಿ ಅತ್ಯಂತ ಪ್ರಮುಖರಾಗುತ್ತಾರೆ. ಸಾಮಾಜಿಕ ಬದಲಾವಣೆಗೆ ನಿತ್ಯ ತುಡಿಯುವ ಇವರು ತಮ್ಮ ಸಾಹಿತ್ಯದಲ್ಲಿ ಅದಕ್ಕೆ ಅಭಿವ್ಯಕ್ತಿ ನೀಡಿದ್ದಾರೆ.

ಕುವೆಂಪು ಅವರ ಅತ್ಯುತ್ತಮ ಕವನಗಳಲ್ಲಿ 'ಕಲ್ಕಿ'ಯೂ ಒಂದು. ಬಡವ-ಸಿರಿವಂತರ ನಡುವಣ ಅಂತರದ ಹಿನ್ನೆಲೆಯಲ್ಲಿ ಈ ಕವನ ಮೂಡಿಬಂದಿದೆ :

*ಧನಿಕರ ಮನೆಗಳು ಒಂದೆಡೆ ನಿಂತಿವೆ*
*ಬಡವರ ಗುಡಿಸಲುಗಳು ಒಂದೆಡೆ ನಿಂತಿವೆ.*
*ಜ್ಯೋತಿಯ ಮಣಿದೀಪಗಳಲ್ಲಿ;*
*ಕತ್ತಲು, ಕಗ್ಗತ್ತಲು ಇಲ್ಲಿ !*
*ಹಾಡಿನ ನುಣ್ದನಿಯತ್ತ,*
*ಗೋಳಿನ ನೀಳ್ದನಿಯಿತ್ತ.*
*ಕೂಳನು ಹೆಮ್ಮೆಗೆ ಬಿಸುಡುವರಲ್ಲಿ,*
*ಹೊಟ್ಟೆಗೆ ಇಲ್ಲದೆ ಕೊರಗುವರಿಲ್ಲಿ !*
*ಆ ಕಡೆ ಉದ್ಯಾನ,*
*ಈ ಕಡೆ ಸ್ಮಶಾನ !*
*ಪೀತಾಂಬರಗಳ ಹೊದೆಯುವರಲ್ಲಿ*
*ಕೌಪೀನಕೆ ಚಿಂದಿಯು ಸಿಗದಿಲ್ಲಿ !*

(ಪು. ೧೬೮-೬೯, ಸಂ-೧, ಪಾಂಚಜನ್ಯ, ಕಲ್ಕಿ)

ಎಂಥ ಕ್ರೂರ ಜಗತ್ತು! ಅಸಮತೆಯ ಸಮಾಜ ಸೃಷ್ಟಿಸಿರುವ ಬಡತನದ ಪರಿಣಾಮದ ಚಿತ್ರಣ ಇಲ್ಲಿ ಸ್ಪಷ್ಟವಾಗಿದೆ. ಬಡವರು ತಾಳ್ಮೆ ಉಳ್ಳವರು ನಿಜ. ಆದರೆ ಅವರ ತಾಳ್ಮೆಗೂ ಒಂದು ಮಿತಿ ಇದೆ. ಮಿತಿ ಮೀರಿದಾಗ ಆಗಬಹುದಾದ ಅನಾಹುತವನ್ನು

*ಬಡಬಗ್ಗರ ಜಠರಾಗ್ನಿಯು ಎದ್ದು*
*ಗುಡಿಸಲುಗಳಿಗೇ ಬೆಂಕಿಯು ಬಿದ್ದು*
*ಧಗಧಗ ಧಗಧಗ ಹೊತ್ತಿದುದು*
*ಭುಗಿ ಭುಗಿಲೆನ್ನುತ ಮುತ್ತಿದುದು !*
*ಮುಗಿಲಿನವರೆಗೂ ಬಾನಿನವರೆಗೂ*
*ದಿಕ್ಕುದಿಕ್ಕುಗಳ ಜುಟ್ಟಿನವರೆಗೂ*
*ಬಡವರ ಬೆಂಕಿಯು ನಾಲಗೆ ಚಾಚಿ*
*ಶ್ರೀಮಂತರನಪ್ಪಿತ್ತು ಬಾಚಿ !*

(ಪು. ೧೭೯, ಸಂ-೧, ಪಾಂಚಜನ್ಯ, ಕಲ್ಕಿ)

ಹೀಗೆ ಕವಿ ಚಿತ್ರಿಸಿದ್ದಾರೆ. ಇದಕ್ಕಿಂತಲೂ ಬಡವರ ಆಕ್ರೋಶದ ಚಿತ್ರಣ ಬೇಕೆ ?

'ಬಡವರ ಹಸಿವಿಗೆ ಮೌಢ್ಯವ ಕೊಟ್ಟು' ಬಡತನದ ಕಾರಣಗಳನ್ನು ಹೇಳುವ ಈ ಸಾಲು ಬಡತನದ ಪರಿಣಾಮ ಅಂದರೆ ಸಮಾಜದ ಅಸಮತೆಗೆ ಕೊಂಡಿಯಾಗಿ ನಿಂತಿದೆ. ಬಡವರ ಬಡಬಾಗ್ನಿಗೆ ಶೋಷಕರು, ಶೋಷಿತರು; ಹುಡುಗರು, ಮುದುಕರು; ಕುಂಟರು, ಕಿವುಡರು, ಸಿರಿವಂತರು ಎಂಬ ಭೇದ ಭಾವವಿಲ್ಲ. ಅದು ಎಲ್ಲರನ್ನೂ ಆಹುತಿಯಾಗಿ ತೆಗೆದುಕೊಳ್ಳುತ್ತದೆ. ರಕ್ತದ ಜಲಪಾತವೇ ಹರಿಯುತ್ತದೆ.

'ಅಸ್ಥಿಪಂಜರದ ಅಶ್ವವನೇರಿ' ಬಂದ ಕಲ್ಕಿ ಬಡವರ ಪ್ರತಿನಿಧಿಯಾಗಿ ಶತಮಾನಗಳಿಂದ ತನ್ನವರಿಗಾದ ಶೋಷಣೆಯಿಂದ ನೊಂದು, ಪ್ರತೀಕಾರವಾಗಿ ರಕ್ತ ದಾಹವನ್ನಿಟ್ಟುಕೊಂಡು ಮುಂಬರಿಯುತ್ತಾನೆ. ರಕ್ತವ ಮೊಗೆಮೊಗೆದು ಕುಡಿದರೂ ತಲೆಗಳ ತೆಗೆತೆಗೆದು ತಿಂದರೂ 'ತುಂಬಹು ಹೊಟ್ಟೆ ತುಂಬದೂ ಹೊಟ್ಟೆ!' ಎನ್ನುವಲ್ಲಿ ಬಡವನ ಹಸಿವಿನ ಆಳದ ತೀವ್ರತೆಯನ್ನು ತೆರೆದಿಡುತ್ತದೆ.

*ಕಲ್ಕೀ ! ಕಲ್ಕಿ ! ಎನ್ನುತ ಚೀರಿ*
*ಕನಸೊಡೆದೆದ್ದೆ !*
*ಇನ್ನೆಲ್ಲಿಯ ನಿದ್ದೆ ?*

(ಪು. ೧೮೨, ಸಂ-೧, ಪಾಂಚಜನ್ಯ, ಕಲ್ಕಿ)

ಈ ಸಾಲುಗಳು ವಾಚ್ಯಾರ್ಥವನ್ನು ಹೇಳಿದರೂ ಈ ಸಾಲುಗಳಲ್ಲಿ ಅಡಗಿರುವ ಧ್ವನಿಯನ್ನು ಅರ್ಥಮಾಡಿಕೊಂಡಾಗ ಕವಿ ಕುವೆಂಪು ಸಮಾಜದ ಸಾಮಾನ್ಯ ಜನರ ಬಗ್ಗೆ ಇಟ್ಟುಕೊಂಡಿದ್ದ ಆಲೋಚನಾಪರಿ, ಅವರ ದೃಷ್ಟಿ, ಅವರ ನಿಲುವು ಎಲ್ಲವೂ ಸ್ಪಷ್ಟವಾಗಿ ಗೋಚರಿಸುತ್ತವೆ. ತೀ.ನಂ.ಶ್ರೀ. ಯವರು ಕಲ್ಕಿ ಕವನದ ಧ್ವನಿಯನ್ನು ಹೊರಗೆಡಹಿರುವುದನ್ನು ಆ ಮೂಲಕ ಕುವೆಂಪು ಅವರ ಕಾವ್ಯಸತ್ವವನ್ನು ಸಾಬೀತು ಪಡಿಸಿರುವುದನ್ನು ಇಲ್ಲಿ ನೆನೆಯುವುದು ಉಚಿತ ಎಂದು ನನ್ನ ನಂಬಿಕೆ.

ದೇವರ ಅಸ್ತಿತ್ವ, ಕರ್ಮಸಿದ್ಧಾಂತ, ವಿಧಿ, ಪೂರ್ವ ಜನ್ಮಗಳ ಹೇರಿಕೆ, ಪುನರ್ಜನ್ಮಗಳ ಮಹಡಿಯ ವಾಡಿಕೆ ಇವುಗಳನ್ನುಪಯೋಗಿಸಿ ಬಡವರನ್ನು ಬಡವರಾಗಿಯೇ ಮುಂದುವರೆಯುವಂತೆ ಮಾಡಿ ಜಾಣತನದಿಂದ ವರ್ತಿಸುತ್ತಿರುವ ಇಂದಿನ ಬೂರ್ಜ್ವಾ ವ್ಯವಸ್ಥೆಯನ್ನು ಕಿತ್ತೊಗೆಯಲು ಕವಿ ಕುವೆಂಪು,

*ಗುಡಿ ಚರ್ಚು ಮಸೀದಿಗಳ ಬಿಟ್ಟು ಹೊರಬನ್ನಿ*
*ಬಡತನವ ಬುಡಮಟ್ಟ ಕೀಳಬನ್ನಿ*

(ಪು. ೩೭೨, ಸಂ-೧, ಕೋ.ಸೋ. ರಷ್ಯಾ, ಓ, ಬನ್ನಿ, ಸೋದರರೇ, ಬೇಗ ಬನ್ನಿ!)

ಎಂದು ಕರೆ ಇತ್ತಿದ್ದಾರೆ.

ಶ್ರೀಮಂತರಡಿಯಲ್ಲಿ ಸಿಲುಕಿ ಯುಗಯುಗಗಳಿಂದಲೂ ದಾರಿದ್ರ್ಯ ಭಾರದಿಂದ ನೊಂದ ಬಡ ಜನರು ಹೊಸಬಾಳಿನೆಡೆಗೆ ದಿಟ್ಟ ಹೆಜ್ಜೆ ಇಡಬೇಕೆಂದು, ಇಂದು ನೆತ್ತರು ಚೆಲ್ಲಿಯಾದರೂ ಮುಂದೆ ಬರುವ ಮಕ್ಕಳಿಗೆ ಹೊಟ್ಟೆಗನ್ನವನ್ನು, ಮೈಗೆ ಬಟ್ಟೆಯನ್ನು ನೀಡಬೇಕೆಂದು ಹೇಳುವ ಕವಿ ಕುವೆಂಪು

*... ಹಾ ! ಹೊಟ್ಟೆಗಿಲ್ಲದೆ ಅನ್ನ*
*ಬಡಜನರು ಸಾಯುತಿರೆ, ರಸಗಂಧವನು ತೋರೆ*
*ತಣಿವಹುದೆ ? ಕ್ರಾಂತಿಕಾಳಿಯು ನಾನು ಕೈಬೀಸಿ*
*ಕರೆಯೇ, ಬಾ ಪೂಜೆಗೆ ಹೃದಯ ರಕ್ತವ ಸೂಸಿ*
(ಪು. ೪೯೭, ಸಂ-೧, ಕೃತ್ತಿಕೆ, ಕ್ರಾಂತಿಕಾಳಿ)

ಎಂದು ಹೇಳುತ್ತ ಕ್ರಾಂತಿಕಾಳಿ ಕವನದ ಮೂಲಕ 'ಸರ್ವರಿಗೆ ಸಮಬಾಳು ! ಸರ್ವರಿಗೆ ಸಮಪಾಲು !' ಇರುವ ಸಮಾಜ ದಲ್ಲಿ ಹೊಸಬಾಳು ಬಾಳಲು ಸರ್ವರನ್ನೂ ಸ್ವಾಗತಿಸುತ್ತಾರೆ.

*ಕೊನೆಗೊಂಡಿತೊ ಓರೋರ್ವರ ಗರ್ವದ ಕಾಲ*
*ಇದು ಸರ್ವರ ಕಾಲ* (ಪು. ೭೫, ಸಂ-೨, ಇಕ್ಷುಗಂಗೋತ್ರಿ, 'ಶ್ರೀಸಾಮಾನ್ಯ'ರ ದೀಕ್ಷಾಗೀತೆ)

ಎಂದು ಮನದುಂಬಿ ಹೇಳುವ ಕವಿ

*ಮೇಲಿಲ್ಲವೋ ಕೀಳಿಲ್ಲವೋ*
*ಸರ್ವಸಮಾನದ ರಾಜ್ಯ*
*ಅಧ್ಯಕ್ಷನೋ ಸೇನಾನಿಯೋ*
*ಕಮ್ಮಾರನೋ ಚಮ್ಮಾರನೋ*
*ಕಾಯಕವೆಲ್ಲವು ಪೂಜ್ಯ !* (ಪು. ೭೫, ಸಂ-೨, ಇಕ್ಷುಗಂಗೋತ್ರಿ 'ಶ್ರೀಸಾಮಾನ್ಯ'ರ ದೀಕ್ಷಾಗೀತೆ)

ಎನ್ನುವಾಗ ಬಸವಣ್ಣನ ಕಾಯಕವೇ ಕೈಲಾಸ ತತ್ವವನ್ನು ನೆನಪಿಸುವಂತೆ ಮಾಡುತ್ತಾರೆ. ಹೊರದಾಸ್ಯದೊಂದಿಗೆ ಒಳಗಿನ ದಾಸ್ಯವು ತೊಲಗಬೇಕೆಂದು ಈ ಹಿಂದೆ ಹೇಳಿದಂತೆ ಈ ಕವನದ ಮೂಲಕವೂ ಕವಿ ದಾಸ್ಯ ಪರಂಪರೆಯನ್ನು ಮತ್ತೆ ಹುಟ್ಟದ ಹಾಗೆ ನಾಶಮಾಡಬೇಕೆಂದಿದ್ದಾರೆ. ವಾಸ್ತವ ಸ್ಥಿತಿಯನ್ನು ನೋಡಿದರೆ 'ಕೊನೆಗೊಂಡಿತೋ ಓರೋರ್ವರ ಗರ್ವದ ಕಾಲ ಇದು ಸರ್ವರ ಕಾಲ!' ಎಂಬುದು ಹೆಸರಾಗಿಯೇ, ಹೇಳಿಕೆಯಾಗಿಯೇ ಉಳಿಯಿತೆಂದು, ಉಸಿರಾಗಲಿಲ್ಲವೆಂಬುದು ದುಃಖದ ಸಂಗತಿ.

**೩. ಕಥನಕವನಗಳು ಮತ್ತು ನೀಳ್ಗವಿತೆಗಳಲ್ಲಿ ಬಡತನದ ವಸ್ತು:** ಕರಿಸಿದ್ದ, ನಾಗಿ, ಅಮಲನ ಕಥೆ, ಹಾಳೂರು – ಪ್ರಧಾನವಾಗಿ ಈ ಕವನಗಳನ್ನು ಈ ಭಾಗದಲ್ಲಿ ಚರ್ಚಿಸಬಹುದಾಗಿದೆ.

ಕಥನ ಕವನಗಳಲ್ಲಿ ಕುವೆಂಪು ಶ್ರೀಸಾಮಾನ್ಯನಿಗೆ ಕೊಟ್ಟ ಗೌರವ ಬಹುಮುಖ್ಯ. ಕವನದ ವಸ್ತು ಅಸಾಮಾನ್ಯ ವ್ಯಕ್ತಿ - ವಸ್ತುವಾಗಿರಬೇಕೆಂಬ ವಾದವನ್ನು ತಳ್ಳಿಹಾಕಿ ಶ್ರೀಸಾಮಾನ್ಯರ ಬಗೆಗೆ ಸ್ಪಂದಿಸುವ ಕವಿ ಕುವೆಂಪು ಹರಿಹರ, ವಚನಕಾರರನ್ನು ನೆನಪಿಸುತ್ತಾರೆ. ಗೊಬ್ಬರದಂತಹ ಕವನಗಳನ್ನು ರಚಿಸಿದ ಕವಿ ಕರಿಸಿದ್ದ ನಂತಹ ಕವನ ರಚನೆಯಲ್ಲಿ 'ಬಡಜನರ ಜೀವದಲ್ಲಿ ಉಬ್ಬೆಗವ ಹುಟ್ಟಿಸುವ ಸಂಗತಿಗಳೇನಿಲ್ಲ ಎಂದೆಲ್ಲ' ಬೊಬ್ಬಿಡುವ ಜನರಿಗೆ ತಿಳಿಸಲು, ದಿಟದ ಕತೆಗಾಗಿ ಆಶಿಸುವ ಜನರಿಗಾಗಿ ಇಂಥ ಕವನ ರಚನೆಗೆ ತೊಡಗಿರುವುದಾಗಿ ಕವಿ ಹೇಳುತ್ತಾರೆ.

ಕರಿಸಿದ್ದ – ಗಿಡ್ಡಿ ಬಡವರು : ಬಹುಕಾಲ ಮಕ್ಕಳಾಗದಿದ್ದ ಇವರಿಗೆ ಕೊನೆಗೊಮ್ಮೆ ಬೈರ ಜನಿಸುತ್ತಾನೆ. ಬಡತನದ ಬೇಗೆಯಲ್ಲಿ ಬೆಂದು ಬೆಳೆದ ಬೈರ ಅಪ್ಪನೊಂದಿಗೆ ಕೆರೆಗೆ ಹೋಗಿದ್ದಾಗ ಸಾವಿಗೀಡಾಗುತ್ತಾನೆ. ಇದು ಕವನದ ವಸ್ತು. ಕರಿಸಿದ್ದ – ಗಿಡ್ಡಿಯರ ಬಡ ಸಂಸಾರ, ಅವರ ದಿನಚರಿ, ಹಾಲಿಲ್ಲ-ಗೀಲಿಲ್ಲ, ಎಣ್ಣೆ-ಬೆಣ್ಣೆಗಳಿಲ್ಲದೇ ಮೊಲೆ ಹಾಲು-ಗಂಜಿಗಳ ಬಲದಿಂದ ಬೆಳೆದು ಗಟ್ಟಿಗನಾದ ಬೈರ, ಬಡವರಾದರೂ ಬೇಸರಿಸದೆ ಬದುಕಿದ ಕರಿಸಿದ್ದ- ಗಿಡ್ಡಿ ಇವು ಇಲ್ಲಿ ಪ್ರಮುಖವಾಗುತ್ತವೆ. ಎಲ್ಲಕ್ಕೂ ಮುಖ್ಯವಾಗಿ ಕವಿ ಸಾಮಾನ್ಯನೊಬ್ಬನ ಜೀವನವನ್ನು ಹೇಳಿರುವುದು ಗಮನಾರ್ಹ ಅಂಶ.

**ಕಥನ ಕವನಗಳಲ್ಲಿ ಕುವೆಂಪು ಶ್ರೀಸಾಮಾನ್ಯನಿಗೆ ಕೊಟ್ಟ ಗೌರವ ಬಹುಮುಖ್ಯ. ಕವನದ ವಸ್ತು ಅಸಾಮಾನ್ಯ ವ್ಯಕ್ತಿ – ವಸ್ತುವಾಗಿರಬೇಕೆಂಬ ವಾದವನ್ನು ತಳ್ಳಿಹಾಕಿ ಶ್ರೀಸಾಮಾನ್ಯರ ಬಗೆಗೆ ಸ್ಪಂದಿಸುವ ಕವಿ ಕುವೆಂಪು ಹರಿಹರ, ವಚನಕಾರರನ್ನು ನೆನಪಿಸುತ್ತಾರೆ. ಗೊಬ್ಬರದಂತಹ ಕವನಗಳನ್ನು ರಚಿಸಿದ ಕವಿ ಕರಿಸಿದ್ದನಂತಹ ಕವನ ರಚನೆಯಲ್ಲಿ 'ಬಡಜನರ ಜೀವದಲ್ಲಿ ಉಬ್ಬೆಗವ ಹುಟ್ಟಿಸುವ ಸಂಗತಿಗಳೇನಿಲ್ಲ ಎಂದೆಲ್ಲ' ಬೊಬ್ಬಿಡುವ ಜನರಿಗೆ ತಿಳಿಸಲು, ದಿಟದ ಕತೆಗಾಗಿ ಆಶಿಸುವ ಜನರಿಗಾಗಿ ಇಂಥ ಕವನ ರಚನೆಗೆ ತೊಡಗಿರುವುದಾಗಿ ಕವಿ ಹೇಳುತ್ತಾರೆ.**

ಕುವೆಂಪು ಅವರ 'ನಾಗಿ' ಕವನವು ಬಡಸಂಸಾರದ ಚಿತ್ರಣವನ್ನು ಮುಂದಿಡುತ್ತದೆ. ನಾಗಿ, ಮಾದ, ಮಾದಿ, ನಿಂಗ – ಇವರೆಲ್ಲ ಸಾಮಾನ್ಯರು. ಮಲತಾಯಿಯ ಶೋಷಣೆಗೆ ಸಿಕ್ಕ ನಾಗಿಯ ಬದುಕಿನ ದುರಂತ ಚಿತ್ರಣ ಇಲ್ಲಿದೆ. ಈ ಸಂದರ್ಭದಲ್ಲಿ ಕುವೆಂಪು ಅವರದೇ ಕಥೆಯಾದ 'ಸಾಲದ ಮಗು' ನೆನಪಿಗೆ ಬರುತ್ತದೆ.

೧೯೦ ಚೌಪದಿಗಳನ್ನುಳ್ಳ 'ಅಮಲನ ಕಥೆ' ಗೋವಿನ ಹಾಡಿನ ಮಟ್ಟಿನಲ್ಲಿ ರಚಿತವಾಗಿರುವ ಕಥನ ಕವನವಾಗಿದೆ. ಕವನದ ಮೊದಲ ಪದ್ಯವೇ ಹೇಳುವ

*ಬಡವನೊಬ್ಬನು ಇರುತ ಸುಖದಲಿ*
*ಮಡದಿ ಮಕ್ಕಳ ಕೂಡೆ ನಲಿಯುತ*
*ನುಡಿದ ಭಾಷೆಗೆ ಎರಡು ಬಗೆಯದೆ*
*ಪಡೆದನಚ್ಯುತ ಪದವಿಯ*
(ಪು. ೬೮೧, ಸಂ-೨, ಅಮಲನ ಕಥೆ)

ಇದು ಕವನದ ವಸ್ತು. ಈ ಕವನದಲ್ಲಿ ಸಾಮಾನ್ಯ ಮನುಷ್ಯನ ಸತ್ಯ, ಪ್ರಾಮಾಣಿಕ ಜೀವನ, ಆ ಮೂಲಕ ದೇವನ ಸಾಕ್ಷಾತ್ಕಾರ ಚಿತ್ರಿತಗೊಂಡಿದೆ. "ನಾನು ಕನ್ನಡದಲ್ಲಿ ಬರೆಯ ತೊಡಗಿದುದು ಶ್ರೀಯುತ ಕಸಿನ್ಸ್ ಅವರನ್ನು ಕಂಡ ಮೇಲೆಯೇ ಎಂಬುದು ಪೂರ್ತಿ ನಿಜವಲ್ಲ. ಅಮಲನ ಕಥೆಯನ್ನು ಅದಕ್ಕೆ ಮುಂಚೆಯೇ ೧೯೨೩ರಲ್ಲಿ ಬರೆದಿದ್ದೇನೆ" ಎಂಬ ಕುವೆಂಪು ಅವರು ಈ ನೀಳ್ಗವಿತೆ ರಚನೆ ಬಗ್ಗೆ ಹೇಳಿಕೊಂಡಿರುವುದನ್ನೇ ಇಲ್ಲಿ ಉಲ್ಲೇಖಿಸುವುದು ಔಚಿತ್ಯಪೂರ್ಣವೆನಿಸುತ್ತದೆ.

ಕುವೆಂಪು ಅವರ 'ಹಾಳೂರು' ನೀಳ್ಗವಿತೆ ಸರಳ ರಗಳೆಯಲ್ಲಿದೆ. ಈ ನೀಳ್ಗವಿತೆಯ ತುಂಬ ಹಳ್ಳಿಯ ಸುಂದರ ಬದುಕು, ಅದರ ಅವನತಿ, ಮಾನವನ ಮೋಸ, ನಗರದ ಅತಿಭೋಗ, ನಾಗರಿಕರೆನಿಸಿದವರ ಅಮಾನವೀಯ ವರ್ತನೆ ಮುಂತಾದ ಅಂಶಗಳು ತುಂಬಿಕೊಂಡಿವೆ.

*ಪುರವ ಸಿಂಗರಿಸಿದೊಡೆ ಬಡಜನಗಳೆಲ್ಲ*
*ಶೃಂಗಾರವನು ತಿಂದು ಜೀವಿಸುವುದಿಲ್ಲ!*
*ಹೊಟ್ಟೆತುಂಬಿದ ಮೇಲೆ ಕಣ್ತುಂಬಬೇಕು;*
*ಕೂಳಿದ್ದರಲ್ಲವೇ ಸೌಂದರ್ಯ ಬೇಕು ?*
*ಬಡಜನರು ಸಾಯುತಿರಲರಮನೆಗಳೇಕೆ ?*
*ಹಳ್ಳಿ ಹಾಳಾಗುತ್ತಿದೆ, ಪುರವೊಂದೆ ಸಾಕೆ;*
(ಪು. ೭೪೫, ಸಂ-೨, ಹಾಳೂರು)

ಕವಿಯ ಈ ಮಾತುಗಳು ಈ ಕವನದ ಸಾರ ಸಂಗ್ರಹದಂತಿದೆ. ಕವಿಯ ನಿಲುವು, ಧೋರಣೆಗಳು ಏನು ಎಂಬುದನ್ನೂ ಇವು ಸ್ಪಷ್ಟಪಡಿಸುತ್ತವೆ.

*ಸಿರಿಸುತರು ಕಾನೂನು ರಚಿಸುತಿಹರು*
*ಬಡವರದಕೊಳಗಾಗಿ ಗೋಳಾಡುತಿಹರು*
(ಪು. ೭೪೬, ಸಂ-೨, ಹಾಳೂರು)

ಸಿದ್ಧವ್ಯವಸ್ಥೆಯ ಭದ್ರ ಹಿಡಿತದಲ್ಲಿ ಸಿಲುಕಿ ಶತ ಶತಮಾನಗಳಿಂದ ನೊಂದ ಬೆಂದ ಜನರ ವಾಸ್ತವ ಸತ್ಯವನ್ನು ಈ ಸಾಲುಗಳು ಸ್ಪಷ್ಟಗೊಳಿಸುತ್ತವೆ. ಕಥನ ಕವನ, ನೀಳ್ಗವನಗಳಲ್ಲಿ ಕವಿಯು ಆಯ್ದುಕೊಂಡ ವಸ್ತು, ಧೋರಣೆ ಎಲ್ಲವೂ ಶ್ರೀಸಾಮಾನ್ಯರ ಪರವಾಗಿರುವುದು ಗಮನಿಸತಕ್ಕ ಅಂಶವಾಗಿದೆ.

**೪. ಇತರ ಕವನಗಳಲ್ಲಿ ಬಡತನದ ವಸ್ತು:** ಮೇಲೆ ವಿವರಿಸಿದ ಪ್ರಧಾನ ಕವನಗಳಷ್ಟೇ ಅಲ್ಲದೆ ಇತರ ಹಲವು ಕವನಗಳಲ್ಲಿ ಕುವೆಂಪು ಬಡವರ, ಶೋಷಿತರ, ದುರ್ಬಲರ, ಹಿಂದುಳಿದವರ ಪರವಾಗಿ ತಮ್ಮ ಭಾವನೆಗಳನ್ನು ಪ್ರಕಟಪಡಿಸಿದ್ದಾರೆ. ಆ ಇತರ ಕವನಗಳು ಇಂತಿವೆ : ಗೊಮ್ಮಟೇಶ್ವರ, ಕಾಳರಾತ್ರಿ, ಅವತಾರ, ಗಣೇಶಗಾಥಾ, ಪೂಜೆ, ಸಭ್ಯತಾದೇವತೆ, ಪ್ರಕೃತಿ ಉಪಾಸನೆ, ಆಶಾಮೂರ್ತಿ, ನೆಟ್ಟನೋಟ, ಮಂಜಣ್ಣ ಹೇಳಿದ ಸ್ಥಳಗತೆ, ಹಳ್ಳಿಯ ಹುಡುಗಿ, ಸಾಮಾನ್ಯತೆ ಭಗವಂತನ ರೀತಿ... ಈ ಕವನಗಳ ಪ್ರಧಾನೋದ್ದೇಶ ಬೇರೆಯೇ ಆಗಿದ್ದರೂ ಇಲ್ಲಿ ಆಂಶಿಕವಾಗಿ ಬಡವರ ಪರವಾದ ಧ್ವನಿ ಕೇಳಿಬರುತ್ತದೆ.

ಹೀಗೆ ಕುವೆಂಪು ಅವರ ಕವನಗಳ ಸಮಗ್ರ ಅಧ್ಯಯನದಿಂದ ಈಗಾಗಲೇ ತಿಳಿಸಿರುವ ಪ್ರಕೃತಿ, ವೈಚಾರಿಕತೆ, ಅಧ್ಯಾತ್ಮ – ಇವುಗಳನ್ನು ಅವರ ಕವನಗಳಲ್ಲಿ ನೋಡುವುದರ ಜೊತೆಗೆ ಅವರ ಮನಸ್ಸಿನ ಆಳದಲ್ಲಿ ಹುದುಗಿದ್ದ, ನಿತ್ಯ ನಿರಂತರವಾಗಿ ಅಂತರ್‌ವಾಹಿನಿಯಂತೆ ಹರಿದುಬಂದಿದ್ದ – ಸಾಮಾನ್ಯರ ಬಗೆಗಿನ ಅವರ ತೀವ್ರ ಕಾಳಜಿಯನ್ನು ಗುರುತಿಸಬಹುದು. ಇದನ್ನು ಇನ್ನೂ ಆಳವಾಗಿ ಅಧ್ಯಯನ ಮಾಡುವ ಅವಕಾಶವಿದೆ.

ಜನರ ಜೀವನಾಡಿಯಾಗಿರುವ ಜನಪದ ಸಾಹಿತ್ಯದಿಂದ ಹಿಡಿದು ಮಹಾಕವಿ ಕುವೆಂಪು ಅವರವರೆಗೂ ಬಡವರ ಪರವಾಗಿ ಸಾಹಿತ್ಯ ಸೃಷ್ಟಿಯಾಗಿರುವುದನ್ನು ಈ ಸಂದರ್ಭದಲ್ಲಿ ನೆನೆಯಬಹುದು. ಜನಪದಗೀತೆಯ ಒಂದು ಭಾಗದ ಉಲ್ಲೇಖದಿಂದ ಈ ಪ್ರಬಂಧವನ್ನು ಮುಗಿಸಬಹುದು :

*ಬಡವರು ಸತ್ತಾರೆ ಸುಡುವುದಕೆ ಸೌದಿಲ್ಲ*
*ಒಡಲ ಬೆಂಕೀಲಿ ಹೆಣಬೆಂದೊ – ದೇವರೆ*
*ಬಡವರಿಗೆ ಸಾವ ಕೊಡಬ್ಯಾಡ*
*ದೊಡ್ಡೋರ ಮಕ್ಕೋಗೆ ಬೆಲ್ಲ ಬಾಳೆಯ ಹಣ್ಣು*
*ಏನೂ ಇಲ್ಲದ ಬಡವೇಯ – ಮಕ್ಕೋಗೆ*
*ಹೆತ್ತಪ್ಪೆ ಬತ್ತ ಮೊಲೆಹಾಲು*

ಎಚ್. ಕೆ. ವೆಂಕಟೇಶ್
ಸಂಶೋಧಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,
ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

# ಬೇಕಿತ್ತೇ ಭಯೋತ್ಪಾದನೆ ತಡೆಗೆ ಈ ಕಾನೂನು

# ಪ್ರಿವೆನ್ಷನ್ ಆಫ್ ಮನಿ ಲಾಂಡರಿಂಗ್ ಆ್ಯಕ್ಟ್ - ೨೦೦೨



**ಭ**ಯೋತ್ಪಾದನೆಯು ಈಗ ಜಗತ್ತಿನ ಅತಿ ದೊಡ್ಡ ಶತ್ರುವಾಗಿದೆ. ಪಾಶ್ಚಿಮಾತ್ಯ ದೇಶಗಳಿಗೆ ಅಲ್‌ಖೈದಾ ಮತ್ತು ಬಿನ್‌ಲಾಡನ್, ಶ್ರೀಲಂಕಾಗೆ ಎಲ್.ಟಿ.ಟಿ.ಈ., ಭಾರತಕ್ಕೆ ಪಾಕ್ ಉಗ್ರಗಾಮಿಗಳು ಶತ್ರುಗಳಾಗಿದ್ದಾರೆ. ಇದರ ಜೊತೆಗೆ ಅಮೆರಿಕಾದ ಯುದ್ಧೋತ್ಸಾಹ ಹಾಗೂ ಅದರ ಸ್ವಾರ್ಥ ಮತ್ತು ದುರಾಕ್ರಮಣ ನೀತಿಗಳು ಸಹ ವಿಶ್ವದೆಲ್ಲೆಡೆ ಭಯೋತ್ಪಾದನೆ ಹೆಚ್ಚಾಗಲು ಕಾರಣವಾಗಿವೆ. ಈ ಭಯೋತ್ಪಾದಕರು ತಮಗೆ ಬೇಕಾಗುವ ಹಣವನ್ನು ಹೊಂದಿಸಿಕೊಳ್ಳುವ ಮಾರ್ಗಗಳಲ್ಲಿ ಪ್ರಮುಖವಾದವು ಮಾದಕ ದ್ರವ್ಯಗಳ ಕಳ್ಳಸಾಗಣೆ, ಖೋಟಾ ನೋಟು ಚಲಾವಣೆ, ಕೊಲೆ, ಸುಲಿಗೆ, ಅಪಹರಣ, ಇತ್ಯಾದಿ. ಹೀಗಾಗಿ ಅಕ್ರಮವಾಗಿ ಸಂಪಾದನೆ ಮಾಡಿದ ಹಣವನ್ನು ಸಕ್ರಮಗೊಳಿಸುವುದು ಹಾಗೂ ಭಯೋತ್ಪಾದಕರಿಗೆ ಹಣಕಾಸಿನ ಸಹಾಯ ಮಾಡುವುದು ವಿಶ್ವಸಮುದಾಯಕ್ಕೆ ಹಾಗೂ ವಿಶ್ವದ ಆರ್ಥಿಕ ವ್ಯವಸ್ಥೆಗೆ ಒಂದು ದೊಡ್ಡ ಬೆದರಿಕೆಯಾಗಿದೆ. ಹಾಗಾಗಿ ಜಗತ್ತಿನ ಎಲ್ಲಾ ದೇಶಗಳಲ್ಲಿ ಈಗ ಭಯೋತ್ಪಾದನೆ ನಿರ್ಮೂಲನೆ ಅತಿ ಮುಖ್ಯ ಕೆಲಸಗಳಲ್ಲಿ ಒಂದು.

ಹಾಗಾಗಿ, ಅಮೆರಿಕಾ ಹಾಗೂ ಅಮೆರಿಕಾದ ಕೈಗೊಂಬೆಗಳಾದ ವಿಶ್ವ ಸಂಸ್ಥೆ ಮತ್ತು ಐ.ಎಮ್.ಎಫ್.ಗಳು ಭಯೋತ್ಪಾದನೆಯನ್ನು ಎದುರಿಸಲು ಒಂದು ಕಾನೂನು ತರಲು ಎಲ್ಲಾ ದೇಶಗಳ ಮೇಲೆ ಒತ್ತಡ ಹೇರ ತೊಡಗಿದವು. ಏಕೆಂದರೆ, ಭಯೋತ್ಪಾದಕರನ್ನು ಸದೆಬಡೆಯಲು ಅವರಿಗೆ ತಲುಪುವ ಹಣಕಾಸು, ಆಸ್ತಿ ಮುಂತಾದವುಗಳನ್ನು ತಡೆದರೆ ಭಯೋತ್ಪಾದನೆಯ ಮೇಲೆ ಅರ್ಧದಷ್ಟು ಹತೋಟಿ ಸಾಧಿಸಿದ ಹಾಗೆ.

೧೯೮೯ರಲ್ಲಿ ಜಿ-೭ ಗುಂಪಿನ ಹಾಗೂ ಯೂರೋಪಿಯನ್ ರಾಷ್ಟ್ರಗಳು ಸೇರಿ ಫೈನಾನ್ಷಿಯಲ್ ಆ್ಯಕ್ಷನ್ ಟಾಸ್ಕ್ ಫೋರ್ಸ್ (ಎಫ್.ಎ.ಟಿ.ಎಫ್.) ಎನ್ನುವ ಸಂಸ್ಥೆಯನ್ನು ಹುಟ್ಟುಹಾಕಿದವು. ೧೯೯೦ರಲ್ಲಿ ಈ ಸಂಸ್ಥೆ ನೀಡಿದ ೪೦ ಸಲಹೆಗಳು (ಕಾಲಕಾಲಕ್ಕೆ ತಕ್ಕಂತೆ ಬದಲಾವಣೆ ಹೊಂದಿವೆ) ಮತ್ತು ಆನಂತರ ನೀಡಿದ ೯ ವಿಶೇಷ ಸಲಹೆಗಳು ಭಯೋತ್ಪಾದಕರು ಹಣ ಹೊಂದಿಸುವ, ಸಾಗಿಸುವ ಹೊಸ ಹೊಸ ವಿಧಾನಗಳನ್ನು ಸದಸ್ಯ ರಾಷ್ಟ್ರಗಳ ಗಮನಕ್ಕೆ ತರುತ್ತವೆ. ಈ ೪೦ ಸಲಹೆಗಳು ಅಂತರರಾಷ್ಟ್ರೀಯ ಮಾನಕಗಳಾಗಿವೆ. ವಿಶ್ವದ ೧೫೦ಕ್ಕಿಂತ ಹೆಚ್ಚಿನ ರಾಷ್ಟ್ರಗಳು ಈ ಕಾನೂನನ್ನು ಜಾರಿಗೆ ತರಲು ಕ್ರಮ ಕೈಗೊಳ್ಳುತ್ತಿವೆ. ಭಾರತವು ಫೈನಾನ್ಷಿಯಲ್ ಆ್ಯಕ್ಷನ್ ಟಾಸ್ಕ್ ಫೋರ್ಸ್‌ನ ಸದಸ್ಯತ್ವ ಪಡೆದಿಲ್ಲ. ಆದರೆ ಈ ಕಾನೂನು ತರಲು ಅದಕ್ಕೆ ಆ ಸಂಸ್ಥೆಯ ೪೦ ಸಲಹೆಗಳು ಆಧಾರವಾಗಿವೆ.-

ಭಯೋತ್ಪಾದನೆ ತಡೆಗಟ್ಟಲು ನಮ್ಮ ದೇಶದಲ್ಲಿಯೂ ಸಹ ಒಂದು ಕಾಯಿದೆ ಜಾರಿಗೆ ಬಂದಿದೆ. ಅದೇ 'ಪ್ರಿವೆನ್ಷನ್ ಆಫ್ ಮನಿ ಲಾಂಡ್ರಿಂಗ್ ಆ್ಯಕ್ಟ್ - ೨೦೦೨' ಎಂದರೆ ಅಕ್ರಮವಾಗಿ ಸಂಪಾದನೆ ಮಾಡಿದ ಹಣವನ್ನು ಸಕ್ರಮಗೊಳಿಸುವ ವಿಧಾನವನ್ನು ತಡೆಗಟ್ಟುವುದು ಇದರ ಉದ್ದೇಶವಾಗಿದೆ. ಕಾಯಿದೆ ೨೦೦೨ರ ಜುಲೈ ೧ರಿಂದ ಜಾರಿಗೆ ಬಂದಿದೆ. ಅದಕ್ಕೂ ಮೊದಲು ಇದರ ಮಸೂದೆಯನ್ನು ಆಗಿನ ವಿತ್ತ ಸಚಿವ ಯಶವಂತ ಸಿನ್ಹಾ ೪-೮-೧೯೯೮ರಲ್ಲಿ ಲೋಕಸಭೆಯಲ್ಲಿ ಮಂಡಿಸಿದ್ದರು. ಆದರೆ ಅದರಲ್ಲಿ ಸಾಕಷ್ಟು ನ್ಯೂನತೆಗಳಿದ್ದದ್ದರಿಂದ ಹಲವಾರು ಸಂಸದರು ಈ ಮಸೂದೆಯು ಟಾಡಾ ಕಾಯಿದೆಗಿಂತಲೂ ಭಯಾನಕವೆಂದು ವಿರೋಧಿಸಿದರು. ಈಗ ಇದರಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಟಾಡಾವನ್ನು ಭಯೋತ್ಪಾದಕರ ವಿರುದ್ಧ ಬಳಸುವುದಕ್ಕಿಂತಲೂ ಹೆಚ್ಚಾಗಿ ಅದನ್ನು ಇತರರ ಮೇಲೆ ದುರ್ಬಳಕೆ ಮಾಡಲಾಯಿತು. ಟಾಡಾ ಕಾಯಿದೆ ಈಗ ಇಲ್ಲ.

ಕೆಳಕಂಡ ಅಪರಾಧಗಳ ಮೂಲಕ ಯಾರೇ ಆಗಲಿ ಹಣ ಅಥವಾ ಆಸ್ತಿ ಸಂಪಾದಿಸಿದ್ದರೆ ಈ ಹೊಸ ಕಾಯಿದೆಯ ಪ್ರಕಾರ ಅವರ ಹಣ ಮತ್ತು ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಂಡು ಶಿಕ್ಷೆ ವಿಧಿಸಬಹುದಾಗಿದೆ.

೧. ಭಾರತ ಸರ್ಕಾರದ ವಿರುದ್ಧ ಅಥವಾ ರಾಜ್ಯಗಳ ವಿರುದ್ಧ ಯುದ್ಧ ಅಥವಾ ಪಿತೂರಿ ನಡೆಸುವುದು.
೨. ಮಾದಕ ದ್ರವ್ಯಗಳ ಕಳ್ಳಸಾಗಣೆ. ಅವುಗಳಿಗೆ ಹಣಕಾಸಿನ ಸಹಾಯ ಒದಗಿಸುವುದು.
೩. ಕೊಲೆ ಮಾಡುವುದು ಇಲ್ಲವೇ, ಕೊಲೆಗೆ ಪ್ರಯತ್ನಿಸುವುದು ಅಥವಾ ಇಂತಹ ಕಾರ್ಯಗಳಿಗೆ ಪ್ರಚೋದನೆ ನೀಡುವುದು.
೪. ಆಸ್ತಿಪಾಸ್ತಿಗಳಿಗೆ ಧಕ್ಕೆಯುಂಟುಮಾಡುವುದು ಅಥವಾ ಇನ್ನಿತರೆ ಕಾನೂನುಬಾಹಿರ ಚಟುವಟಿಕೆ ನಡೆಸುವುದು.
೫. ಹಣಕ್ಕಾಗಿ ಅಪಹರಣ ನಡೆಸುವುದು. ಸುಲಿಗೆ, ದರೋಡೆ, ಡಕಾಯಿತಿ ಇತ್ಯಾದಿ.
೬. ನಕಲಿ ದಾಖಲೆಗಳನ್ನು ಸೃಷ್ಟಿಸಿ ಆಸ್ತಿ ಲಪಟಾಯಿಸುವುದು ಅಥವಾ ನಕಲಿ ಮರಣಪತ್ರ ಅಥವಾ ಅಧಿಕಾರ ಪತ್ರ ಸೃಷ್ಟಿಸಿ ಹಣ ಆಸ್ತಿ ಕಬಳಿಸುವುದು.
೭. ಖೋಟಾನೋಟುಗಳ ಚಲಾವಣೆ.
೮. ಬಂದೂಕು ಮುಂತಾದ ಆಯುಧಗಳನ್ನು ಕಾನೂನುಬಾಹಿರವಾಗಿ ಹೊಂದುವುದು. ಅವುಗಳ ಉತ್ಪಾದನೆ, ಮಾರಾಟ, ಸಾಗಣಿಕೆ ಮಾಡುವುದು, ಅನಧಿಕೃತ ವ್ಯಕ್ತಿಗಳಿಂದ ಆಯುಧಗಳನ್ನು ಖರೀದಿ ಮಾಡುವುದು.
೯. ಕೆಲ ಸಸ್ಯ ಸಂಕುಲಗಳು ಹಾಗೂ ವನ್ಯಮೃಗಗಳು, ಅವುಗಳ ಚರ್ಮ, ಕೊಂಬು, ಮೊದಲಾದ ವಸ್ತುಗಳನ್ನು ಕಾನೂನುಬಾಹಿರವಾಗಿ ಹೊಂದುವುದು, ಮಾರಾಟ ಮಾಡುವುದು ಇತ್ಯಾದಿ.
೧೦. ವೇಶ್ಯಾವೃತ್ತಿಯನ್ನು ನಡೆಸುವುದು, ಪ್ರಚೋದಿಸುವುದು, ಪ್ರೋತ್ಸಾಹಿಸುವುದು.
೧೧. ಸಾರ್ವಜನಿಕ ಸೇವೆಯಲ್ಲಿರುವ ವ್ಯಕ್ತಿಗಳು ಲಂಚರುಷುವತ್ತುಗಳನ್ನು ಸ್ವೀಕರಿಸುವುದು.

ಈ ಕಾಯಿದೆಯ ಪ್ರಕಾರ ಕೇವಲ ವ್ಯಕ್ತಿಗಳ ಮೇಲೆ ಮಾತ್ರ ಕ್ರಮ ತೆಗೆದುಕೊಳ್ಳಬಹುದು. ಅಂದರೆ, ಅಕಸ್ಮಾತ್ ಅಪರಾಧವನ್ನು ಪಾಲುದಾರಿಕೆ ಸಂಸ್ಥೆ ನಡೆಸಿದ್ದರೆ ಅದರ ಪಾಲುದಾರರ ವಿರುದ್ಧ ಅಥವಾ ಲಿಮಿಟೆಡ್ ಕಂಪನಿ ಅಪರಾಧ ನಡೆಸಿದ್ದರೆ ಅದರ ನಿರ್ದೇಶಕರ ವಿರುದ್ಧ ಕ್ರಮ ತೆಗೆದುಕೊಳ್ಳಲಾಗುತ್ತದೆ. ಅಪರಾಧವು ಸಾಬೀತಾದಲ್ಲಿ ಕನಿಷ್ಠ ಮೂರು

ಜಿ. ಎಸ್. ಶ್ರೀನಾಥ

ವರ್ಷ ಕಠಿಣ ಶಿಕ್ಷೆ. ಗರಿಷ್ಠ ಏಳು ವರ್ಷ ಶಿಕ್ಷೆ, ಜೊತೆಗೆ ೫ ಲಕ್ಷ ರೂಪಾಯಿವರೆಗೆ ದಂಡ. ಅಕಸ್ಮಾತ್ ಅಪರಾಧ ಮಾದಕ ದ್ರವ್ಯಗಳಿಗೆ ಸಂಬಂಧಪಟ್ಟಲ್ಲಿ ಗರಿಷ್ಠ ೧೦ ವರ್ಷ ಶಿಕ್ಷೆ.

ಈ ಕಾನೂನಿನನ್ವಯ ಯಾವುದೇ ವ್ಯಕ್ತಿಯ ವಿರುದ್ಧ ಕ್ರಮ ತೆಗೆದುಕೊಳ್ಳುವ ಮೊದಲು ಅಧಿಕಾರಿಗಳಿಗೆ ಆ ವ್ಯಕ್ತಿ ಮೇಲೆ ತಿಳಿಸಿದ ಅಪರಾಧವನ್ನು ಎಸಗಿ ಹಣ ಸಂಪಾದಿಸಿದ್ದಾನೆ ಹಾಗೂ ಆ ಅಪರಾಧವನ್ನು ಮುಚ್ಚಿಡಲು ಹವಣಿಸುತ್ತಿದ್ದಾನೆಂದು ಮನವರಿಕೆಯಾಗಿರಬೇಕು. ಹಾಗೂ ಅಧಿಕಾರಿಗಳು ಈ ಎಲ್ಲ ಅಂಶಗಳನ್ನು ವಿವರವಾಗಿ ತಕ್ಷಣವೇ ಬರೆದು ನ್ಯಾಯಾಲಯದ ಗಮನಕ್ಕೆ ತರಬೇಕು. ಅಧಿಕಾರಿಗಳು ನಡೆಸುವ ತನಿಖೆ, ಪರಿಶೀಲನೆ ಮತ್ತು ಮುಟ್ಟುಗೋಲು ಹಾಕಿ ಎಲ್ಲಾ ದಾಖಲೆಗಳ ಹಾಗೂ ಆಸ್ತಿಗಳ ಮೇಲೆ ಕ್ರಮಸಂಖ್ಯೆ ನಮೂದಿಸಿ ಎಲ್ಲ ವಿವರಗಳನ್ನು ತಕ್ಷಣವೇ ಬರೆದು ಸಲ್ಲಿಸಬೇಕು.

**ಬ್ಯಾಂಕುಗಳು ಹಾಗೂ ಹಣಕಾಸು ಸಂಸ್ಥೆಗಳ ಕರ್ತವ್ಯ**

* ಬ್ಯಾಂಕ್ ಖಾತೆ ತೆರೆಯಲು ಬರುವ ಹೊಸ ಗ್ರಾಹಕರ ಬಗ್ಗೆ ಸಂಪೂರ್ಣವಾಗಿ ಮಾಹಿತಿ ಪಡೆದಿರಬೇಕು.
* ಅಕ್ರಮವಾಗಿ ಸಂಪಾದನೆ ಮಾಡಿದ ಹಣದಲ್ಲಿ ಆಸ್ತಿಯನ್ನು ಖರೀದಿಸಿದ್ದಲ್ಲಿ, ಹಾಗೂ ಆ ಆಸ್ತಿಯನ್ನು ಯಾವುದೇ ಸಾಲಕ್ಕಾಗಿ ಬ್ಯಾಂಕುಗಳು ಒತ್ತೆಯಿಟ್ಟುಕೊಂಡಿದ್ದಲ್ಲಿ, ನಂತರ ಆ ಆಸ್ತಿಯನ್ನು ಕೇಂದ್ರ ಸರ್ಕಾರ ಮುಟ್ಟುಗೋಲು ಹಾಕಿಕೊಂಡರೆ ಆ ಆಸ್ತಿಯು ಈ ಎಲ್ಲ ಋಣಗಳಿಂದ ಮುಕ್ತವಾಗಿರುತ್ತದೆ. ಅಂದರೆ ಬ್ಯಾಂಕಿಗೆ ಆ ಆಸ್ತಿಯ ಮೇಲೆ ಯಾವುದೇ ಹಕ್ಕುಗಳಿರುವುದಿಲ್ಲ. ಮತ್ತು ಯಾವ ಸಾಲಕ್ಕಾಗಿ ಈ ಆಸ್ತಿಯನ್ನು ಒತ್ತೆಯಿಡಲಾಗಿತ್ತೋ ಆ ಸಾಲವು ಈಗ ಖಾತ್ರಿಯಿಲ್ಲದ ಸಾಲ ವಾಗುತ್ತದೆ. ಆದ್ದರಿಂದ ಸಾಲ ಕೊಡುವಾಗ ಎಚ್ಚರಿಕೆಯಿಂದ ವ್ಯವಹರಿಸಬೇಕು.
* ಗ್ರಾಹಕರ ಯಾವುದೇ ವ್ಯವಹಾರಗಳ ಬಗ್ಗೆ ಅನುಮಾನ ಬಂದರೆ ಎಲ್ಲ ವಿವರ ಗಳನ್ನು ರಿಸರ್ವ್ ಬ್ಯಾಂಕಿಗೆ, ಸೆಬಿಗೆ ಹಾಗೂ ಡೈರೆಕ್ಟರ್ ಆಫ್ ಎನ್‌ಫೋರ್ಸ್‌ಮೆಂಟ್ ಅವರಿಗೆ ತಿಳಿಸಬೇಕು.
* ನಿಮ್ಮ ಗ್ರಾಹಕರ ಪರಿಚಯ ನಿಮಗಿದೆಯೇ? ಬಾಸೆಲ್ ಕಮಿಟಿಯು ಎಲ್ಲಾ ಬ್ಯಾಂಕುಗಳಿಗೆ ತಮ್ಮ ಗ್ರಾಹಕರ ಪರಿಚಯ ಮಾಡಿಕೊಳ್ಳಲು ಸೂಕ್ತ ಸಲಹೆಗಳನ್ನು ಅಕ್ಟೋಬರ್ ೨೦೦೧ರಲ್ಲೇ ಕೊಟ್ಟಿದೆ. ಜೊತೆಗೆ ಎಫ್.ಎ.ಟಿ.ಎಫ್.ನ ೪೦ ಸಲಹೆ ಗಳಲ್ಲಿ ೫ರಿಂದ೧೧ರವರೆಗಿನ ಸಲಹೆಗಳು ಸಹ ಇದನ್ನೇ ಹೇಳುತ್ತವೆ. ಇದಕ್ಕಿಟ್ಟಿರುವ ಹೆಸರು ಸಿ.ಡಿ.ಡಿ. (ಕಸ್ಟಮರ್ ಡ್ಯೂ ಡಿಲಿಜೆನ್ಸ್). ಭಾರತೀಯ ರಿಸರ್ವ್ ಬ್ಯಾಂಕ್ ಸಹ ಇದನ್ನು ಪಾಲಿಸಲು ಎಲ್ಲಾ ಬ್ಯಾಂಕುಗಳಿಗೆ ಸೂಚನೆ ಕಳುಹಿಸಿದೆ.

**ಸಾರ್ವಜನಿಕರು ತೆಗೆದುಕೊಳ್ಳಬೇಕಾದ ಎಚ್ಚರಿಕೆಗಳು**

* ಅಪರಿಚಿತ ವ್ಯಕ್ತಿಗಳು ಬ್ಯಾಂಕ್ ಖಾತೆ ತೆರೆಯಲು ಸಾರ್ವಜನಿಕರು ಯಾವುದೇ ರೀತಿಯ ಸಹಾಯ ಮಾಡಕೂಡದು.
* ಅಪರಿಚಿತರಿಗೆ ಹಾಗೂ ಅಪರಿಚಿತ ಧರ್ಮಾರ್ಥ ಸಂಸ್ಥೆಗಳಿಗೆ ದೇಣಿಗೆ ಕೊಡುವ ಮೊದಲು ಎಚ್ಚರಿಕೆಯಿರಬೇಕು. ವಿದೇಶದಲ್ಲಿ ಒಂದು ಧರ್ಮಾರ್ಥ ಸಂಸ್ಥೆಯೊಂದು ದೇಣಿಗೆ ಪಡೆಯುತ್ತಿತ್ತು. ಅದರ ಉದ್ದೇಶ ವಿಧವೆಯರಿಗೆ ಹಾಗೂ ಅನಾಥರಿಗೆ ಸಹಾಯ ಮಾಡುವುದಾಗಿತ್ತು. ಆದರೆ ಅವರಿಗಾಗಿ ಇತ್ತ ನೆರವು ತಲುಪುತ್ತಿದ್ದುದು ಅಲ್ ಖೈದಾಗೆ ಹಾಗೂ ಒಸಾಮಾ ಬಿನ್ ಲಾಡನ್‌ಗೆ.
* ಅಂಚೆ ಅಥವಾ ಕೊರಿಯರ್ ಮೂಲಕ ದೇಣಿಗೆ ನೀಡಲು ಬೇಡಿದರೆ ಅವರು ಕಳುಹಿಸುವ ಬಣ್ಣ ಬಣ್ಣದ ಚಿತ್ರಗಳಿಗೆ ಅಥವಾ ವಾಕ್ಯಗಳಿಗೆ ಸಾರ್ವಜನಿಕರು ಮರುಳಾಗಕೂಡದು. ಈಗಾಗಲೇ ಸಂಘಟನೆಯೊಂದು ಅಸ್ತಿತ್ವದಲ್ಲೇ ಇಲ್ಲದ ಮಕ್ಕಳ ಚಿತ್ರಗಳನ್ನು ಅಚ್ಚುಹಾಕಿಸಿ ಸಾರ್ವಜನಿಕರಿಂದ ಹಣ ಸಂಗ್ರಹಿಸಿ ಅದನ್ನು ಅನಾಥ ಮಕ್ಕಳ ಬದಲು ಅಲ್ ಖೈದಾಗೆ ತಲುಪಿಸುತ್ತಿತ್ತು.
* ವಿದೇಶ ಪ್ರಯಾಣದ ಸಮಯದಲ್ಲಿ ಹೆಚ್ಚು ಹಣ ತೆಗೆದುಕೊಂಡು ಹೋಗಕೂಡದು. ಈ ಹಣವನ್ನು ಸರಕಾರ ಮುಟ್ಟುಗೋಲು ಹಾಕಿಕೊಳ್ಳಬಹುದು ಅಥವಾ ಅಧಿಕ ವಿಚಾರಣೆಯನ್ನು ಎದುರಿಸಬೇಕಾಗಬಹುದು.
* ಸಾರ್ವಜನಿಕರೇನಾದರೂ ಗೊತ್ತಿಲ್ಲದೆ ಭಯೋತ್ಪಾದನಾ ಸಂಘಟನೆಗಳ ಸಂಪರ್ಕ ಹೊಂದಿದ್ದಲ್ಲಿ (ಅಥವಾ ಹಣಕಾಸಿನ ನೆರವು ನೀಡುತ್ತಿದ್ದಲ್ಲಿ) ಕೂಡಲೇ ನಿಲ್ಲಿಸಬೇಕು. ಜೊತೆಗೆ ಅಂಥ ಸಂಘಟನೆಗಳ ಸಂಪರ್ಕ ಕಡಿದುಕೊಳ್ಳಬೇಕು.

**ಎಫ್. ಎ. ಟಿ. ಎಫ್. ಇತರೆ ಸೂಚನೆಗಳು**

* ಹೆಚ್ಚು ಮೌಲ್ಯದ, ಅಂದರೆ ೧೦೦೦ ಮತ್ತು ೫೦೦ ರೂಪಾಯಿ ನೋಟುಗಳನ್ನು ಚಲಾವಣೆಯಿಂದ ಹಿಂತೆಗೆದುಕೊಳ್ಳುವುದು.
* ಅಂಚೆ ಅಥವಾ ಕೊರಿಯರ್ ಮೂಲಕ ಹಣ ಕಳುಹಿಸುವವರ ಮೇಲೆ ಕ್ರಮ ತೆಗೆದುಕೊಳ್ಳಬೇಕು.
* ಲಾಭೋದ್ದೇಶವಿಲ್ಲದೆ ಕೆಲಸ ಮಾಡುವ ಸಂಸ್ಥೆಗಳ (ಎನ್. ಜಿ. ಓ.) ಹಣಕಾಸಿನ ಬಳಕೆಯ ಮೇಲೆ ಹಾಗೂ ರಿಯಲ್ ಎಸ್ಟೇಟ್ ಏಜೆಂಟರುಗಳು ಮತ್ತು ಜೂಜುಕಟ್ಟೆಗಳ (ಕ್ಯಾಸಿನೋ)ವ್ಯವಹಾರಗಳ ಮೇಲೆ ವಿಶೇಷ ಗಮನವಿಡಬೇಕು.
* ವಕೀಲರು, ನೋಟರಿಗಳು, ಲೆಕ್ಕಪರಿಶೋಧಕರು, ಬೆಲೆಬಾಳುವ (ಚಿನ್ನ, ಬೆಳ್ಳಿ, ವಜ್ರ ಇತ್ಯಾದಿ) ವಸ್ತುಗಳನ್ನು ಮಾರಾಟ ಮಾಡುವವರು ಮೊದಲಾದವರು ತಮ್ಮ ಗ್ರಾಹಕರ ಯಾವುದಾದರೂ ವಹಿವಾಟಿನ ಬಗ್ಗೆ ಅನುಮಾನ ಬಂದಲ್ಲಿ ಅದನ್ನು ಸಂಬಂಧಪಟ್ಟ ಇಲಾಖೆಗೆ ಕೂಡಲೇ ತಿಳಿಸುವುದು.

**ಆದರೆ ಈ ಕಾನೂನು ನಮ್ಮ ದೇಶದಲ್ಲಿ ಸರಿಯಾಗಿ ಜಾರಿಗೆ ಬರುವ ಸಾಧ್ಯತೆಗಳು ಅಷ್ಟಕಷ್ಟೆ. ಏಕೆಂದರೆ,**

* ಈಗಾಗಲೇ ಚಾಲ್ತಿಯಲ್ಲಿರುವ ಕಾನೂನುಗಳಲ್ಲಿ ನಮೂದಿಸಿರುವ ಅಪರಾಧ ಗಳನ್ನೇ ಈ ಹೊಸ ಕಾನೂನಿನಡಿ ತಂದಿದ್ದಾರೆ. ಆದರೆ ಅಪರಾಧಗಳನ್ನು ತಡೆಯಲು ಈಗಾಗಲೇ ಇರುವ ಕಾನೂನಿನಡಿ ಸಾಧ್ಯವಿದ್ದರೂ ಅಪರಾಧಗಳನ್ನು ಗ್ರಹಿಸಲಾಗದ ಸರ್ಕಾರ ಈ ಹೊಸ ಕಾನೂನಿನಡಿ ಕ್ರಮ ತೆಗೆದುಕೊಳ್ಳುವುದನ್ನು ನಿರೀಕ್ಷಿಸುವುದು ಕೇವಲ ಒಂದು ಭ್ರಮೆ.
* ಕೇವಲ ಬೆರಳೆಣಿಕೆಯಷ್ಟು ಮಂದಿಯನ್ನು ಬಿಟ್ಟರೆ ಮಿಕ್ಕವರೆಲ್ಲಾ ಸಾರ್ವಜನಿಕ ರಂಗದಲ್ಲಿ ಅಡಿಯಿಂದ ಮುಡಿಯವರೆಗೆ ಲಂಚ ತೆಗೆದುಕೊಳ್ಳುವವರೇ. ಹಾಗಾಗಿ ಸಾರ್ವಜನಿಕ ಸೇವೆಯಲ್ಲಿರುವವರು ಲಂಚ ತೆಗೆದುಕೊಂಡರೆ ಈ ಕಾನೂನಿನಡಿ ಶಿಕ್ಷೆಗೆ ಗುರಿಯಾಗುವುದು ದೂರದ ಮಾತು.
* ನ್ಯಾಯ ವಿತರಣೆಯಲ್ಲಿ ಅತಿಯಾದ ವಿಳಂಬ ನಮ್ಮ ದೇಶದ ನ್ಯಾಯಾಂಗ ವ್ಯವಸ್ಥೆಯ ಬಹು ದೊಡ್ಡ ದೋಷ. ಇದರಿಂದ ನ್ಯಾಯ ಸಿಗಬೇಕಾದ ವ್ಯಕ್ತಿಗಳಿಗೆ ಅನ್ಯಾಯ ಎಸಗಿದಂತಾಗುತ್ತದೆ. ಧನಬಲವಿದ್ದವರು ನ್ಯಾಯಾಲಯದಿಂದ ತಮಗೆ ಬೇಕಾದಂತೆ ನ್ಯಾಯ ಪಡೆಯಲು ಸಾಧ್ಯವಿದೆ.
* ಎಫ್.ಎ.ಟಿ.ಎಫ್. ಹಾಗೂ ರಿಸರ್ವ್ ಬ್ಯಾಂಕಿನ ಸಲಹೆಯಂತೆ ಬ್ಯಾಂಕುಗಳು ಸಂಶಯವಿದ್ದಲ್ಲಿ ಗ್ರಾಹಕರ ಎಲ್ಲಾ ವಿವರಗಳನ್ನು ಸಂಬಂಧಪಟ್ಟ ಇಲಾಖೆಗಳಿಗೆ ತಿಳಿಸಬೇಕು. ಆನಂತರ ಅವು ತನಿಖೆ ಮಾಡಬೇಕು ಎನ್ನುವುದರಲ್ಲೂ ಅರ್ಥವಿಲ್ಲ. ಏಕೆಂದರೆ, ೧೦೦ ಕೋಟಿಗಿಂತಲೂ ಹೆಚ್ಚು ಜನಸಂಖ್ಯೆ ಇರುವ ದೇಶದಲ್ಲಿ ಇದು ಸಾಧ್ಯವೇ? ಅಷ್ಟೆಲ್ಲ ಪರೀಕ್ಷಿಸಲು ಸಂಬಂಧಪಟ್ಟ ಇಲಾಖೆಗಳಲ್ಲಿ ತಕ್ಕ ಅನುಕೂಲಗಳಿವೆಯೇ?
* ಸ್ವಿಸ್ ಬ್ಯಾಂಕುಗಳು ಗೌಪ್ಯತೆಗೆ ಹೆಸರುವಾಸಿ. ಹಾಗಾಗಿ ಬಹಳಷ್ಟು ಮಂದಿ ಕಪ್ಪು ಹಣವುಳ್ಳವರಿಗೆ ಇದು ಅಚ್ಚುಮೆಚ್ಚಿನ ಸ್ಥಳವಾಗಿದೆ. ಈ ಬಗ್ಗೆ ಎಫ್. ಎ. ಟಿ. ಎಫ್. ಕಾರ್ಯದರ್ಶಿಗಳನ್ನು ಕೇಳಿದರೆ ಅವರು ಸ್ವಿಡ್ಜರ್‌ಲ್ಯಾಂಡ್ ಬ್ಯಾಂಕುಗಳು ಅನುಸರಿಸುವ ನೀತಿಗಳಿಗೂ ನಮ್ಮ ನೀತಿಗಳಿಗೂ ವ್ಯತ್ಯಾಸವಿದೆ ಎಂದು ತಿಪ್ಪೆ ಸಾರಿಸುವ ಉತ್ತರ ಕೊಡುತ್ತಾರೆ. ಅಂದರೆ, ಈ ಕಾನೂನು ಕೇವಲ ಕಾಗದದ ಮೇಲಷ್ಟೇ ಇದ್ದರೆ ಸಾಕು ಎನ್ನುವ ಭಾವನೆ ಅವರಿಗಿರಬಹುದು.
* ಅಮೆರಿಕಾ ಮತ್ತು ಅಮೆರಿಕಾದ ಬೇಹುಗಾರಿಕಾ ಸಂಸ್ಥೆ ಸಿ. ಐ. ಎ. ಮಾಡುವಷ್ಟು ಭಯೋತ್ಪಾದನೆಯನ್ನು ಹಾಗೂ ಅಪರಾಧಗಳನ್ನು ಬೇರೆ ಯಾರೂ ಮಾಡಲು ಸಾಧ್ಯವಿಲ್ಲ. ಹಾಗೆಂದಾಕ್ಷಣ ಅಮೆರಿಕಾದ ಮೇಲೆ ಹಾಗೂ ಅದರ ಚೇಲಾ ದೇಶಗಳ/ಸಂಸ್ಥೆಗಳ ಮೇಲೆ ಕ್ರಮ ತೆಗೆದುಕೊಳ್ಳಲು ಯಾರಿಗಾದರೂ ಸಾಧ್ಯವೇ?

ಯಾವ ದೇಶದಲ್ಲಿಯೇ ಆಗಲೀ ಶಾಸಕಾಂಗ, ನ್ಯಾಯಾಂಗ ಹಾಗೂ ಕಾರ್ಯಾಂಗಗಳಲ್ಲಿ ಯಾವುದಾದರೂ ಅಂಗ ಸರಿಯಾಗಿ ಕೆಲಸ ನಿರ್ವಹಿಸದಿದ್ದರೆ ಒಂದು ಕಾನೂನಲ್ಲ, ಇನ್ನೂ ನೂರು ಕಾನೂನುಗಳು ಬಂದರೂ ಅವುಗಳ ಉದ್ದೇಶ ಸಫಲವಾಗುವುದಿಲ್ಲ.

ಜಿ. ಎಸ್. ತ್ರೀನಾಥ
ಸಂ. ೧೦೮, ೩ನೇ ಅಡ್ಡರಸ್ತೆ, ೩ನೇ ಮುಖ್ಯರಸ್ತೆ
ನಾಗೇಂದ್ರ ಬ್ಲಾಕ್, ಬೆಂಗಳೂರು - ೫೬೦ ೦೫೦




ಲೇಖಕರು : ಜಿ. ಕೆ. ಗೋವಿಂದರಾವ್
ಇಳಾ ಪ್ರಕಾಶನ
ಪುಟ : xvi+೨೮೨  ಬೆಲೆ : ರೂ. ೧೬೦

**ಪ್ರೊ||** ಜಿ. ಕೆ. ಗೋವಿಂದರಾವ್ ಅವರ 'ನಾಗರಿಕತೆ ಮತ್ತು ಅರಾಜಕತೆ' ಹಲವು ಕಾರಣಗಳಿಗಾಗಿ ನಮ್ಮ ಗಮನ ಸೆಳೆಯುತ್ತದೆ. ಆಯ್ದ ಲೇಖನಗಳ ಈ ಸಂಗ್ರಹವನ್ನು ನಾಲ್ಕು ಭಾಗಗಳಲ್ಲಿ ವಿಂಗಡಿಸಿದ್ದರೂ ಸ್ಥೂಲವಾಗಿ ಎರಡು ಪ್ರಧಾನ ನೆಲೆಗಳಲ್ಲಿ ವಿವರಿಸಿಕೊಳ್ಳಬಹುದು. ಒಂದು, ನಮ್ಮ ಸಂದರ್ಭದ ತುರ್ತುಗಳನ್ನು, ಪ್ರಶ್ನೆಗಳನ್ನು, ಸವಾಲುಗಳನ್ನು ವಸ್ತುನಿಷ್ಠವಾಗಿ ಗ್ರಹಿಸಲು ಪ್ರಯತ್ನಿಸುವ ಮೂಲಕವೇ ಅದನ್ನು ಮುಖಾಮುಖಿಯಾಗುವುದು. ಇನ್ನೊಂದು, ಸಮುದಾಯದಲ್ಲಿ ವ್ಯಕ್ತಿಯ ಪಾತ್ರ ಮತ್ತು ಜವಾಬ್ದಾರಿಯನ್ನು ಕುರಿತಂತೆ ಜಿ. ಕೆ. ಗೋವಿಂದರಾವ್ ಅವರ ನಿಲುವುಗಳು. ಈ ಎರಡೂ ನೆಲೆಗಳನ್ನು ರೂಪಿಸಿರುವುದು ಲೇಖಕ ಮತ್ತು ಚಿಂತಕನ ಭಾವುಕ ಮತ್ತು ಬೌದ್ಧಿಕ ವ್ಯಕ್ತಿತ್ವಗಳ ಅಖಂಡ ಅಸ್ತಿತ್ವ.

''ಇತಿಹಾಸವನ್ನು ತಿರುಚಲಾಗುತ್ತಿದೆ ಎಂಬ ಅನುಮಾನ ಬಂದಾಗಲೆಲ್ಲ ಅದರ ವಿರುದ್ಧ ಸಮರ ಸಾರಬೇಕಾದವನು ಬುದ್ಧಿಜೀವಿ. ಯಥಾಸ್ಥಿತಿಯ ತೃಪ್ತಿಯನ್ನು, ಭ್ರಮೆಯನ್ನು ಕಿತ್ತೊಗೆಯಬೇಕಾದವನು ಬುದ್ಧಿಜೀವಿ.'' ಎಡ್ವರ್ಡ್ ಸೈದ್ ಬುದ್ಧಿಜೀವಿಗಳ ವ್ಯಕ್ತಿತ್ವವನ್ನು ವ್ಯಾಖ್ಯಾನಿಸುತ್ತಾ ಹೇಳುವ ಈ ಮಾತುಗಳ ಬಗ್ಗೆ ಜಿ.ಕೆ.ಜಿ.ಯವರಿಗೆ ಸಂಪೂರ್ಣ ಸಹಮತವಿದೆ. ಬುದ್ಧಿಜೀವಿಗಳ ಪಾತ್ರ ಮತ್ತು ಜವಾಬ್ದಾರಿ ಸಮುದಾಯದ ಬದುಕಿನಲ್ಲಿ ಮಹತ್ವದ್ದು ಎನ್ನುವುದನ್ನು ಹೇಳುತ್ತಿರುವಾಗಲೂ ಅವರನ್ನು 'ವಿಶೇಷ ವರ್ಗ'ದವರು ಎಂದು ವರ್ಗೀಕರಿಸುವುದರಲ್ಲಿಯೂ ಜಿ.ಕೆ.ಜಿ.ಯವರಿಗೆ ಆಸಕ್ತಿಯಿಲ್ಲ ಎನ್ನುವ ಅಂಶ ಬಹಳ ಮುಖ್ಯವಾದುದು.

ಇದಕ್ಕೆ ಪೂರಕವಾಗಿ ಪ್ರಸಂಗವೊಂದನ್ನು ಇಲ್ಲಿ ನೆನೆಯಬಹುದೇನೋ. ಶಿವಮೊಗ್ಗದಲ್ಲಿ ಕೆ. ವಿ. ಸುಬ್ಬಣ್ಣನವರನ್ನು ಕುರಿತು ಜಿ.ಕೆ.ಜಿ. ವಿಶೇಷ ಉಪನ್ಯಾಸವೊಂದನ್ನು ನೀಡಿದರು. ಸುಬ್ಬಣ್ಣನವರ ಸಮಷ್ಟಿ ಪ್ರಜ್ಞೆಯೇ ಅವರ ವ್ಯಕ್ತಿತ್ವದ ಜೀವದ್ರವ್ಯ ಎನ್ನುವ ನಿಲುವಿನಿಂದ ಅವರ ಜೀವನ-ಸಾಧನೆಗಳನ್ನು ವಿಶ್ಲೇಷಿಸಿದರು. ಜಿ.ಕೆ.ಜಿ.ಯವರ ಒಡನಾಟದಲ್ಲಿರುವ ಅವರ ಬರಹಗಳನ್ನು ಗಮನಿಸುವ ಯಾರಿಗಾದರೂ ತಕ್ಷಣ ಅನುಭವಕ್ಕೆ ಬರುವ ಸಂಗತಿಯೆಂದರೆ, ಸಮುದಾಯದಿಂದಲೇ ವ್ಯಕ್ತಿ ನೆಲೆಯನ್ನು ಗುರುತಿಸುವುದರಲ್ಲಿ ಅವರಿಗಿರುವ ಆಸಕ್ತಿ.

ಸಮುದಾಯದ ಆರೋಗ್ಯ, ಅದು ಉಳಿಸಿಕೊಳ್ಳಬೇಕಾದ ವಿವೇಕ ಮತ್ತು ಎಚ್ಚರವೇ ಇಲ್ಲಿನ ಬಹುಪಾಲು ಲೇಖನಗಳ ವಸ್ತು. ಪ್ರಭುತ್ವದ ಆದಿಮ ಎನ್ನಬಹುದಾದ ಕ್ರೌರ್ಯ ಮತ್ತು ಸಾರ್ವಜನಿಕರ ನಿಷ್ಕಾಳಜಿಯಿಂದಲೇ ಅನೇಕ ಸಮಸ್ಯೆಗಳು ಹುಟ್ಟುತ್ತವೆ. ಸಾರ್ವಜನಿಕ ಬದುಕಿನ ಘನತೆ ಮತ್ತು ಮಹತ್ವವನ್ನು ಅರ್ಥಮಾಡಿಕೊಳ್ಳದಿರುವುದೇ ನಮ್ಮ ಸಮಕಾಲೀನ ಸಂದರ್ಭದ ಬಹುದೊಡ್ಡ ಸವಾಲು ಮಾತ್ರವಲ್ಲ, ಜನತಂತ್ರ ವ್ಯವಸ್ಥೆ ಎದುರಿಸಬೇಕಾಗಿರುವ ಮೂಲಭೂತ ಪ್ರಶ್ನೆಗಳಲ್ಲೊಂದು. ಇದನ್ನು ಸಮರ್ಥಿಸುವ ಹಲವು ಉದಾಹರಣೆಗಳು ಈ ಕೃತಿಯಲ್ಲಿವೆ.

ವ್ಯವಸ್ಥೆಯನ್ನು ಪ್ರಶ್ನಿಸುವಷ್ಟೇ ಕಟುವಾಗಿ ಅವರು ಸಾರ್ವಜನಿಕರನ್ನೂ ಪ್ರಶ್ನಿಸುತ್ತಾರೆ. ವಿದ್ಯಾವಂತರೆಂದು, ಪ್ರಜ್ಞಾವಂತರೆಂದು ಬೀಗುವ ಜನರ ಆತ್ಮವಂಚನೆಯ ಬದುಕು ಇವರನ್ನು ಮತ್ತೆ ಮತ್ತೆ ಕೆರಳಿಸುತ್ತದೆ. ''ಸಾಮಾನ್ಯ ಜನ ಎಷ್ಟೆಷ್ಟು ಈ ರಾಜಕೀಯ ಪ್ರಕ್ರಿಯೆಯಿಂದ ದೂರ ಸರಿಯುತ್ತಾ ಹೋಗುತ್ತಾರೋ ಅಷ್ಟಷ್ಟು ಸಾರ್ವಜನಿಕ ಜೀವನದಲ್ಲಿ ಭ್ರಷ್ಟತನ, ಜಾತೀಯತೆ, ಕೋಮುವಾದ, ಹಿಂಸೆ ಇವುಗಳಿಗೆ ಎಡೆಮಾಡಿಕೊಡುತ್ತಿರುತ್ತಾರೆ.'' – ಈ ಮಾತುಗಳು ಸಮುದಾಯ ಮತ್ತು ಜನತಂತ್ರದ ಒಳಹೆಣಿಗೆಯನ್ನು ಮಾತ್ರವಲ್ಲ, ಜನತಂತ್ರದ ಅನಿವಾರ್ಯ ಕರಾರುಗಳನ್ನೂ ಸ್ಪಷ್ಟವಾಗಿ ಹೇಳುತ್ತವೆ.

ಮೂಲತಃ ಸಾಹಿತ್ಯದ ವಿದ್ಯಾರ್ಥಿಯಾಗಿರುವ ಜಿ.ಕೆ.ಜಿ. ಸಾಹಿತ್ಯವನ್ನು ವಿವರಿಸಿಕೊಳ್ಳುವುದೂ ಇದಕ್ಕೆ ಅನುಗುಣವಾಗಿಯೇ. ''ಸಾಹಿತ್ಯವೆಂಬುದು ಎಂದೂ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆ.'' ಹೀಗೆಂದ ಮಾತ್ರಕ್ಕೆ ಕಾವ್ಯದ ರಸಾಸ್ವಾದಿ ನೆಲೆಗಳನ್ನು ಇವರು ನಿರಾಕರಿಸುತ್ತಾರೆಂದಲ್ಲ. ಷೇಕ್ಸ್‌ಪಿಯರ್, ಟಾಲ್‌ಸ್ಟಾಯ್, ಬೋದಿಲೇರ, ಲಂಕೇಶ್, ಗಿರೀಶ್ ಕಾರ್ನಾಡ್ ಮುಂತಾದ ಲೇಖಕರನ್ನು ಕುರಿತ ಬರವಣಿಗೆ ಸೂಕ್ಷ್ಮ ಒದಿನಿಂದ ಮಾತ್ರ ದಕ್ಕಬಹುದಾದ ಒಳನೋಟಗಳಿಂದ ಕೂಡಿದೆ.

ಇಲ್ಲಿನ ಬರಹಗಳು ನಮ್ಮನ್ನು ತೀವ್ರವಾಗಿ ತಟ್ಟುವುದು ಆ ಬರಹಗಳ ವೈಚಾರಿಕ ಆಕೃತಿಯಿಂದ ಮಾತ್ರವಲ್ಲ, ಅವು ಆರೋಗ್ಯಪೂರ್ಣ, ಪ್ರಸ್ತುತ ಎನ್ನುವ ಕಾರಣಕ್ಕಾಗಿ ಮಾತ್ರವಲ್ಲ, ತಮಗೆ ಸರಿ ಎನಿಸಿದ್ದರ ಸಲುವಾಗಿ ಯಾವುದೇ ರೀತಿಯ ಸಾರ್ವಜನಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು ಎನ್ನುವ ಬದ್ಧತೆಯ ಕಾರಣಕ್ಕಾಗಿಯೇ ಈ ಲೇಖನಗಳಿಗೆ ಅಧಿಕೃತತೆ ಒದಗಿಬಂದಿದೆ.

ಮುಖ್ಯವಾದ ಮಾತೆಂದರೆ ಜಿ.ಕೆ.ಜಿ. ಇಲ್ಲಿನ ವಿಚಾರಗಳನ್ನು ತಮ್ಮ ವ್ಯಕ್ತಿಗತ ವಿಚಾರಗಳು ಎಂದು ಪ್ರತಿಪಾದಿಸುವುದರಲ್ಲಿ ಆಸಕ್ತರಲ್ಲ. ಸಮಾನ ಮನಸ್ಕರ ಪ್ರತಿನಿಧಿಯಾಗಿ ಈ ವಿಚಾರಗಳನ್ನು ಮಂಡಿಸುತ್ತಿರುವ ದೃಷ್ಟಿಕೋನ ಇಲ್ಲಿ ಸ್ಪಷ್ಟವಾಗಿದೆ. ಈ ಕೃತಿಯ ಯಾವ ಮುಖ್ಯ ಲೇಖನವನ್ನು ನೋಡಿದರೂ ಈ ಅಂಶ ಸ್ಪಷ್ಟವಾಗುತ್ತದೆ. (ಭಾರತ ಮತ್ತು ಅಣು ಬಾಂಬು, ಮಧ್ಯಮ ವರ್ಗ ಮತ್ತು ರಾಜಕೀಯ ಪ್ರಜ್ಞೆ, ಮೂಲಭೂತವಾದದ ಎರಡು ಮುಖಗಳು, ಉನ್ನತ ವಿದ್ಯಾ ಸಚಿವರಿಗೊಂದು ಪತ್ರ, ಇಂಗ್ಲಿಷ್ ವ್ಯಾಮೋಹ....). ಸಂಸ್ಕೃತಿ ಚಿಂತನೆಯ, ವೈಚಾರಿಕ ಬರಹಗಳ ಇತರ ಕೃತಿಗಳಿಗಿಂತ ನಾಗರಿಕತೆ ಮತ್ತು ಅರಾಜಕತೆ ನಿರ್ಣಾಯಕವಾಗಿ ಭಿನ್ನವಾಗುವುದು ಈ ಕಾರಣಕ್ಕೆ.


ಎಂ. ಎಸ್. ಆಶಾದೇವಿ
ನಂ. ೪೬/೨, ಪಟ್ಟಾಭಿರಾಮಚಂದ್ರ ನಿಲಯ
೪ನೇ ತಿರುವು, 'ಬಿ' ವಿಭಾಗ, ಗಾಂಧಿನಗರ, ಶಿವಮೊಗ್ಗ




## ಭಾವಚಿತ್ರ

**ನೋ**ಡಿದರೆ ಅಳಿದ ಗೆಳೆಯನ ಭಾವಚಿತ್ರ
ನೆನಪಾಗುವುದು ಘಟನೆಗಳು
ಕಾಡುವುದಾಡಿದ ಮಾತುಗಳು
ನೋಡಿದ್ದು ಮೂಡುವುದು
ಮಾಡಿದ ಸ್ಪರ್ಶಗಳು ?

ನಗುವುದಿಲ್ಲ, ಅಳುವುದಿಲ್ಲ
ಇಲ್ಲ ಮಾತನಾಡುವುದಿಲ್ಲ
ಭಾವಚಿತ್ರ.


ಬಂದಗದ್ದೆ ರಾಧಕೃಷ್ಣ
ಪುಸ್ತಕ ಹೊಂಬಾಳೆ, ಕೆಳದಿ ಅಂಚೆ - ೫೭೭ ೪೦೧
ಸಾಗರ ತಾಲೂಕು, ಶಿವಮೊಗ್ಗ ಜಿಲ್ಲೆ

# ಹೃದಯ ಹೀನರು

ಪಾರ್ವತಿ ಜಿ. ಐತಾಳ್

ಚನಿಯನಿಗೆ ಅಮಲೇರತೊಡಗಿತ್ತು. ಒಂದಾದಮೇಲೊಂದರಂತೆ ಚಂಪಿಯ ಕೈಯಿಂದ ಐದು ಗ್ಲಾಸು ಸಾರಾಯಿ ತುಂಬಿಸಿಕೊಂಡು ಗಟಗಟನೆ ಕುಡಿದು ಮುಗಿಸಿದ ಅವನು ಪುನಃ ಗ್ಲಾಸು ಒಡ್ಡಿ ''ಹ್ಲುಂ, ಹಾಕು... ಇನ್ನೂ ಹಾಕು'' ಎಂದು ತೊದಲಿದ. ಚಂಪಿ ಮೋಹಕವಾಗಿ ನಗುತ್ತ ವಯ್ಯಾರದಿಂದ ಕತ್ತುಕೊಂಕಿಸಿ ವಾರೆನೋಟ ಬೀರಿ ಹೇಳಿದಳು : ''ಇನ್ನು ಸಾಕು. ಮಲಿಕ್ಕೋ.''

''ಆಯ್ತು, ನೀನು ಹೇಳಿದರೆ ಸಾಕು. ಬಾ, ಮಲಿಕ್ಕಳ್ಳಣ'' ಚನಿಯ ಮುರುಕು ಮಂಚದ ಮೇಲೆ ಹಾಸಿದ್ದ ಹರಕು ಚಾಪೆಯ ಮೇಲೆ ಅಂಗಾತ ಮಲಗಿ ಚಂಪಿಯ ಸೆರಗು ಹಿಡಿದು ಜಗ್ಗುತ್ತ ಅವಳನ್ನು ತನ್ನ ಬಳಿಗೆ ಎಳೆದುಕೊಂಡ. ಅವಳ ಸೆರಗು ಜಾರಿತು. ಅವಳು ಬಿಡಿಸಿಕೊಳ್ಳಲು ಪ್ರಯತ್ನಿಸುವಂತೆ ನಟಿಸುತ್ತ ಹೇಳಿದಳು : ''ನಾನು ಮೊನ್ನೆಯೇ ಹೇಳಿದ್ದೆ ನಿನ್ನ ಹತ್ರ, ನನಗೊಂದು ನೈಲಾನ್ ಸೀರೆ ಕೊಡಿಸು ಅಂತ. ಎಲ್ಲಿ ಸೀರೆ ?''

''ನಿನಗೆ ಸೀರೆ ಬೇಡ. ನೀನು ಹೀಗೆಯೇ ಇದ್ದರೆ ಚೆಂದ'' ಚನಿಯ ಮೆಲ್ಲನೆ ಅವಳ ಸೊಂಟದ ಸುತ್ತ ಕೈ ಹಾಕಿ ಅವಳ ಸೀರೆಯನ್ನು ಬಿಚ್ಚಹೊರಟ. ಅವಳು ತಟಕ್ಕೆಂದು ಎದ್ದು ದೂರ ಸರಿದಳು : ''ಹೌದು, ಹೌದು, ನೀನು ಯಾವಾಗಲೂ ತಮಾಸೆಯಲ್ಲೇ ಎಲ್ಲವನ್ನೂ ಹಾರಿಸುತ್ತಿ. ಸುಕ ಕೊಡೂಕೆ ಮಾತ್ರ ನಾನು ಬೇಕು. ಈ ತಿಂಗ್ಳು ನೀನು ನನಗೆ ಏನೂ ಕೊಡಿಸಲೇ ಇಲ್ಲ.''

''ಈ ತಿಂಗ್ಳು ಇನ್ನೂ ದುಡ್ಡು ಬಂದಿಲ್ಲ ಚಿನ್ನಾ. ಬಂದ ಕೂಡಲೇ ನೈಲಾನ್ ಸೀರೆ ಯಾಕೆ, ರೇಶ್ಮೆ ಸೀರೇನೇ ಕೊಡುಸ್ತೀನಿ ನನ್ನ ರಾಣಿಗೆ.''

''ಪೋಸ್ಟ್'' ಎಂಬ ಧ್ವನಿ ಅವರ ಸರಸಕ್ಕೆ ಭಂಗ ತಂದಿತು. ಪೋಸ್ಟ್‌ಮ್ಯಾನ್ ಬಾಗಿಲಲ್ಲಿ ಪತ್ರವೆಸೆದು ಹೋದ. ಚಂಪಿ ಎದ್ದು ಹೋಗಿ ಅದನ್ನು ಹಿಡಿದುಕೊಂಡು ಬಂದಳು.

''ಬಾಗಿ ಕಾಗದ ಬರ್ದಿದ್ದಾಳೆ'' ಅವಳೆಂದಳು.

''ಅಬ್ಬ, ಬಂತಲ್ಲ ಕೊನೆಗೂ ! ಈ ಸಾರಿ ಅವಳ ಯಜಮಾನ ದುಡ್ಡು ಕಳುಹಿಸಲೇ. ಇಲ್ಲ. ಕಳೆದ ತಿಂಗ್ಳು ಕಳುಹಿಸಿದ ಒಂದು ಸಾವಿರ ರೂಪಾಯಿ ಖಾಲಿಯಾಗಿ ತುಂಬಾ ದಿನ ಆಯ್ತು. ಇವಳು ಯಾಕೆ ಇಷ್ಟು ತಡವಾಗಿ ಬರೆದಳು ? ಹ್ಲುಂ, ಏನಂತೆ ಅವಳಿಗೆ ? ಓದಿ ಹೇಳು.''

ಚಂಪಿ ಪತ್ರವನ್ನು ಒಡೆದಳು

''ಇಲ್ಲಿ ಬಾ, ಹತ್ತಿರ ಕುಳಿತುಕೋ.''

ಚಂಪಿ ಚನಿಯನ ಹತ್ತಿರ ಬಂದು ಅವನಿಗೆ ಮೈತಾಗಿಸಿ ಕುಳಿತಳು. ಚನಿಯ ಅವಳ ತೊಡೆಗಳನ್ನು ಹಿಸುಕುತ್ತ ಹೇಳಿದ :

''ಸರಿ ಓದು''

ಚಂಪಿ ಅಕ್ಷರಗಳನ್ನು ಜೋಡಿಸಿಕೊಂಡು ನಿಧಾನವಾಗಿ ಓದಿದಳು.

ಅಪ್ಪಾ,

ಈ ಪತ್ರವನ್ನು ನಾನು ಅತ್ಯಂತ ದುಃಖದಿಂದ ಬರೆಯುತ್ತಿದ್ದೇನೆ. ಇಲ್ಲಿ ನನ್ನವರೆಂಬವರು ಯಾರೂ ಇಲ್ಲ. ಪ್ರತಿ ಕ್ಷಣವೂ ಮನೆಯ ನೆನಪಾಗುತ್ತದೆ. ನಾನು ಇಲ್ಲಿಗೆ ಬಂದು ಇವತ್ತಿಗೆ ಒಂದು ವರ್ಷವಾಯಿತು. ಈ ಮನೆಯನ್ನು ಸೇರಿದ ನಂತರ ಮುಳ್ಳ ಮೇಲೆ ನಿಂತಂತೆ ಒಂದೊಂದು ನಿಮಿಷವನ್ನು ಕಳೆಯುತ್ತಿದ್ದೇನೆ.

ದಿನವಿಡೀ ಕತ್ತೆಯಂತೆ ಕೆಲಸ ಮಾಡುತ್ತೇನೆ. ಕೆಲಸದಲ್ಲಿ ಒಂದು ಸ್ವಲ್ಪ ಹೆಚ್ಚು ಕಡಿಮೆಯಾದರೂ ಯಜಮಾನರು, ಯಜಮಾನತಿ ಮತ್ತು ಅವರ ಮಕ್ಕಳು ಕೂಡ ಮೈ ಮೇಲೆಲ್ಲ ಬಾಸುಂಡೆ ಬರುವಂತೆ ಹೊಡೆಯುತ್ತಾರೆ. ನನಗೆ ಹೊತ್ತು ಹೊತ್ತಿಗೆ ಊಟ ಸಿಗುವುದಿಲ್ಲ. ನಾಯಿ ಕೂಡಾ ತಿನ್ನಲಾರದಂತಹ ಹಳಸಲು ಅನ್ನವನ್ನು ಕೊಡುತ್ತಾರೆ. ಅದನ್ನ ತಿನ್ನುವಾಗ ವಾಕರಿಕೆ ಬರುವಂತಾಗುತ್ತದೆ. ತಿನ್ನಲಾಗದೆ ಬಿಸಾಕಿದರೆ ಅದಕ್ಕೆ ಕೂಡಾ ಹೊಡೆತ ತಿನ್ನಬೇಕಾಗುತ್ತದೆ. ನನಗೆ ಅಮ್ಮನ ನೆನಪಾಗಿ ಅಳು ಬರುತ್ತದೆ.

ಇಲ್ಲಿಗೆ ಬರುವಾಗ ತಂದಿದ್ದ ಎರಡು ಲಂಗ - ರವಿಕೆಗಳು ಹರಿದು ನೇತಾಡುತ್ತಿವೆ. ನನಗೆ ಹಾಕಿಕೊಳ್ಳಲು ನಾಚಿಕೆಯಾಗುತ್ತದೆ. ಬೇರೆ ಬಟ್ಟೆ ಕೊಡಿರೆಂದರೆ ಹಂಗಿಸುತ್ತಾರೆ. ನಾನು ತುಂಬಾ ಬಡಕಲಾಗಿಬಿಟ್ಟಿದ್ದೇನೆ. ನೆಲ ಒರಸುತ್ತಿರುವಾಗ ನನ್ನ ಪ್ರತಿಬಿಂಬ ನೋಡಿ ನನಗೆ ಇದು ನಾನು ಹೌದೇ ಅಲ್ಲವೇ ಎಂದು ದಿಗ್ಭ್ರಮೆಗೊಳ್ಳುವಂತಾಯಿತು.

'ಕೆಲಸಕ್ಕೆ ಹೋಗು' ಎಂದು ನೀವು ಕಳುಹಿಸುವಾಗ ಇಷ್ಟೆಲ್ಲ ಕಷ್ಟ - ಸಂಕಟ ಅನುಭವಿಸಬೇಕಾಗಬಹುದೆಂದು ನಾನು ಎಣಿಸಿರಲಿಲ್ಲ. ಅಮ್ಮ ಬದುಕಿದ್ದಿದ್ದರೆ ಖಂಡಿತವಾಗಿಯೂ ನನ್ನನ್ನು ಹೀಗೆ ಇನ್ನೊಬ್ಬರ ಮನೆಗೆ ಕೆಲಸಕ್ಕೆಂದು ಕಳುಹಿಸುತ್ತಿರಲಿಲ್ಲವೆಂದು ಎಣಿಸಿ ಅಮ್ಮನ ನೆನಪಾಗಿ ದುಃಖವಾಗುತ್ತದೆ. ಪಾಪ, ಅಮ್ಮ ವಿಷ ಸೇವಿಸಿ ಯಾಕೆ ಆತ್ಮಹತ್ಯೆ ಮಾಡಿಕೊಂಡಳೋ ಅರ್ಥವಾಗುತ್ತಿಲ್ಲ.

ಎಸ್.ಎಸ್.ಎಲ್.ಸಿ.ನಲ್ಲಿ ನನಗೆ ಶೇಕಡಾ ತೊಂಬತ್ತಾರು ಅಂಕಗಳು ಬಂದಿದ್ದನ್ನು ನೋಡಿ ಕೃಷ್ಣಮಾಸ್ತರರು ಹೇಳಿದ್ದರು 'ಭಾಗೀರಥಿ, ನೀನು ಓದು

೪೮ನೇ ಪುಟಕ್ಕೆ



# ಪಶ್ಚಿಮಘಟ್ಟದ ವಿಭಿನ್ನ ಮುಖಗಳು ಒಂದು ಅಧ್ಯಯನ

ಕೆ. ಮಹಾಂತೇಶ್

ಅಪಾರವಾದ ಜೀವ ವೈವಿಧ್ಯತೆ ಮತ್ತು ನಿತ್ಯಹರಿದ್ವರ್ಣ ಕಾಡುಗಳಿಂದ ಕೂಡಿರುವ ಪಶ್ಚಿಮಘಟ್ಟದ ಒಡಲಲ್ಲಿ ಘಟಿಸುತ್ತಿರುವ ಘಟನೆಗಳಿಂದಾಗಿ ಅದು ಮತ್ತೆ ಮತ್ತೆ ಜನಗಮನವನ್ನು ತನ್ನತ್ತ ಸೆಳೆದುಕೊಳ್ಳುತ್ತಿದೆ. ವಿಶೇಷವಾಗಿ ಕರ್ನಾಟಕದಲ್ಲಿ ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು, ಉಡುಪಿ, ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳು ಪಶ್ಚಿಮಘಟ್ಟದ ವ್ಯಾಪ್ತಿಯಲ್ಲಿ ಸೇರಿದ್ದರೂ ಅದರ 'ಹೃದಯ'ವಾಗಿರುವ ಮಲೆನಾಡು ಇದೀಗ ಹೆಚ್ಚು ಸುದ್ದಿಯಲ್ಲಿದೆ.

ಕಳೆದ ೩, ೪ ವರ್ಷಗಳಿಂದ ಈ ಭಾಗದಲ್ಲಿ ತೀವ್ರಗೊಂಡಿರುವ 'ನಕ್ಸಲೀಯ' ಚಳುವಳಿ ಮತ್ತು ಅದಕ್ಕೆ ವಿರುದ್ಧವಾಗಿ ಬೆಳೆದಿರುವ ಕೋಮು ಉನ್ಮಾದದ ಚಟುವಟಿಕೆಗಳು ಅಕ್ಷರಶಃ ಮಲೆನಾಡ ಜನರ ನೆಮ್ಮದಿಗೆ ಬೆಂಕಿ ಇಟ್ಟಿವೆ. ನೀವೊಂದು ಬಾರಿ 'ನಕ್ಸಲ್ ಪೀಡಿತ' ಪ್ರದೇಶವೆಂದು ಇವತ್ತು ಗುರ್ತಿಸಲ್ಪಡುತ್ತಿರುವ ಮಲೆನಾಡಿನ ಶೃಂಗೇರಿ, ಕೊಪ್ಪ, ಮೂಡಿಗೆರೆ, ಕಾರ್ಕಳ, ಬೆಳ್ತಂಗಡಿಯಂತಹ ತಾಲೂಕುಗಳನ್ನು ಸುತ್ತಾಡಿ ಬರಲು ಸಾಧ್ಯವಾದರೆ ನಿಮಗೆ ಸ್ಪಷ್ಟವಾಗಿ ಈ ಪ್ರದೇಶಗಳೆಲ್ಲವೂ ಕೇವಲ ನಕ್ಸಲ್‌ಪೀಡಿತ ಪ್ರದೇಶಗಳಾಗಿ ಮಾತ್ರ ಮಾರ್ಪಾಡಾಗಿಲ್ಲ, ಬದಲಾಗಿ ಅವುಗಳೆಲ್ಲವೂ ನಕ್ಸಲೀಯರನ್ನು ವಿರೋಧಿಸುವ ನೆಪದಲ್ಲಿ ಕೋಮು ಉನ್ಮಾದದ ಪ್ರದೇಶಗಳಾಗಿ ಪರಿವರ್ತಿತಗೊಂಡಿವೆ.

**ಯಾರು ಯಾರಿಗೆ ಪರ್ಯಾಯ ?**

ಮಲೆನಾಡು ಪ್ರದೇಶದ ಜನತೆಯನ್ನು ಕಾಡುತ್ತಿರುವ ಪ್ರಮುಖ ಪ್ರಶ್ನೆ ಇದು : ಯಾಕೆಂದರೆ ಕಾಡಿನಲ್ಲಿರುವ ಗಿರಿಜನರ ಪ್ರಶ್ನೆಯನ್ನು ಮುಂದುಮಾಡಿ ಪಶ್ಚಿಮಘಟ್ಟದಲ್ಲಿ ಆಶ್ರಯ ಪಡೆದಿದ್ದಾರೆ ನಕ್ಸಲೀಯರು. ಮತ್ತೊಂದೆಡೆ ನಕ್ಸಲೀಯರು ಹಾಗೂ ಅವರಿಂದ ಹಲ್ಲೆ, ಬೆದರಿಕೆಗೆ ಒಳಗಾದ ಜನರನ್ನು ಸಂತೈಸುವ ನೆಪದಲ್ಲಿ ನಿಂತು ಪ್ರಚಾರ ಪಡೆಯುತ್ತಿರುವವರು ಬಲಪಂಥೀಯರು. ಆದರೆ ಪಶ್ಚಿಮಘಟ್ಟದ ಕಾಡಿನಲ್ಲಿ ಅಥವಾ ಇವತ್ತಿನ ಕುದುರೆಮುಖ ರಾಷ್ಟ್ರೀಯ ಉದ್ಯಾನವನ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಗಿರಿಜನರಿಗೆ ಅಗತ್ಯವಿರುವ ಮೂಲ ನಾಗರಿಕ ಸೌಲಭ್ಯಗಳು ಬೇಕೆಂಬ ಯಾವುದೇ ಬೇಡಿಕೆಯನ್ನಾಗಲಿ, ಈ ಭಾಗದ ಸಣ್ಣ ರೈತರು ಎದುರಿಸುತ್ತಿರುವ ಒತ್ತುವರಿ ಎಂಬ 'ತೂಗುಕತ್ತಿ' ಎಂಬ ಗಂಭೀರ ಸಮಸ್ಯೆಯನ್ನಾಗಲಿ ಅಥವಾ ಅಡಿಕೆ ಕೃಷಿಯನ್ನೇ ನಾಶಪಡಿಸುತ್ತಿರುವ ಕೊಳೆರೋಗ, ಹಳದಿರೋಗ ಮತ್ತು ಬೇರು ಹುಳುಗಳ ಬಾಧೆಗಳನ್ನು ನಿವಾರಿಸಲು ಅಗತ್ಯವಿರುವ ಕ್ರಮಗಳ ಜಾರಿಗಾಗಿ ಹೋರಾಟಗಳನ್ನು ರೂಪಿಸುವ ಪ್ರಯತ್ನಗಳನ್ನು ಬುಡಕಟ್ಟು ಜನರ ಪರವಾಗಿದ್ದೇವೆ ಎನ್ನುವ ನಕ್ಸಲೀಯರಿಂದಾಗಲಿ ಅಥವಾ ನಕ್ಸಲೀಯರನ್ನು ವಿರೋಧಿಸುತ್ತಿರುವ ಪಕ್ಷಗಳಿಂದಾಗಲಿ ನಡೆಯಲಿಲ್ಲ. ಅದರ ಬದಲಾಗಿ ನಕ್ಸಲೀಯರನ್ನು ಗುಪ್ತವಾಗಿ ಇಲ್ಲವೇ ಬಹಿರಂಗವಾಗಿ ಬೆಂಬಲಿಸುವ ಮತ್ತು ವಿರೋಧಿಸುವ ಎರಡು ವಿಭಾಗಗಳಾಗಿ ಈ ಪ್ರದೇಶಗಳು ಇಬ್ಭಾಗ ಹೊಂದಿವೆ. ಹೀಗಾಗಿ ಇಲ್ಲಿ ಯಾರಿಗೆ ಯಾರು ಪರ್ಯಾಯ ಎನ್ನುವ ಪ್ರಶ್ನೆಗಳೇ ಚರ್ಚೆಯಾಗುತ್ತಿವೆಯೇ ವಿನಾ ಪಶ್ಚಿಮಘಟ್ಟದಲ್ಲಿನ ಜನರ ಬದುಕನ್ನು ಕಾಡುತ್ತಿರುವ ಜ್ವಲಂತ ಸಮಸ್ಯೆಗಳನ್ನು ಕಣ್ತೆರೆದು ನೋಡಲು ಯಾರೂ ಬಯಸುತ್ತಿಲ್ಲ. ನಮ್ಮ ಮಾಧ್ಯಮಗಳಲ್ಲಿ ಬರುತ್ತಿರುವ ಸುದ್ದಿಗಳು ಕೂಡ ನಕ್ಸಲೀಯರ ಪರವಾಗಿಯೋ, ಅವರ ವಿರುದ್ಧವಾಗಿಯೋ ಇರುವುದನ್ನು ಬಿಟ್ಟರೆ ಪಶ್ಚಿಮಘಟ್ಟದ ಜನತೆ ಅನುಭವಿಸುತ್ತಿರುವ ನಿಜವಾದ ತಲ್ಲಣಗಳನ್ನು ಅದಕ್ಕಿರುವ ವಿಭಿನ್ನ ಆಯಾಮಗಳನ್ನು ತೆರೆದಿಡಲಿಲ್ಲ.

**ಬಗೆಹರಿಯದ ಒತ್ತುವರಿ ಸಮಸ್ಯೆ**

ನಮ್ಮ ರಾಜ್ಯದ ಶೇ. ೨೦ರಷ್ಟು ಭೂಪ್ರದೇಶವು ಈ ಪಶ್ಚಿಮಘಟ್ಟದಲ್ಲಿ ಬರುತ್ತದೆ. ನಮ್ಮ ರಾಜ್ಯದ ಒಟ್ಟು ಅರಣ್ಯ

ಜಗತ್ತಿನ ಅತ್ಯಂತ ವಿಶಿಷ್ಟ ಜೀವ ವೈವಿಧ್ಯತೆ ಹೊಂದಿರುವ ಪಶ್ಚಿಮಘಟ್ಟ ಅದರ ಹೃದಯಭಾಗವಾದ ಮಲೆನಾಡು ಇಂದು ಅಶಾಂತಿಯ, ಸಂಘರ್ಷದ, ಭಯದ ವಾತಾವರಣದಲ್ಲಿ ಬದುಕುತ್ತಿದೆ. ಇದನ್ನು ಬದಲಾಯಿಸಲು ಸರ್ಕಾರ ಎಲ್ಲಾ ರೀತಿಯ ಹಿಂಸೆಗಳನ್ನು ವಿರೋಧಿಸುವುದರ ಜೊತೆಯಲ್ಲೇ ಪಶ್ಚಿಮಘಟ್ಟದಲ್ಲಿ ವಾಸಿಸುತ್ತಿರುವ ಆದಿವಾಸಿ ಕುಟುಂಬಗಳನ್ನೂ ರೈತರನ್ನೂ ಅವರ ಸಂಕಷ್ಟಗಳಿಂದ ಹೊರಬರಲು ಅಗತ್ಯವಿರುವ ದೀರ್ಘಕಾಲದ ಮೂಲಸೌಲಭ್ಯಗಳನ್ನು ಕಲ್ಪಿಸಿ ಅವರಲ್ಲಿ ಆತ್ಮವಿಶ್ವಾಸವನ್ನು ತುಂಬುವ ಕೆಲಸ ನಡೆಸಬೇಕೆ ವಿನಾ, ಸಮಸ್ಯೆ ಉಲ್ಬಣಗೊಂಡಾಗ ಮಾತ್ರ ಮಧ್ಯೆ ಪ್ರವೇಶಿಸಿ ಕೋಟ್ಯಂತರ ರೂ.ಗಳ ಪ್ಯಾಕೇಜ್‌ಗಳನ್ನು ಘೋಷಿಸುವುದರಿಂದ ಯಾವುದೇ ಪ್ರಯೋಜನವಾಗದು ಎಂಬ ಸತ್ಯವನ್ನು ಅರ್ಥಮಾಡಿಕೊಳ್ಳಬೇಕು.

ಭೂಮಿಯ ಅರ್ಧಭಾಗ ಈ ಪ್ರದೇಶದಲ್ಲಿದೆ. ಇಲ್ಲಿ ವಾಸಿಸುವ ಜನಸಂಖ್ಯೆ ಶೇ. ೧೪ಕ್ಕಿಂತ ಕಡಿಮೆ. ಅಂಕಿ-ಅಂಶದ ಪ್ರಕಾರ ಕಳೆದ ನೂರು ವರ್ಷಗಳ ಅವಧಿಯಲ್ಲಿ ಈ ಅರಣ್ಯದಿಂದ ಕೂಡಿದ ಭೂಮಿಯಲ್ಲಿ ಶೇ. ೬೬ರಷ್ಟು ಕಡಿತಗೊಂಡಿದ್ದು ಅದರಲ್ಲಿ ಕೃಷಿ , ಪ್ಲಾಂಟೇಷನ್, ವಸತಿ ಪ್ರದೇಶಗಳು ಸೇರಿದ್ದು, ಇವುಗಳನ್ನು ಸರ್ಕಾರಿ ದಾಖಲೆ ಪ್ರಕಾರ ಒತ್ತುವರಿ ಅಥವಾ ಬಗರಹುಕುಂ ಎಂದು ಕರೆಯಲಾಗುತ್ತದೆ. ಇಂತಹ ಯಾವುದೇ ಭೂಮಿಗೆ ಭೂ ಒಡೆತನದ ದಾಖಲಾತಿಗಳು ಇಲ್ಲದ ಕಾರಣ ಇದನ್ನು ಆಶ್ರಯಿಸಿದವರೆಗೆ ಸರ್ಕಾರದಿಂದ ಯಾವುದೇ ಸಾಲ-ಸವಲತ್ತು-ರಿಯಾಯಿತಿಗಳಾಗಲಿ ಸಿಗುತ್ತಿಲ್ಲ. ೧೯೮೦ಕ್ಕಿಂತ ಮುಂಚೆ ಈ ರೀತಿ ಸಾಗುವಳಿ ಮಾಡಿಕೊಂಡಿದ್ದ ರೈತರ ಜಮೀನುಗಳನ್ನು ಕಾಯಂಗೊಳಿಸಲು ಸರ್ಕಾರ ನೀಡಿದ್ದ ಆಶ್ವಾಸನೆಯಂತೆ ರೈತರು ಅರ್ಜಿ ಹಾಕಿದ್ದರೂ ಅರ್ಧಕ್ಕರ್ಧ ರೈತರಿಗೆ ಹಕ್ಕುಪತ್ರ ಇದು ವರೆಗೂ ಸಿಗಲಿಲ್ಲ. ಪರಿಸ್ಥಿತಿ ಹೀಗಿರುವಾಗ ೨೦೦೨ರಲ್ಲಿ ಸರ್ವೋಚ್ಚ ನ್ಯಾಯಾಲಯವು ಒತ್ತುವರಿಗೊಳಪಟ್ಟಿರುವ ಎಲ್ಲಾ ಅರಣ್ಯ ಭೂಮಿಯನ್ನು ತೆರವುಗೊಳಿಸಬೇಕೆಂದು ನೀಡಿದ ತೀರ್ಪು ಕೇವಲ ಪಶ್ಚಿಮಘಟ್ಟದಲ್ಲಿ ವಾಸಿಸುತ್ತಿರುವವರಿಗೆ ಮಾತ್ರವಲ್ಲದೆ ಅರಣ್ಯಭೂಮಿಯನ್ನು ಅತಿಕ್ರಮಣ ಮಾಡಿ ಜೀವನ ಸಾಗಿಸುತ್ತಿದ್ದ ಲಕ್ಷಾಂತರ ಕುಟುಂಬಗಳನ್ನು ಅತಂತ್ರಗೊಳಿಸಿತು. ಈ ತೀರ್ಪಿನಿಂದಾಗಿ ಪಶ್ಚಿಮಘಟ್ಟದಲ್ಲಿ ವಾಸಿಸುತ್ತಿರುವ ಬಗರ್‌ಹುಕುಂ ರೈತರು ಮತ್ತು ಗಿರಿಜನರು ಸಹಜವಾಗಿಯೇ ಅಪಾಯದ ಸುಳಿಯಲ್ಲಿ ಸಿಲುಕಿದ್ದಾರೆ.

### ಕೃಷಿ ಕ್ಷೇತ್ರದ ಬಿಕ್ಕಟ್ಟು

೯೦ರ ದಶಕದಲ್ಲಿ ನಮ್ಮ ದೇಶವನ್ನು ಪ್ರವೇಶಿಸಿದ ಸುಧಾರಣೆಗಳು 'ಕೃಷಿರಂಗ'ವನ್ನೂ ಅಧೋಗತಿಗೆ ತಳ್ಳಿರುವುದು ಸ್ಪಷ್ಟ. ಒಂದು ಅಂದಾಜಿನ ಪ್ರಕಾರ ಕೃಷಿಕ್ಷೇತ್ರದಲ್ಲಿ ಉಂಟಾದ ತೀವ್ರತರನಾದ ಬಿಕ್ಕಟ್ಟನ್ನು ಎದುರಿಸಲಾರದೆ ಸುಮಾರು ೧೧ ಸಾವಿರ ರೈತರು ನಮ್ಮ ರಾಜ್ಯದಲ್ಲೇ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಅದರಲ್ಲಿ ಶೇ. ೨೬ರಷ್ಟು ಆತ್ಮಹತ್ಯೆಗಳು ಈ ಪಶ್ಚಿಮಘಟ್ಟದಲ್ಲಿ ನಡೆದಿವೆ ಎಂಬುದು ಇಲ್ಲಿಯ ಪರಿಸ್ಥಿತಿಯ ಭೀಕರತೆಯನ್ನು ಸೂಚಿಸುತ್ತದೆ. ಈ ಪ್ರದೇಶದ ಪ್ರಮುಖ ಬೆಳೆ ಅಡಿಕೆ. ಅಡಿಕೆ ಕೃಷಿಯಲ್ಲಿ ಇತ್ತೀಚಿನ ದಿನಗಳಲ್ಲಿ ಕಂಡುಬಂದಿರುವ ವಿಪರೀತ ಕೊಳೆರೋಗ, ಹಳದಿರೋಗ ಮತ್ತು ಬೆಲೆ ಕುಸಿತದಿಂದಾಗಿ ಅಡಿಕೆ ಬೆಳೆಗಾರರು ತೀವ್ರ ಸಂಕಷ್ಟದಲ್ಲಿದ್ದಾರೆ. ಮತ್ತೊಂದೆಡೆ ಭತ್ತದ ಕೃಷಿ ಈ ಪ್ರದೇಶದ ಲಾಭದಾಯಕ ಕೃಷಿಯೇನೂ ಅಲ್ಲ. ಇನ್ನು ಏಲಕ್ಕಿ, ವೀಳ್ಯೆದೆಲೆ, ಕಾಳು ಮೆಣಸು ಹಾಗೂ ಇತ್ತೀಚಿನ ದಿನಗಳಲ್ಲಿ ಮಲೆನಾಡನ್ನು ಪ್ರವೇಶಿಸಿರುವ ಕೋಕಾ ಮತ್ತು ವೆನಿಲಾ ಮೊದಲಾದ ಬೆಳೆಗಳಿಗೆ ಬೆಲೆ ಕುಸಿತ ಕಂಡುಬಂದಿದೆ. ಇನ್ನು ಮಲೆನಾಡಿನ ಮತ್ತೊಂದು ಜೀವಸೆಲೆ ಕಾಫಿ ತೀವ್ರ ಬಿಕ್ಕಟ್ಟಿನಲ್ಲಿದೆ. ಈ ಕಾರಣಗಳಿಂದಾಗಿ ಈ ಭಾಗದ ಕೃಷಿ ಅಪಾಯದಲ್ಲಿದೆ ಮಾತ್ರವಲ್ಲ, ಕೃಷಿ ಚಟುವಟಿಕೆಯನ್ನೇ ನಂಬಿ ಜೀವನ ಸಾಗಿಸುತ್ತಿದ್ದ ಕೃಷಿ ಕೂಲಿಕಾರರಿಗೆ 'ಕೂಲಿ ಕೆಲಸ'ವೂ ಕಡಿಮೆಯಾಗಿ ಅವರು ದಿನನಿತ್ಯದ ಅನ್ನಕ್ಕಾಗಿ ಪರಿತಪಿಸುವಂತಾಗಿದೆ.

### ಕುದುರೆಮುಖ ರಾಷ್ಟ್ರೀಯ ಉದ್ಯಾನ ಯೋಜನೆ

ಪಶ್ಚಿಮಘಟ್ಟದಲ್ಲಿ ಪರಿಸ್ಥಿತಿ ಮತ್ತಷ್ಟು ಬಿಗಡಾಯಿಸಲು ಮತ್ತು ನಕ್ಸಲೀಯರು ಈ ಪ್ರದೇಶವನ್ನು ತಮ್ಮ ಅಡಗುದಾಣವಾಗಿಸಿಕೊಳ್ಳಲು ಅವಕಾಶ ನೀಡಿದ್ದು ಈ ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಯೋಜನೆ. ಈ ಯೋಜನೆಯ ಪ್ರಕಾರ ಶೃಂಗೇರಿ, ಕೊಪ್ಪ, ಕಾರ್ಕಳ ಮತ್ತು ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಯಲ್ಲಿನ ಸುಮಾರು ೧.೩೮ ಲಕ್ಷ ಎಕರೆ ಭೂಭಾಗವನ್ನು ಈ ಯೋಜನೆಯಡಿಯಲ್ಲಿ ತರಲಾಗಿದೆ. ಶೃಂಗೇರಿ ತಾಲೂಕಿನಲ್ಲಿ ಒಟ್ಟು ೧೬ ಗ್ರಾಮಗಳು ೮೦೦ ಗಿರಿಜ ಕುಟುಂಬಗಳು ಸೇರಿ ಒಂದು ಸಾವಿರ ಕುಟುಂಬಗಳು, ಅದೇ ರೀತಿ ಕೊಪ್ಪ ತಾಲೂಕಿನ ೩ ಗ್ರಾಮಗಳು ೧೫೦ ಗಿರಿಜನ ಕುಟುಂಬಗಳು ಸೇರಿ ಒಟ್ಟು ೨೫೦ ಕುಟುಂಬಗಳು, ಮೂಡಿಗೆರೆ ತಾಲೂಕಿನ ೩ ಗ್ರಾಮಗಳು ೨೫೦ ಗಿರಿಜನ ಕುಟುಂಬಗಳು ಸೇರಿ ೩೫೦ ಕುಟುಂಬಗಳು, ಉಡುಪಿ ಜಿಲ್ಲೆಯ ಕಾರ್ಕಳ ತಾಲೂಕಿನ ೪ ಗ್ರಾಮಗಳು ೧೦೦ ಗಿರಿಜನ ಕುಟುಂಬಗಳು ಸೇರಿ ಒಟ್ಟು ೧೭೫ ಕುಟುಂಬಗಳು, ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ೧೧ ಗ್ರಾಮಗಳು, ೧೨೫ ಗಿರಿಜನ ಕುಟುಂಬಗಳು ಸೇರಿ ಒಟ್ಟು ೨೫೩ ಕುಟುಂಬಗಳು, ಹೀಗೆ ೩ ಜಿಲ್ಲೆಗಳ ೫ ತಾಲೂಕಿನ ೩೭ ಗ್ರಾಮಗಳ ೧೪೨೫ ಆದಿವಾಸಿ ಕುಟುಂಬಗಳು ಸೇರಿ ಒಟ್ಟು ೨೦೨೮ ಕುಟುಂಬಗಳು ಸದ್ಯ ಈ ಯೋಜನೆ ವ್ಯಾಪ್ತಿಯಲ್ಲಿ ಬರುತ್ತವೆ.

ಆಶ್ಚರ್ಯದ ಸಂಗತಿಯೆಂದರೆ ಸರ್ಕಾರ ಯಾವುದೇ ಗೆಜೆಟ್ ಅಂತಿಮ ಅಧಿಸೂಚನೆ ಹೊರಡಿಸುವ ಮೊದಲು ಸಾರ್ವಜನಿಕರಿಂದ ಆಕ್ಷೇಪಗಳನ್ನು ಆಹ್ವಾನಿಸಬೇಕಾದುದು ಕರ್ತವ್ಯ. ಆದರೆ ೧೯೮೭ರ ಸೆಪ್ಟೆಂಬರ್ ೨೪ರಂದು ೧.೩೯ ಲಕ್ಷ ಎಕರೆ ಅರಣ್ಯ ಪ್ರದೇಶವನ್ನು ಕುದುರೆಮುಖ ರಾಷ್ಟ್ರೀಯ ಉದ್ಯಾನವನವೆಂದು ಘೋಷಿಸಲಾಯಿತು. ಅದರ ಅಡಿಯಲ್ಲಿ ಬರುವ ಜಿಲ್ಲೆಗಳು ಮತ್ತು ಗಿರಿಜನ ಕುಟುಂಬಗಳ ವಿವರಗಳನ್ನು ಪ್ರಕಟಿಸಿತು. ೧೯೯೮ರಲ್ಲಿ ಯೋಜನೆ ಜಾರಿ ಸಂಬಂಧ ಅಲ್ಲಿನ ಗಿರಿಜನರು ಮತ್ತು ರೈತರಿಗೆ ನೋಟಿಸ್ ಸಹ ನೀಡಿ ೨೦೦೧ನೇ ಜೂನ್ ೧೮ರಂದು ಅಂತಿಮ ಅಧಿಸೂಚನೆ ಹೊರಡಿಸಿಯೇ ಬಿಟ್ಟಿತು ! ಅಂದರೆ ಸರ್ಕಾರ, ಈ ಅಧಿಸೂಚನೆಗೆ ಸಂಬಂಧಿಸಿದ ಯಾವುದೇ ರೈತರಿಂದ, ಗಿರಿಜನರಿಂದ ಆಕ್ಷೇಪಣೆಗಳನ್ನು ಸ್ವೀಕರಿಸುವ ಯಾವುದೇ ಕಾನೂನುಕ್ರಮ ಅನುಸರಿಸಲಿಲ್ಲ. ಸರ್ಕಾರದ ಏಕಾಏಕಿ ಈ ತೀರ್ಮಾನ ಸಾವಿರಾರು ಕುಟುಂಬಗಳ ಬದುಕನ್ನು, ಅದರಲ್ಲೂ ಅರಣ್ಯವನ್ನೇ ನಂಬಿ ಬದುಕು ಸಾಗಿಸುತ್ತಿದ್ದ ಗಿರಿಜನರ ಜೀವನವನ್ನೇ ಸಂಕಷ್ಟಕ್ಕೆ ಸಿಲುಕಿಸಿದೆ. ಯಾಕೆಂದರೆ ಈ ಯೋಜನೆ ಜಾರಿಯಾಗುವುದೆಂದರೆ ಇದರ ವ್ಯಾಪ್ತಿಯಲ್ಲಿ ವಾಸ ಮಾಡುವುದಾಗಲಿ, ಕೃಷಿ ಮಾಡುವುದಾಗಲಿ ಅಥವಾ ಕಟ್ಟಡ, ರಸ್ತೆ, ವಿದ್ಯುತ್ ವ್ಯವಸ್ಥೆ ಕಲ್ಪಿಸುವುದಾಗಲಿ ಸಾಧ್ಯವಿಲ್ಲ. ಇಂತಹ ಕಾರ್ಯಗಳಿಂದಾಗಿ ಪರಿಸರ ನಾಶ, ವನ್ಯಜೀವಿಗಳಿಗೆ ತೊಂದರೆಯಾಗುತ್ತದೆ ಎನ್ನುತ್ತದೆ ವನ್ಯಜೀವಿ ಸಂರಕ್ಷಣಾ ಕಾಯ್ದೆ. ಅಷ್ಟು ಮಾತ್ರವಲ್ಲ, ನೂರಾರು ವರ್ಷಗಳಿಂದ ಕಾಡಿನಲ್ಲಿಯೇ ವಾಸಿಸಿ ಅಲ್ಲೇ ನೈಸರ್ಗಿಕವಾಗಿ ಸಿಗುವ ಕಾಡುತ್ಪನ್ನಗಳನ್ನು ಸಂಗ್ರಹಿಸಿ ಅವುಗಳನ್ನು ಮಾರಾಟ ಮಾಡಿ ಜೀವನ ಸಾಗಿಸುತ್ತಿದ್ದ ಸಾವಿರಾರು ಗಿರಿಜನ ಕುಟುಂಬಗಳು ಇಂದು ಅರಣ್ಯಾಧಿಕಾರಿಗಳು ಬೀಸುವ ಕಾನೂನು ಗಾಳಕ್ಕೆ ಬಲಿಯಾಗುತ್ತಿದ್ದಾರೆ. ಹೀಗೆ ಜನರ ಬದುಕುವ ಹಕ್ಕನ್ನು ನಿರ್ದಾಕ್ಷಿಣ್ಯವಾಗಿ ಹತ್ತಿಕ್ಕುವ ಕಟ್ಟಾಜ್ಞೆಗಳು, ಅರಣ್ಯಾಧಿಕಾರಿಗಳ ಕಿರುಕುಳ, ೨೦೦೨ರಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿದ ಒಕ್ಕಲೆಬ್ಬಿಸಬೇಕೆನ್ನುವ ತೀರ್ಪು ಸಹಜವಾಗಿಯೇ ಈ ಭಾಗದಲ್ಲಿ ರೈತರಲ್ಲಿ ಮತ್ತು ಆದಿವಾಸಿಗಳಲ್ಲಿ ಆತಂಕ ಮತ್ತು ಗೊಂದಲಗಳನ್ನು ಮೂಡಿಸಿವೆ.

### ಶೈಕ್ಷಣಿಕ ಸೌಕರ್ಯಗಳಿಂದ ವಂಚನೆ

ಈ ಅಭಯಾರಣ್ಯ ವ್ಯಾಪ್ತಿಯಲ್ಲಿ ಬರುವ ಬಹುತೇಕ ಗಿರಿಜನರು ವಾಸಿಸುತ್ತಿರುವ ಕುಗ್ರಾಮಗಳು ಕನಿಷ್ಠ ಮೂಲಭೂತ, ಶೈಕ್ಷಣಿಕ ಹಾಗೂ ರಸ್ತೆ, ವಿದ್ಯುತ್, ಆರೋಗ್ಯ ಸವಲತ್ತುಗಳಿಂದ ವಂಚಿತವಾಗಿರುವುದು ಮತ್ತು ಆ ಬಗ್ಗೆ ಅಧಿಕಾರಿಗಳು, ಜನಪ್ರತಿನಿಧಿಗಳು ವಹಿಸಿರುವ ನಿರ್ಲಕ್ಷ್ಯ, ನಕ್ಸಲರ ಪ್ರವೇಶಕ್ಕೆ ಕಾರಣವಾಗಿದೆ. ಸರ್ಕಾರವು ಗಿರಿಜನರಿಗಾಗಿಯೇ ಆಶ್ರಯ ಶಾಲೆಗಳನ್ನು ಪ್ರಾರಂಭಿಸಿದ್ದರೂ ಅಲ್ಲಿ ಶಿಕ್ಷಕರ ಕೊರತೆ ಇದೆ. ಇಲ್ಲವೇ ಗಿರಿಜನ ಮಕ್ಕಳು ಆ ಶಾಲೆಯನ್ನು ತಲುಪುವುದಕ್ಕೆ ತೀರ ಕಷ್ಟಪಡಬೇಕಾಗಿದೆ. ಅದೂ ಅಲ್ಲದೆ ಅಲ್ಲಿ ಸಿಗುವ ಶಿಕ್ಷಣವೂ ೫ರಿಂದ ೭ನೇ ತರಗತಿವರೆಗೆ ಮಾತ್ರ ! ಹೈಸ್ಕೂಲ್ ಶಿಕ್ಷಣವೆಂದರೆ ದೂರದಲ್ಲಿರುವ ಶೃಂಗೇರಿ, ಕೊಪ್ಪ ಮೊದಲಾದ ನಗರಗಳಿಗೆ ಹೋಗಬೇಕು. ಅದು ದುಸ್ತರದ ಕೆಲಸ. ಹೀಗಾಗಿ ಶಾಲೆಯನ್ನು ಅರ್ಧಕ್ಕೆ ಬಿಟ್ಟು ಮಕ್ಕಳು ಗಿರಿಜನರ ಹಾಡಿಗಳಿಗೆ ವಾಪಸಾಗಿ, ಕೂಲಿಕಾರರಾಗಿಯೋ ಅಥವಾ ಅರೆ-ಬರೆ ನಿರುದ್ಯೋಗಿಗಳಾಗಿಯೋ ಬದುಕು ಸಾಗಿಸಬೇಕು. ಅಂತಹ ಶಿಕ್ಷಣ ವಂಚಿತ ಯುವಜನರ ಬಹುದೊಡ್ಡ ಪಡೆಯೆ ಇಂದು ನಕ್ಸಲೀಯರ ಪರವಾಗಿ ಅಥವಾ ಕುದುರೆಮುಖ ರಾಷ್ಟ್ರೀಯ ಉದ್ಯಾನ ವಿರೋಧಿ ಹೋರಾಟದಲ್ಲಿ ಸಕ್ರಿಯರಾಗಿದ್ದಾರೆ. ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಯೋಜನೆ ಪ್ರಾರಂಭಗೊಳ್ಳುವ ಮುನ್ನ ಈ ಪ್ರದೇಶದ ಗಿರಿಜನರಿಗೆ ಯಾವೊಂದು ಕನಿಷ್ಠ ಸವಲತ್ತುಗಳಿರಲಿಲ್ಲ. ಈ ಯೋಜನೆಗೆ ಹಸಿರು ನಿಶಾನೆ ಸಿಕ್ಕ ಮೇಲಂತೂ ಒಂದೇ ಒಂದು ಕಾಮಗಾರಿ ನಡೆಯದಂತೆ ನಿರ್ಬಂಧ ಹೇರಲಾಗಿದೆ. ಈಗ ಸರ್ಕಾರ ಮತ್ತು ಅಧಿಕಾರಿಗಳು ಸೌಲಭ್ಯ ಕಲ್ಪಿಸಲು ಪ್ರಯತ್ನಿಸುತ್ತಿದ್ದರೂ ಅದಕ್ಕೆ ಈ ಯೋಜನೆ ನಿರ್ಬಂಧ ವಿಧಿಸಿದೆ. ಜನವಸತಿ ಪ್ರದೇಶಗಳನ್ನು ಈ ಉದ್ಯಾನವನ ವ್ಯಾಪ್ತಿಯಿಂದ ಹೊರತುಪಡಿಸುವುದು ಮಾತ್ರವೇ ಅದಕ್ಕಿರುವ ಪರಿಹಾರ.

### ಆದಿವಾಸಿ ಗಿರಿಜನರ ಒಕ್ಕೂಟ ಮತ್ತು ನಕ್ಸಲೀಯರು

ಕಳೆದ ಒಂದು ದಶಕದಿಂದ ಪಶ್ಚಿಮಘಟ್ಟದಲ್ಲಿ ನಡೆದಿರುವ ಹಲವು ಹೋರಾಟಗಳು ಅದರಲ್ಲೂ ಮುಖ್ಯವಾಗಿ, ಗಂಗಡಿಕಲ್ಲು- ನೆಲ್ಲಿಬೀಡು ಗಣಿಗಾರಿಕೆ ವಿರೋಧಿ ಹೋರಾಟ, ತುಂಗಾ-ಭದ್ರ-ಮೂಲ ಉಳಿಸಿ ಹೋರಾಟ, ಕುದುರೆಮುಖ ಗಣಿಗಾರಿಕೆ ಸ್ಥಗಿತಕ್ಕೆ ಆಗ್ರಹಿಸಿ ಹಾಗೂ ಕುದುರೆಮುಖ ರಾಷ್ಟ್ರೀಯ ಉದ್ಯಾನವನ ವಿರೋಧಿ ಹೋರಾಟಗಳೆಲ್ಲವೂ ಈ ಪ್ರದೇಶದ ಜನ ಸಮುದಾಯವನ್ನು ಆಕರ್ಷಿಸುವಲ್ಲಿ ಹಾಗೂ ನಕ್ಸಲೀಯರನ್ನು ಕರೆತರುವಲ್ಲಿ ಸಾಕಷ್ಟು ಯಶಸ್ವಿಯಾಗಿವೆ. ಅದರೊಂದಿಗೆ ಆದಿವಾಸಿ ಗಿರಿಜನರಿಗೆ ಮೂಲಭೂತ ಸವಲತ್ತು ನೀಡುವಲ್ಲಿ ಆಗಿರುವ ಅನ್ಯಾಯ, ಭ್ರಷ್ಟಾಚಾರ, ಒಕ್ಕಲೆಬ್ಬಿಸಬೇಕೆಂಬ ನ್ಯಾಯಾಲಯ ತೀರ್ಪು, ಟೈಗರ್ ಪ್ರಾಜೆಕ್ಟ್ ಎಂಬ ವಿಫಲ ಪುನರ್ವಸತಿ ಕಾರ್ಯಗಳು, ಜನಪ್ರತಿನಿಧಿಗಳ ತಾತ್ಸಾರ, ಮೊದಲಾದ ಕಾರಣಗಳು ಪ್ರಮುಖವಾದವು. ವಿಶೇಷವೆಂದರೆ ಹಿಂದಿನ ಈ ಎಲ್ಲಾ ಹೋರಾಟಗಳಲ್ಲೂ ಮಲೆನಾಡಿನ ಎಲ್ಲಾ ಜನರು ಪಕ್ಷಭೇದ ಮರೆತು ಪಾಲ್ಗೊಂಡಿದ್ದಾರೆ. ಆದರೆ ಈ ಚಳುವಳಿ ಹಿಂದೆ ನಕ್ಸಲ್‌ವಾದದ ಸ್ಪಷ್ಟ ಚಿತ್ರಣ ಗೋಚರಿಸಿದ ನಂತರ ಮತ್ತು

ನಕ್ಸಲೀಯರಿಂದ ಹಲ್ಲೆ ಬೆದರಿಕೆಗಳು ಪ್ರಾರಂಭವಾದ ನಂತರ ಅವರೆಲ್ಲಾ ಹಿಂದೆ ಸರಿದಿದ್ದಾರೆ. ಪೊಲೀಸ್ ಮಾಹಿತಿದಾರರೆಂಬ ಕಾರಣಕ್ಕೆ ಹೆಮ್ಮಿಗೆ ಚಂದ್ರಕಾಂತ, ಬುಕ್ಕಡಿಬೈಲು ವ್ಯಾಪಾರಿ ಉಮೇಶ್ ಮೇಲೆ ಬೆದರಿಕೆ ಮತ್ತು ಮಾರಣಾಂತಿಕ ಹಲ್ಲೆ ನಡೆದ ನಂತರವಂತೂ ಆ ಪ್ರದೇಶಗಳ ರೈತರು ಮತ್ತು ವ್ಯಾಪಾರಸ್ಥರು ನಕ್ಸಲೀಯರನ್ನು ವಿರೋಧಿಸುವ ಏಕೈಕ ಕಾರಣದಿಂದಾಗಿಯೇ ಬಜರಂಗದಳದಂತಹ ಹಿಂದೂ ಉಗ್ರವಾದಿ ಸಂಘಟನೆಯನ್ನು ಹುಟ್ಟುಹಾಕಿದ್ದಾರೆ. ಪೊಲೀಸ್ ಮಾಹಿತಿದಾರನೆಂಬ ಕಾರಣಕ್ಕೆ ಗಿರಿಜನ ಮುಖಂಡ ಶೇಷಯ್ಯ ಕೊಲೆಯಾದ ನಂತರವಂತೂ ಬಜರಂಗದಳ ಮತ್ತಷ್ಟು ಚುರುಕಾಗಿದೆ. ಹೀಗೆ ಕಾಡಿನಲ್ಲಿರುವ ಗಿರಿಜನರನ್ನು ನಕ್ಸಲೀಯರು ಬಿಗಿದಪ್ಪಿಕೊಂಡಿದ್ದರೆ, ಮತ್ತೊಂದೆಡೆ ನಕ್ಸಲೀಯರ ಭಯವನ್ನು ತೋರಿ ಹಿಂದೂ ಮೂಲಭೂತವಾದಿಗಳು ಸಣ್ಣ ರೈತರು ಹಾಗೂ ವ್ಯಾಪಾರಸ್ಥರನ್ನು ತಮ್ಮತ್ತ ಸೆಳೆದುಕೊಳ್ಳುತ್ತಿದ್ದಾರೆ.

**ಉದ್ವಿಗ್ನತೆಯಲ್ಲಿ ಪಶ್ಚಿಮಘಟ್ಟ**

ಪಶ್ಚಿಮಘಟ್ಟದಲ್ಲಿ ಪ್ರಸ್ತುತ ಉದ್ಭವಿಸುತ್ತಿರುವ ಅಶಾಂತ ಪರಿಸ್ಥಿತಿಗೆ ನಕ್ಸಲೀಯರ ಪ್ರವೇಶ ಮಾತ್ರವೇ ಕಾರಣವಾಗಿಲ್ಲ. ಬಾಬಾಬುಡನ್‌ಗಿರಿ ವಿವಾದವನ್ನು ಸಂಘಪರಿವಾರ ಶಕ್ತಿಗಳು ತಮ್ಮ ಸಂಕುಚಿತ ರಾಜಕೀಯ ಲಾಭಕ್ಕಾಗಿ ಹುಟ್ಟುಹಾಕಿದ್ದರ ಪರಿಣಾಮವಾಗಿ ಪ್ರತಿ ವರ್ಷ ಅಕ್ಟೋಬರ್‌ನಿಂದ ಜನವರಿ ತಿಂಗಳವರೆಗೆ ಇಡೀ ಪಶ್ಚಿಮಘಟ್ಟವೇ ಪ್ರಕ್ಷುಬ್ಧತೆಗೆ ಸಿಲುಕುತ್ತಿದೆ. ಸರ್ವಧರ್ಮೀಯರ, ವಿಶೇಷವಾಗಿ ಹಿಂದೂ-ಮುಸ್ಲಿಂ ಧರ್ಮಗಳ ಶ್ರದ್ಧಾ ಕೇಂದ್ರವಾಗಿ ಬಾಬಾಬುಡನ್‌ಗಿರಿ ತನ್ನದೇ ವಿಶಿಷ್ಟ ಸಾಮರಸ್ಯದ ಕೇಂದ್ರವಾಗಿದ್ದುದು ಇಂದು ಅಶಾಂತಿಯ ಗೂಡಾಗಿದೆ.

ಈ ವಿಚಾರವಾಗಿ ನ್ಯಾಯಾಲಯದಲ್ಲಿ ಮುಜರಾಯಿ ಇಲಾಖೆ ಮತ್ತು ವಕ್ಫ್ ಮಂಡಳಿ ನಡುವಿದ್ದ ವಿವಾದಗಳು ಇತ್ಯರ್ಥಗೊಂಡಿದ್ದು, ೧೯೭೫ರ ಮುಂಚೆ ಇದ್ದ ಸ್ಥಿತಿಯಲ್ಲೇ ಎಲ್ಲಾ ಆಚರಣೆಗಳು ಮುಂದುವರೆಯಬೇಕೆಂಬ ಆದೇಶ ಜಾರಿಯಾಗಿದ್ದರೂ ಹಿಂದೆ ಯಾವತ್ತೂ ಇರದ ದತ್ತಮಾಲೆ ಎಂಬ ಆಚರಣೆಯೊಂದನ್ನು ಜಿಲ್ಲಾಡಳಿತವೇ ಮಾನ್ಯಗೊಳಿಸಿರುವುದು ತೀವ್ರ ವಿವಾದಕ್ಕೆ ಗ್ರಾಸವಾಗಿದೆ. ೧೯೯೯ರ ನಂತರವಂತೂ ಇಡೀ ಮಲೆನಾಡು ಮತ್ತು ಪಶ್ಚಿಮ ಘಟ್ಟ ಪ್ರದೇಶಗಳು ಕೋಮು ಉದ್ವಿಗ್ನತೆಗೆ ಒಳಗಾಗುತ್ತಲೇ ಇವೆ. ನಕ್ಸಲೀಯರ ಹಿಂಸೆಯನ್ನು ವಿರೋಧಿಸುವ ನೆಪದಲ್ಲಿ ಕೋಮು ಸಂಘರ್ಷಕ್ಕೆ ಎಡೆಮಾಡುವುದು ಮತ್ತು ಶೋಷಣೆಯನ್ನು ಕೊನೆಗಾಣಿಸುವ ನೆಪದಲ್ಲಿ ಹಿಂಸೆಗೆ ಯುವಜನರನ್ನು ತಯಾರು ಮಾಡುವ ಕೆಲಸವನ್ನು ನಕ್ಸಲೀಯರು ಮತ್ತು ಸಂಘ ಪರಿವಾರ ಶಕ್ತಿಗಳು ಏಕಕಾಲಕ್ಕೆ ನಡೆಸುತ್ತಿವೆ.

**ಅಂತರಂಗದ ತಲ್ಲಣಗಳು**

ಸದ್ಯದ ಪರಿಸ್ಥಿತಿಯಲ್ಲಿ ಪಶ್ಚಿಮಘಟ್ಟದಲ್ಲಿನ ಜನರ ಬದುಕು ಕೋಮು ದ್ವೇಷದಿಂದಾಗಿ ಉದ್ವಿಗ್ನಗೊಂಡಿದೆ, ನಕ್ಸಲೀಯರ ಹಾವಳಿಯಿಂದಾಗಿ ತತ್ತರಿಸಿದೆ. ಮತ್ತೊಂದೆಡೆ ಬೆಲೆ ಕುಸಿತ, ಹಳದಿರೋಗ, ವಿಪರೀತ ಸಾಲದಿಂದಾಗಿ ರೈತಾಪಿ - ಕೂಲಿಕಾರರ ಬದುಕು ಆತ್ಮಹತ್ಯೆಯತ್ತ ಸಾಗಿದೆ. ನಕ್ಸಲ್ ಚಟುವಟಿಕೆಗಳು ಈ ಪ್ರದೇಶದ ಜನರ ವೈವಾಹಿಕ ಸಂಬಂಧಗಳು ಮತ್ತು ಆರ್ಥಿಕ ಕ್ಷೇತ್ರಗಳ ಮೇಲೆಯೂ ತೀವ್ರ ರೀತಿಯ ಪರಿಣಾಮವನ್ನುಂಟುಮಾಡಿವೆ. ಮುಖ್ಯವಾಗಿ ಕಾಡುಗಳ ಮಧ್ಯೆ ಕೃಷಿ ಮಾಡಿಕೊಂಡು ಒಂಟಿ ಮನೆಗಳಲ್ಲಿ ಬದುಕುತ್ತಿರುವ ರೈತ ಕುಟುಂಬಗಳ ಯುವಜನರಿಗೆ, ನಕ್ಸಲೀಯರ ಭಯದ ಹಿನ್ನೆಲೆಯಲ್ಲಿ ಹೆಣ್ಣು ಕೊಡುವವರು ಹೆದರುತ್ತಿರುವ ಕಾರಣ ಮದುವೆ ಸಂಬಂಧಗಳು ಏರ್ಪಡಾಗುತ್ತಿಲ್ಲ. ಹಲವು ಗೊತ್ತಾದ ಸಂಬಂಧಗಳು ಈ ಕಾರಣದಿಂದಾಗಿ ಕಡಿದು ಹೋಗಿವೆ. ಮತ್ತೊಂದೆಡೆ ಅಂತಹುದೇ ಪರಿಸ್ಥಿತಿಯಲ್ಲಿ ಬದುಕುತ್ತಿರುವ ಮಲೆನಾಡಿನ ಹೆಂಗಸರು ಸೂರ್ಯಾಸ್ತದ ನಂತರ ಮನೆ ಒಳಹೊಕ್ಕರೆ ಮತ್ತೆ ಮನೆ ಹೊರಗೆ ಕಾಲಿಡುವುದು ಸೂರ್ಯೋದಯದ ನಂತರವೇ ಎಂಬ ಸ್ಥಿತಿ ನಿರ್ಮಾಣವಾಗಿದೆ. ಮಲೆನಾಡಿನಲ್ಲಿ ಮದುವೆ - ಮುಂಜಿ ಮೊದಲಾದ ಕಾರ್ಯಗಳಿಗಾಗಿ ೩-೪ ಮೈಲಿ ಕಾಡಿನಲ್ಲಿ ನಡೆದು ಹೋಗಬೇಕಾದ ಪರಿಸ್ಥಿತಿ ಇರುವ ಕಾರಣ ಅಂತಹ ಕಾರ್ಯಗಳಲ್ಲಿ ಭಾಗವಹಿಸುವವರ ಸಂಖ್ಯೆಯಲ್ಲಿ ಕುಸಿತ ಕಂಡುಬಂದಿರುವ ಪ್ರಕರಣಗಳು ಸಾಕಷ್ಟಿವೆ. ಹೀಗೆ ಇಂತಹ ಹಲವು ಅಂತರಂಗದ ತಲ್ಲಣಗಳನ್ನು ಮನದಲ್ಲಡಗಿಸಿಕೊಂಡು ಶಾಂತಿಯ ಬದುಕನ್ನು ಸಾಗಿಸಲು ಅಲ್ಲಿಯ ಜನರಿಂದ ಹೇಗೆ ಸಾಧ್ಯ ?

ಜಗತ್ತಿನ ಅತ್ಯಂತ ವಿಶಿಷ್ಟ ಜೀವ ವೈವಿಧ್ಯತೆ ಹೊಂದಿರುವ ಪಶ್ಚಿಮಘಟ್ಟ ಅದರ ಹೃದಯ ಭಾಗವಾದ ಮಲೆನಾಡು ಇಂದು ಅಶಾಂತಿಯ, ಸಂಘರ್ಷದ ಭಯದ ವಾತಾವರಣದಲ್ಲಿ ಬದುಕುತ್ತಿದೆ. ಇದನ್ನು ಬದಲಾಯಿಸಲು ಸರ್ಕಾರ ಎಲ್ಲಾ ರೀತಿಯ ಹಿಂಸೆಗಳನ್ನು ವಿರೋಧಿಸುವುದರ ಜೊತೆಯಲ್ಲೇ ಪಶ್ಚಿಮಘಟ್ಟದಲ್ಲಿ ವಾಸಿಸುತ್ತಿರುವ ಆದಿವಾಸಿ ಕುಟುಂಬಗಳನ್ನೂ ರೈತರನ್ನೂ ಅವರ ಸಂಕಷ್ಟಗಳಿಂದ ಹೊರಬರಲು ಅಗತ್ಯವಿರುವ ದೀರ್ಘಕಾಲದ ಮೂಲ ಸೌಲಭ್ಯಗಳನ್ನು ಕಲ್ಪಿಸಿ ಅವರಲ್ಲಿ ಆತ್ಮವಿಶ್ವಾಸವನ್ನು ತುಂಬುವ ಕೆಲಸ ನಡೆಸಬೇಕೆ ವಿನಾ ಸಮಸ್ಯೆ ಉಲ್ಬಣಗೊಂಡಾಗ ಮಾತ್ರ ಮಧ್ಯೆ ಪ್ರವೇಶಿಸಿ ಕೋಟ್ಯಂತರ ರೂ.ಗಳ ಪ್ಯಾಕೇಜ್‌ಗಳನ್ನು ಘೋಷಿಸುವುದರಿಂದ ಯಾವುದೇ ಪ್ರಯೋಜನವಾಗದು ಎಂಬ ಸತ್ಯವನ್ನು ಅರ್ಥಮಾಡಿಕೊಳ್ಳಬೇಕು.

**ಕೆ. ಮಹಾಂತೇಶ್**
'ಬಸವೇಶ್ವರ ನಿಲಯ', ಬಿ-೮೧, ೫ನೇ 'ಎ' ಮುಖ್ಯರಸ್ತೆ, ಬಾಹುಬಲಿನಗರ,
ಜಾಲಹಳ್ಳಿ, ಬೆಂಗಳೂರು - ೫೬೦ ೦೧೩

---

*೪೫ನೇ ಪುಟದಿಂದ (ಹೃದಯ ಹೀನರು)*

ನಿಲ್ಲಿಸಬೇಡ. ಕಾಲೇಜಿಗೆ ಹೋಗು, ನಿನಗೆ ಒಳ್ಳೆಯ ಭವಿಷ್ಯವಿದೆ' ಅಂತ. ಆದರೆ 'ನಿನ್ನನ್ನು ಓದಿಸೋಕೆ ನನ್ನ ಹತ್ತಿರ ದುಡ್ಡಿಲ್ಲ, ಕೆಲಸಕ್ಕೆ ಹೋಗು' ಎಂದು ನೀವು ಜೋರು ಮಾಡಿ ಕಳುಹಿಸಿದಿರಿ.

ಮೊನ್ನೆ ಕಾಲೇಜಿಗೆ ಹೋಗುವ ಯಜಮಾನರ, ಮಗ ಕುಡಿದು ಬಂದಿದ್ದ. ಮನೆಯಲ್ಲಿ ಯಾರೂ ಇರಲಿಲ್ಲ. ಅವನು ಬಂದವನೇ ನನ್ನನ್ನು ದರದರನೆ ಒಂದು ಕೋಣೆಗೆ ಎಳೆದುಕೊಂಡು ಹೋಗಿ ನನ್ನ ಬಟ್ಟೆಗಳನ್ನು ಕಿತ್ತೊಗೆದು ನನ್ನ ಮೇಲೆ ಮೃಗದ ಹಾಗೆ ಆಕ್ರಮಣ ಮಾಡಿದ. ಪದೇ ಪದೇ ಪರಚಿ ಮೈಯೆಲ್ಲ ಗಾಯಮಾಡಿದ. ಹೀಗಾದರೆ ನಾನು ಇಲ್ಲಿ ಹೇಗೆ ಇರಲಿ ಅಪ್ಪಾ? ಉಪವಾಸವಿದ್ದರೂ ಸರಿ, ನಾನು ಮನೆಗೆ ಬಂದು ಇರುತ್ತೇನೆ. ದಯವಿಟ್ಟು ಕೂಡಲೇ ಬಂದು ನನ್ನನ್ನು ಕರೆದುಕೊಂಡು ಹೋಗಿ ಇಲ್ಲದಿದ್ದರೆ ನನಗೆ ಸಾವೇ ಗತಿ.

ಎಷ್ಟೋ ಸಾರಿ ನಿಮಗೆ ಪತ್ರ ಬರೆಯಲು ಪ್ರಯತ್ನಪಟ್ಟೆ. ಇಲ್ಲಿಗೆ ಬರುವಾಗ ಕಾಗದ, ಪೆನ್ನು, ಕವರು, ಸ್ಟಾಂಪುಗಳನ್ನೇನೋ ತಂದಿದ್ದೆ. ಆದರೆ ಅಂಚೆ ಪೆಟ್ಟಿಗೆಗೆ ಹಾಕುವ ಬಗೆ ಹೇಗೆಂದು ಗೊತ್ತಾಗದೆ ಇಷ್ಟು ಕಾಲ ಒದ್ದಾಡಿದೆ. ಈಗ ಪಕ್ಕದ ಮನೆಯ ಯಾರೋ ಪುಣ್ಯಾತ್ಮರ ಸಹಾಯದಿಂದ ಇದು ಅಂಚೆ ಪೆಟ್ಟಿಗೆ ಸೇರುತ್ತಿದೆ. ದೇವರ ದಯದಿಂದ ಆದಷ್ಟು ಬೇಗ ಈ ಪತ್ರ ನಿಮ್ಮ ಕೈಸೇರಿ, ನೀವು ಕೂಡಲೇ ಇಲ್ಲಿಗೆ ಬಂದು ನನ್ನನ್ನು ರಕ್ಷಿಸುತ್ತೀರಿ ಎಂದು ನಂಬುತ್ತೇನೆ.

ಇತಿ
ನಿಮ್ಮ ಮಗಳು
ಭಾಗೀರಥಿ

ಚಂಪಿ ಕಾಗದವನ್ನು ಓದಿ ಮುಗಿಸುವುದಕ್ಕೆ ಮುಂಚೆಯೇ ಚನಿಯ ಗೊರಕೆ ಹೊಡೆಯಲಾರಂಭಿಸಿದ. ಚಂಪಿ ಪತ್ರ ಬರೆದ ತಾರೀಕನ್ನು ನೋಡಿದಳು. ಹದಿನೈದು ದಿನಗಳ ಹಿಂದೆ ಬರೆದ ಪತ್ರವಾಗಿತ್ತದು. ಬೆಂಗಳೂರಿನಿಂದ ಇಲ್ಲಿಗೆ ಬರಲು ಇಷ್ಟು ದಿನ ಬೇಕಾಯಿತೇ ಎಂದು ಅವಳು ಆಶ್ಚರ್ಯಗೊಂಡಳು.

ಮಾರನೇ ದಿನ ಬೆಳಿಗ್ಗೆ ಚನಿಯ ಚಾಪೆಯಿಂದ ಮೇಲೇಳುತ್ತಲೇ ಕೃಷ್ಣಮಾಸ್ತರರು ಅವನ ಮನೆಯ ಮುಂದೆ ಬಂದು ನಿಂತು ಅವನನ್ನು ಕರೆದರು. ಚನಿಯ ಎದ್ದು ಹೋಗಿ ಬಾಗಿಲು ತೆರೆದ. ಮಾಸ್ತರರ ಕೈಯಲ್ಲಿ ಆ ದಿನದ ವರ್ತಮಾನ ಪತ್ರಿಕೆ ಇತ್ತು. ಅವರ ಮುಖದಲ್ಲಿ ಗಾಬರಿ – ದುಃಖಗಳು ತುಂಬಿದ್ದವು. ಅವರು ಗದ್ಗದ ಧ್ವನಿಯಲ್ಲಿ ಹೇಳಿದರು :

'ಚನಿಯ, ಇಲ್ಲಿ ನೋಡು. ನಿನ್ನ ಮಗಳು ಬಾಗಿ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ. ಎಷ್ಟು ಒಳ್ಳೆಯ ಹುಡುಗಿ ! ನಾನು ನಿನಗೆ ಎಷ್ಟು ಬಾರಿ ಹೇಳಿದೆ ಹಾಗೆಲ್ಲ ಶ್ರೀಮಂತರ ಮನೆಗೆ ಅಂತಹ ಬುದ್ಧಿವಂತ ಹುಡುಗಿಯನ್ನು ಕೆಲಸಕ್ಕೆ ಕಳುಹಿಸಬೇಡ ಅಂತ. ತಿಂಗಳಿಗೆ ಸಾವಿರ ಕೊಟ್ಟರೇನು, ಎರಡು ಸಾವಿರ ಕೊಟ್ಟರೇನು, ಬಡವರನ್ನು ತುಚ್ಛವಾಗಿ ಕಂಡು, ಮೃಗಗಳಂತೆ ನಡೆದುಕೊಳ್ಳುವ ಅಂಥವರ ಕೈಗೆ ಭಾಗೀರಥಿಯಂಥ ಗಿಣಿಯನ್ನು ಯಾರಾದರೂ ಒಪ್ಪಿಸುತ್ತಾರೆಯೆ ? ಈಗ ನೋಡು, ಏನಾಯಿತು ? ಹ್ಹುಂ, ಇನ್ನು ಹೇಳಿ ಏನು ಪ್ರಯೋಜನ ? ಹೊರಡು, ಮುಂದಿನ ವ್ಯವಸ್ಥೆ ಆಗಬೇಕಲ್ಲ ?'

ಚನಿಯ ಗರಬಡಿದವನಂತೆ ಮಾಸ್ತರರ ಮುಖವನ್ನೇ ನೋಡುತ್ತ ದಿಙ್ಮೂಢನಾಗಿ ನಿಂತ.

**ಪಾರ್ವತಿ ಜಿ. ಐತಾಳ್**
ಸುರಗಣ, ಬಸರೂರು ಕ್ರಾಸ್, ಕುಂದಾಪುರ, ಉಡುಪಿ ಜಿಲ್ಲೆ - ೫೭೬ ೨೦೧

'**ಯು**ಕ್ತಾಯುಕ್ತ ವಿವೇಕಶೂನ್ಯ ಹೃದಯಃ ಧನ್ಯೋ ಜನಃ ಪ್ರಾಕೃತಃ' ಎಂಬ ಉಕ್ತಿಯೊಂದಿದೆ. ಸರಿ ತಪ್ಪುಗಳ ವಿವೇಚನೆಯೇ ಇಲ್ಲದ ಆ ತಿಳಿಗೇಡಿಯೇ ಧನ್ಯ. ಇದೆಂತಹ ಮಾತು ? ಬುದ್ಧಿಜೀವಿಗಳು, ಪ್ರಾಣಿಜಗತ್ತಿನಲ್ಲೇ ಅತಿ ಸಂಕೀರ್ಣವಾದ ವಿಶಿಷ್ಟವಾದ ಮೆದುಳನ್ನು ಹೊಂದಿರುವವರು ಎಂದೆಲ್ಲಾ ಜಂಭಪಡುವ ನಮ್ಮಿಂದ ಇಂತಹ ಉದ್ಗಾರವೊಂದು ಹೊರಟದ್ದಾದರೂ ಏಕೆ ?

ಮಾನವರಾದ ನಮ್ಮಷ್ಟು ಸೂಕ್ಷ್ಮ ಸಂವೇದನಾಶೀಲ ಪ್ರಾಣಿ ಇನ್ನೊಂದಿಲ್ಲ. ಸ್ಮರಣೆ ಮತ್ತು ನಿರೀಕ್ಷೆಗಳ ವರ ನಮಗೆ ದೊರೆತಿದೆ. ಹಿಂದೆ ನಡೆದ ಘಟನೆಗಳ ವಿವರ ನಮಗೆ ನೆನಪಿರುತ್ತದೆ ಮತ್ತು ಮುಂದೆ ನಡೆಯಬಹುದಾದ ಘಟನೆಗಳನ್ನು ಊಹೆಮಾಡಲು ನಮಗೆ ಸಾಧ್ಯ. ಹಾಗಿರುವುದರಿಂದಲೇ ಹಿಂದಿನ ಸರಿ ತಪ್ಪುಗಳನ್ನು ವಿವೇಚಿಸಿ ಮುಂದೆ ಸರಿಯಾದ ಮಾರ್ಗದಲ್ಲಿ ನಡೆಯಲು ಜಾಗರೂಕತೆ ವಹಿಸುತ್ತೇವೆ. ಮುಂದೆ ನಡೆಯ ಬಹುದಾದ ಘಟನೆಗಳನ್ನು ಊಹಿಸಿ ಅದಕ್ಕೆ ತಯಾರಿ ನಡೆಸಿ, ಫಲಿತಾಂಶಗಳ ನಿರೀಕ್ಷೆಯಲ್ಲಿ ಹಿಗ್ಗುತ್ತೇವೆ. ಹೀಗೆಲ್ಲಾ ವಿವೇಚಿಸಬಲ್ಲ ಮೆದುಳು ನಮಗಿರುವುದರಿಂದಲೇ ಬೇರೆಲ್ಲಾ ಪ್ರಾಣಿಗಳಿಗಿಂತ ನಾವು ಇಷ್ಟೊಂದು ಸುಖ ಸೌಲಭ್ಯಗಳನ್ನೆಲ್ಲ ಅನ್ವೇಷಿಸಿ, ಪ್ರಕೃತಿಯನ್ನೇ ನಮಗಿಷ್ಟಬಂದಂತೆ ಪಳಗಿಸುತ್ತಾ ಸಂತೋಷವಾಗಿದ್ದೇವೆ. ಭೂತ ಭವಿಷ್ಯತ್ತುಗಳ ಬಗ್ಗೆ ನಮಗಿರುವ ಅಗಾಧ ಅರಿವೇ ನಮ್ಮನ್ನು ಮಾನವರನ್ನಾಗಿಸಿದೆ. ಇವೆಲ್ಲಾ ಹೀಗೇ ಇರಬೇಕಾದುದು ಸರಿ. ಆದರೂ ನಾವೆಲ್ಲರೂ ನಮ್ಮ ಜೀವನದಲ್ಲಿ ಒಂದಲ್ಲಾ ಒಂದು ಬಾರಿ ನಮ್ಮ ಸುತ್ತಲಿನ ಇತರ ಪ್ರಾಣಿಗಳ ನೆಮ್ಮದಿಯನ್ನು ಕಂಡು ಅಸೂಯೆಪಟ್ಟೇ ಇರುತ್ತೇವಲ್ಲ? ಒಮ್ಮೆಯಾದರೂ ಆ ತಿಳಿಗೇಡಿಗಳನ್ನೇ ಧನ್ಯರು ಎಂದುಕೊಂಡದ್ದು ಇದೆಯಲ್ಲ, ಇದು ಏಕೆ ಹೀಗೆ ?

ಆ ಪ್ರಾಣಿಗಳ ಜೀವನದಲ್ಲಿ ನಮ್ಮ ಜೀವನದಷ್ಟು ಸಂಕೀರ್ಣತೆಯಾಗಲೀ ಅದರಿಂದ ಉಂಟಾದ ಸಮಸ್ಯೆಗಳಾಗಲೀ ಅತಿ ಕಡಿಮೆ. ಪ್ರಾಣಿಗಳೂ ನಾವು ನೋವನ್ನು ಅನುಭವಿಸುತ್ತವೆ. ಆದರೂ ಅವು ಅವುಗಳನ್ನು ಸಮಸ್ಯೆ ಎಂದು ಪರಿಗಣಿಸುವುದಿಲ್ಲ. ಅವುಗಳ ಸರಳ ಜೀವನದಲ್ಲಿ ಹಸಿವಾದಾಗ ಆಹಾರ ಹುಡುಕಿ ತಿನ್ನುವುದು, ದಣಿದಾಗ ನಿದ್ರಿಸುವುದು ಇತ್ಯಾದಿ ಚಟುವಟಿಕೆಗಳು ಅವುಗಳ ನೈಸರ್ಗಿಕ ಪ್ರವೃತ್ತಿಯಿಂದ ನಿಯಂತ್ರಿಸಲ್ಪಡುತ್ತವೆಯೇ ಹೊರತು ಆತಂಕದಿಂದ ಕೂಡಿದ ಮುಂದಾಲೋಚನೆಯಿಂದಲ್ಲ. ನಮಗೆ ತಿಳಿದ ಮಟ್ಟಿಗೆ ಇತರ ಪ್ರಾಣಿಗಳು ಆಯಾ ಕ್ಷಣದಲ್ಲಿ ಮಾಡುತ್ತಿರುವ ಕೆಲಸಗಳಲ್ಲಿ ಅದೆಷ್ಟು ತಲ್ಲೀನವಾಗಿರು ತ್ತವೆಯೆಂದರೆ ಅವುಗಳಿಗೆ ಈ ಜೀವನದ ಅರ್ಥ ವೇನು ? ಇದಕ್ಕೊಂದು ಭವಿಷ್ಯವಿದೆಯೇ ? ಎಂದೆಲ್ಲಾ ತಲೆಗೆ ಹೋಗುವುದೇ ಇಲ್ಲ. ಆ ಪ್ರಾಣಿಗಳಿಗೆ ಸಂತೋಷವೆಂದರೆ ತತ್‌ಕ್ಷಣದಲ್ಲಿ ದೊರೆ ಯುತ್ತಿರುವ ಸುಖ; ನಾಳಿನ ಸುಖ ಸಂತೋಷಗಳ ಬಗ್ಗೆ ದೊರೆಯುವ ಆಶ್ವಾಸನೆ ಅಲ್ಲ.

**ಡಾ|| ಕೆ. ಪೂರ್ಣಮಂಗಳಾ**

ಇದಕ್ಕೆ ಕಾರಣ ಇತರ ಪ್ರಾಣಿಗಳು ನಮಗಿಂತ ಕಡಿಮೆ ಸಂವೇದನಾಶೀಲವಾಗಿರುವುದು ಎನ್ನೋಣವೆಂದರೆ ಹಾಗೇನೂ ಅಲ್ಲ. ಸಾಮಾನ್ಯವಾಗಿ ಇತರ ಪ್ರಾಣಿಗಳ ಇಂದ್ರಿಯಗಳು ನಮ್ಮದಕ್ಕಿಂತ ಹೆಚ್ಚು ಸೂಕ್ಷ್ಮವಾಗಿರುತ್ತವೆ. ಹಾಗೆಯೇ ಅವು ತಮ್ಮ ಆಹಾರ ಮತ್ತು ನಿದ್ರೆಯನ್ನು ಆಳವಾಗಿ ಅನುಭವಿಸಿ ಆನಂದಿಸುತ್ತವೆ. ಇಂದ್ರಿಯಗಳು ಚುರುಕಾಗಿದ್ದರೂ ಮೆದುಳು ಸಂವೇದನೆಯಲ್ಲಿ ಸ್ವಲ್ಪ ಮಂದವಾದ ಕಾರಣ ಅವುಗಳು ಜೀವನವನ್ನು ಅಭ್ಯಾಸಬಲದಿಂದ ಮಾಡುತ್ತವೆಯೇ ಹೊರತು, ಕಾರ್ಯ ಕಾರಣಗಳನ್ನೆಲ್ಲಾ ಚಿಂತಿಸಿ ಅಲ್ಲ. ಅವುಗಳಿಗೆ ಸ್ಮರಣ ಶಕ್ತಿಯಾಗಲೀ ಊಹಿಸುವ ಶಕ್ತಿಯಾಗಲೀ ಅತೀವ ಕಡಿಮೆ ಇರುತ್ತದೆ.

ಸೂಕ್ಷ್ಮ ಸಂವೇದನಾಶೀಲ ಮೆದುಳು ಮಾನವ ಜೀವನದ ಸಮೃದ್ಧಿಗೆ ಹೆಚ್ಚು ಕೊಡುಗೆ ಕೊಟ್ಟಿದೆ ಎಂಬುದರ ಬಗ್ಗೆ ಯಾವ ಸಂಶಯವೂ ಇಲ್ಲ. ಆದರೆ, ಇದಕ್ಕಾಗಿ ನಾವು ತೆರುತ್ತಿರುವ ಬೆಲೆ ಮಾತ್ರ ಅಪಾರ; ಈ ಸೂಕ್ಷ್ಮ ಸಂವೇದನೆಯು ನಮ್ಮನ್ನು ಎಲ್ಲ ರೀತಿಯಲ್ಲೂ ಅತಿ ನಾಜೂಕಾಗಿ ಮಾಡಿ ನಲುಗುವಂತೆ ಮಾಡುತ್ತಿದೆ. ಹಾಗೆಂದು ಸಂವೇದನೆಯ ಸೂಕ್ಷ್ಮತೆ ಕಡಿಮೆಯಾದಷ್ಟೂ ನಾವು ಹೆಚ್ಚು ಹೆಚ್ಚು ಕಲ್ಲುಗಳಂತಾಗುತ್ತಾ ಆನಂದಿಸುವುದೂ ಕಡಿಮೆಯಾಗುತ್ತದೆ. ಈ ಸಂವೇದನೆಯ ಸೂಕ್ಷ್ಮತೆ ಅತಿ ಮೃದುತ್ವ ಮತ್ತು ನಾಜೂಕನ್ನು ಅಪೇಕ್ಷಿಸುತ್ತದೆ. ಕಣ್ಣುಗುಡ್ಡೆ, ಕಿವಿತಮಟೆ, ನಾಲಿಗೆ, ನರಗಳ ತುದಿ, ಕೊನೆಗೆ ಮೆದುಳು ಇವೆಲ್ಲಾ ಮೃದು, ನಾಜೂಕು ಮತ್ತು ಸುಲಭವಾಗಿ ನಾಶವಾಗು ವಂತಹವು. ಇವೆಲ್ಲಾ ಅತಿಸೂಕ್ಷ್ಮವೂ ಆಗಿದ್ದು ಶಾಶ್ವತವೂ ಆಗುವಂತೆ ಮಾಡಲು ಸಾಧ್ಯವಿಲ್ಲ.

ನಮಗೆ ಅತ್ಯಂತ ಆನಂದ ಬೇಕಾದಲ್ಲಿ ನಾವು ಅತ್ಯಂತ ನೋವು ಅನುಭವಿಸಲೂ ಅವಕಾಶವಿರುತ್ತದೆ. ಸುಖ ಬೇಕು, ದುಃಖ ಬೇಡ ಎನ್ನುವಂತಿಲ್ಲ. ಅತಿಯಾಗಿ ಅನುಭವಿಸುವ ಸುಖ ಕೊನೆಗೆ ದುಃಖವಾಗಿಯೇ ಪರಿಣಮಿಸಬಹುದು. ಅತಿ ರುಚಿಯಾದ ಅಥವಾ ಅತಿ ಪುಷ್ಟಿಕರವಾದ ಆಹಾರ ನಮ್ಮ ರುಚಿ ಕೆಡಿಸಿ, ನಮ್ಮನ್ನು ರೋಗಿಗಳನ್ನಾಗಿ ಮಾಡುತ್ತದೆ. ಈ ಜೀವನದಲ್ಲಿ ಅದೆಷ್ಟು ಒಳ್ಳೆಯದಿದೆಯೋ ಅಷ್ಟು ಕೆಟ್ಟದ್ದೂ ಇದೆ. ಒಬ್ಬ ವ್ಯಕ್ತಿಯನ್ನು ನಾವು ಎಷ್ಟು ಪ್ರೀತಿಸುತ್ತೇವೋ, ಅವರೊಂದಿಗಿರಲು ಎಷ್ಟು ಬಯಸುತ್ತೇವೋ, ಅಷ್ಟೇ ಮಹತ್ತರ ದುಃಖ ಅವರ ವಿರಹ ಅಥವಾ ಮರಣದಲ್ಲಿ ನಾವು ಅನುಭವಿಸಬೇಕಾಗುತ್ತದೆ. ತಿಳುವಳಿಕೆ ಹೆಚ್ಚಿದಂತೆಲ್ಲಾ ನಾವು ಅದಕ್ಕೆ ತೆರಬೇಕಾದ ಬೆಲೆಯೂ ಹೆಚ್ಚುತ್ತದೆ. ಆದರೆ ಇದು ಹಿಂದೆ ಬರಲಾರದ ಏಕಮುಖ ಮಾರ್ಗ. ಈಗ ನಾವು ಮತ್ತೆ ಜೀವವಿಕಾಸ ಪ್ರಕ್ರಿಯೆಯಲ್ಲಿ ಹಿಂದಿರುಗಿ ಪ್ರಾಣಿಯಂತೆಯೋ ಸಸ್ಯದಂತೆಯೋ ಲೋಹದಂತೆಯೋ ಆಗಲಾರೆವು.

ಆದರೂ ಇಂಥ ಪ್ರಯತ್ನಗಳು ಸಾಮಾನ್ಯವಾಗಿ ನಡೆಯುತ್ತಿರುತ್ತವೆ. ಸ್ತ್ರೀಯಿಂದ ಆಳವಾಗಿ ನೋವನ್ನು ಅನುಭವಿಸಿದ ಯಾವನೋ ಒಬ್ಬ ಪುರುಷ ಸ್ತ್ರೀ ಜಾತಿಯನ್ನೇ ದ್ವೇಷಿಸುತ್ತಾ ತನ್ನ ಚಿಪ್ಪಿನೊಳಗೆ ಅವಿತುಕೊಳ್ಳುವ ಆಮೆಯಂತಾಗಲು ಪ್ರಯತ್ನಿಸುತ್ತಿರುತ್ತಾನೆ. ಅತಿ ಸೂಕ್ಷ್ಮ ಬುದ್ಧಿಯ ಬಾಲಕನೊಬ್ಬ ಶಾಲೆ ಗೆಳೆಯರ ಮುಂದೆ ತನ್ನ ಮೃದುಸ್ವಭಾವ ಗೊತ್ತಾಗದಿರಲೆಂದು ರೌಡಿಯಂತೆ ತೋರ್ಪಡಿಸಿಕೊಳ್ಳುತ್ತಿರುತ್ತಾನೆ. ಅವನೇ ಮುಂದೆ ಬೆಳೆದಂತೆಲ್ಲಾ ತಾನೊಬ್ಬ ಹಿ ಮ್ಯಾನ್ ಎಂಬಂತೆ ತೋರ್ಪಡಿಸಿಕೊಳ್ಳುತ್ತಾ ಬುದ್ಧಿಜೀವಿ, ಭಾವಜೀವಿಗಳೆಲ್ಲಾ ನಿಷ್ಪ್ರಯೋಜಕರೆಂದು ಹೀಗಳೆಯುತ್ತಾ ಬದುಕುತ್ತಾನೆ. ಅದೇ ವ್ಯಕ್ತಿ ತನ್ನ ಇಬ್ಬಗೆಯ ಭಾವನೆಗಳ ತುಮುಲದ ನೋವನ್ನು ಸಹಿಸಲಾರದೇ ಕೊನೆಗೊಮ್ಮೆ ಆತ್ಮಹತ್ಯೆಗೂ ಪ್ರಯತ್ನಿಸ ಬಹುದು. ಇಲ್ಲದಿದ್ದರೂ ಇಂತಹ ದುರದೃಷ್ಟ ವ್ಯಕ್ತಿಗಳು ಬದು ಕಿದ್ದೂ ಅರ್ಧ ಸತ್ತಿರುತ್ತಾರೆ; ಅವರ ನಿಜವಾದ ಅರ್ಧ ಆಗಲೇ ಸತ್ತುಹೋಗಿರುತ್ತದೆ.

ಹಾಗಿದ್ದಲ್ಲಿ, ಸೂಕ್ಷ್ಮವಾಗಿ ಎಲ್ಲ ಆನಂದಗಳನ್ನೂ ಅನುಭವಿಸಲು ನಾವು ಎಲ್ಲ ವೇದನೆಗಳನ್ನೂ ಅನುಭವಿಸಲೇಬೇಕೇ ? ಇಲ್ಲವಾದಲ್ಲಿ ಸಂವೇದನೆ ಸೂಕ್ಷ್ಮವಾಗಿರುವುದು ಹೇಗೆ ಸಾಧ್ಯ ? ಮುಳ್ಳು ಚುಚ್ಚದಿರಲೆಂದು ಚರ್ಮ ಒರಟಾಗಿಸಿಕೊಂಡರೆ ಮೃದು ಹೂವಿನ ಸ್ಪರ್ಶದ ಆನಂದವೂ ದೊರೆಯುವುದಿಲ್ಲ. ಇಂತಹ ಜೀವನ ಕೇವಲ ವೈರುಧ್ಯ ಮತ್ತು ಸಂಘರ್ಷಗಳಿಂದ ಕೂಡಿರುವಂತೆ ಕಾಣುತ್ತದೆ. ಸುಖ ಬಯಸಿ ಹೆಚ್ಚು ಹೆಚ್ಚು ಶ್ರಮಪಟ್ಟಂತೆಲ್ಲಾ ನಾವು ನಿಜವಾದ ಸುಖವನ್ನು ಕೊಲ್ಲುತ್ತಿರುತ್ತೇವೆ. ಸುಖವನ್ನು ಶಾಶ್ವತಗೊಳಿಸುವ ಪ್ರಯತ್ನದಲ್ಲಿ ಆ ಸುಖ ನಶಿಸಿಹೋಗುತ್ತದೆ. ಸಂಗೀತ ಆನಂದ ಕೊಡುವುದು ಅದರ ಲಯ ಮತ್ತು ಚಲನೆಗಳಿಂದ. ಸಂಗೀತದ ಚಲನೆ ಯನ್ನು ನಿಲ್ಲಿಸಿದ ಕ್ಷಣವೇ ಒಂದೇ ಸ್ವರ ತನ್ನ ಕಾಲಕ್ಕಿಂತ ಹೆಚ್ಚು ನುಡಿಯುತ್ತಾ ಹೋದಲ್ಲಿ ಲಯ ಹಾಳಾಗುತ್ತದೆ. ಸಂಗೀತದ ಸುಖ ನಾಶವಾಗುತ್ತದೆ. ಅಂತೆಯೇ ಚಲನಾತ್ಮಕ ಕ್ರಿಯೆಯಾದ ಜೀವನದಲ್ಲಿ ಬದಲಾವಣೆ, ಸಾವು ಅತ್ಯವಶ್ಯ ಭಾಗಗಳು. ಇವಿಲ್ಲದೇ ಜೀವನವಿಲ್ಲ. ತತ್‌ಕ್ಷಣದ ಸುಖದಲ್ಲಿ ಸಂತೋಷಪಡಬಲ್ಲ ಪ್ರಾಣಿಯ ಹಾಗೆ ಮಾನವನಲ್ಲ. ಅವನಿಗೆ ನೆನಪುಗಳು, ನಿರೀಕ್ಷೆಗಳು ಬೇಕು. ಸುಖ ಸಮೃದ್ಧಿಗಳ ಮಧ್ಯೆಯೂ ನಾಳಿನ ಬಗ್ಗೆ ಆತಂಕವಿದ್ದರೆ ಆತ ಕೊರಗುತ್ತಾನೆ.

# ನೆನ್ನೆ ನಾಳೆಗಳ ನಡುವೆ

ಪ್ರತಿನಿತ್ಯವೂ ಇಂದಿನ ಸುಖವನ್ನು ಅನುಭವಿಸಲು ನಮಗೆ ನಾಳೆಯ ಬಗ್ಗೆ ಆಶ್ವಾಸನೆ ಬೇಕೆಂದಾದರೆ, ಅದೆಂದೂ ಕೈಗೆಟುಕದೇ ಹೋಗುತ್ತದೆ. ಹೀಗೆ ಅತಿ ಸೂಕ್ಷ್ಮವಾದ ಸಂವೇದನಾಶೀಲತೆ, ಪ್ರಕೃತಿ ನೀಡಿರುವ ಅತಿ ಬುದ್ಧಿವಂತಿಕೆಯೇ ಮಾನವನ ಸಂಕಟಗಳಿಗೆ ಕಾರಣವೆಂದಾದರೆ, ಪ್ರತಿಕ್ಷಣದ ಸುಖಾನುಭವಕ್ಕೂ ಭವಿಷ್ಯದ ಸುರಕ್ಷೆ, ನೋವಿಲ್ಲದ ಸ್ಥಿತಿಯ ಭರವಸೆಯನ್ನೇ ಬಯಸುವುದಾದರೆ ನಾವು ಎಂದೆಂದಿಗೂ ನಲಿವನ್ನು ಅನುಭವಿಸಲು ಅಶಕ್ತರಾಗುತ್ತೇವೆ.

ನಾಳಿನ ಸುಖದ ಆಶ್ವಾಸನೆ ಇದ್ದಲ್ಲಿ ಇಂದು ಆತ ಯಾವ ಕಷ್ಟವನ್ನೂ ಸಹಿಸಬಲ್ಲ.

ಒಬ್ಬ ವ್ಯಕ್ತಿ ಇನ್ನೆರಡು ವಾರಗಳಲ್ಲಿ ತೆರೆದ ಹೃದಯದ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳ ಬೇಕಾಗಿದೆ ಎಂದಿಟ್ಟುಕೊಳ್ಳೋಣ. ಆತನಿಗೆ ಇಂದು ಯಾವ ನೋವೂ ಇಲ್ಲ, ತಿಂದುಣ್ಣಲು ಸಮೃದ್ಧವಾಗಿದೆ. ನೆಂಟರಿಷ್ಟರು, ಪ್ರೀತಿಪಾತ್ರರು ಸುತ್ತಲೂ ಇದ್ದಾರೆ, ಅವನು ಈಗ ಮಾಡುತ್ತಿರುವ ಕೆಲಸ ಸಾಧಾರಣವಾಗಿ ಅವನಿಗೆ ಪ್ರಿಯವೇ. ಆದರೆ ಮುಂದಿನ ಶಸ್ತ್ರಚಿಕಿತ್ಸೆಯ ನಿರೀಕ್ಷೆ ಆತನನ್ನು ತಲ್ಲಣಗೊಳಿಸುತ್ತಿದೆ. ಅವನನ್ನು ಸುತ್ತುವರೆದಿರುವ ಯಾವ ಸುಖವೂ ಅವನಿಗೀಗ ಸಂತೋಷ ತರುತ್ತಿಲ್ಲ. ಅವನು ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಲೇಬೇಕೆಂದು ತೀರ್ಮಾನಿಸಿಯಾಗಿದೆ. ಆಕಸ್ಮಾತ್ ತಾನು ಮೃತನಾದರೆ ಎಂದು ಆತ ತನ್ನ ಆಸ್ತಿ ಪಾಸ್ತಿಗಳ ಬಗ್ಗೆ ಉಯಿಲು ಬರೆಸಿಯಾಗಿದೆ. ಆತನೀಗ ಚಿಂತಿಸುತ್ತಿರುವುದು, ಭಯಪಡುತ್ತಿರುವುದು ಈ ಕಾರಣಗಳಿಗಾಗಿ ಅಲ್ಲ ಆದರೂ ಮುಂದೆ ಆಗಲಿರುವ ಶಸ್ತ್ರಚಿಕಿತ್ಸೆಯ ಬಗ್ಗೆ ಕಾಣದ ಚಿಂತೆ ಅವನ ವರ್ತಮಾನದ ಸುಖವನ್ನ ಪಹರಿಸಿದೆ. ಹಾಗೆಂದು ಆತ ಚಿಂತಿಸದಿರಲಾರ. ಇದು ಮಾನವನ ವಿಶೇಷ ಸ್ವಭಾವ.

ಚಿಂತೆಯ ಕಾರಣ ಇಂತಹುದೇ ಆಗಿರಬೇಕೆಂದೂ ಇಲ್ಲ. ಮುಂದಿನ ತಿಂಗಳ ಬಾಡಿಗೆ ಹಣ ಒದಗಿಸುವುದು ಹೇಗೆ ? ಮುಂದೆ ಪ್ರಪಂಚದಲ್ಲಿ ಮೂರನೇ ಮಹಾಯುದ್ಧ ಆದರೇನು ಗತಿ ? ಹೆಚ್ಚುತ್ತಿರುವ ಭಯೋತ್ಪಾದನೆಯಿಂದ ನಮಗೇನು ಆಗುತ್ತದೆಯೋ ? ವೃದ್ಧಾಪ್ಯಕ್ಕೆ ನಾನು ಉಳಿಸುತ್ತಿರುವುದು ಸಾಕಾಗುತ್ತದೋ ಇಲ್ಲವೋ ? ಕೊನೆಗೆ ನನ್ನ ಸಾವು ಹೇಗೆ ಎಲ್ಲಿ ಬಂದೊದಗುತ್ತದೋ ಏನೋ ?

ಈ ಕ್ಷಣದ ಸುಖ ಹಾಳುಮಾಡಲು ಭವಿಷ್ಯತ್ತಿನ ಚಿಂತೆಯೇ ಆಗಬೇಕೆಂದೇನೂ ಇಲ್ಲ. ಹಿಂದೆಂದೋ ನಡೆದ ಘಟನೆಯ ನೆನಪೂ ಸಾಕು. ಹಿಂದೆ ಎಂದೋ ನಡೆದ ಅಪಘಾತ, ಮಾಡಿದ ಅಪರಾಧ, ನಡೆದ ಅಚಾತುರ್ಯಗಳ ನೆನಪುಗಳು ಇಂದು ಪಶ್ಚಾತ್ತಾಪವಾಗಿ ಅಪರಾಧೀ ಭಾವನೆಗಳಂತೆ ಬಂದು ಕಾಡುತ್ತಿರಬಹುದು. ಈ ನೆನಪು ನಿರೀಕ್ಷೆಗಳ ಶಕ್ತಿ ಎಷ್ಟೆಂದರೆ ಈ ಭೂತ ಭವಿಷ್ಯತ್ತುಗಳು ವರ್ತಮಾನಕ್ಕಿಂತ ಹೆಚ್ಚು ಸತ್ಯವಾಗಿ ನಮ್ಮ ಈ ಕ್ಷಣಗಳನ್ನು ಹಾಳುಗೆಡವುತ್ತವೆ. ಈ ಭೂತ ಅಳಿಸಿ ಹೋಗಿ, ಭವಿಷ್ಯತ್ತು ಉಜ್ವಲ ಭರವಸೆಗಳಿಂದ ಕೂಡಿದ ಹೊರತು ನಮಗೆ ವರ್ತಮಾನವನ್ನು ಅನುಭವಿಸಲು ಸಾಧ್ಯವಿಲ್ಲ.

ಮಾನವನ ಜೀವನದಲ್ಲಿ ಉಳಿಯುವಿಕೆ, ಹೊಂದಾಣಿಕೆಗಳಿಗೆ ಅಸಾಧಾರಣ ಶಕ್ತಿ ಕೊಟ್ಟಿರುವ ಈ ನೆನಪು ನಿರೀಕ್ಷೆಗಳೇ ಇಂದಿನ ಸುಖಕ್ಕೆ ಮಾರಕವಾಗಿರುವುದು ವಿಪರ್ಯಾಸ. 'ಋಣಂ ಕೃತ್ವಾ ಘೃತಂ ಪಿಬೇತ್' – 'ಸಾಲಮಾಡಿಯಾದರೂ ತುಪ್ಪ ತಿನ್ನು' ಎನ್ನುವ ಮಟ್ಟವನ್ನು ತಲುಪದಿದ್ದರೂ ಬದುಕಿನ ಪ್ರತಿಕ್ಷಣವನ್ನೂ ನೆನ್ನೆ ನಾಳೆಗಳಿಗಾಗಿ ಹಾಳು ಮಾಡಿಕೊಳ್ಳುವುದು ಯಾವ ನ್ಯಾಯ ?

ಇಂದು ಈ ಕ್ಷಣದಲ್ಲಿ ತಿನ್ನುತ್ತಿರುವುದನ್ನು ಅನುಭವಿಸದೇ ನಾಳೆಯ ಭೋಜನದ ಬಗ್ಗೆ ನಾವು ಚಿಂತಿಸುವುದಾದರೆ ನಾಳೆ ಆ ಭೋಜನದ ಸಮಯದಲ್ಲೂ ಅದರ ಮುಂದಿನ ನಿರೀಕ್ಷೆಯಲ್ಲೇ ಕಳೆಯುತ್ತೇವೆ. ಹೀಗೇ ಇದು ರೂಢಿಯಾಗಿ ನಾವೆಂದೂ ಪ್ರತಿಕ್ಷಣಗಳನ್ನೂ ಅನುಭವಿಸುವುದೇ ಇಲ್ಲ. ನಾಳೆಗಾಗಿ ಗಳಿಸಿ ಕೂಡಿಡುತ್ತಿರುವ ವ್ಯಕ್ತಿ ಅದನ್ನು ಎಂದೂ ತಾನು ಅನುಭವಿಸದೇ ಹೋಗಬಹುದು. ಏಕೆಂದರೆ, ಆ ನಾಳೆ ಬಂದಾಗ ಅವನು ಅದರ ನಾಳೆಯ ಬಗ್ಗೆ ಚಿಂತಿಸುತ್ತಿರಬಹುದು. ವೃತ್ತಿಯಲ್ಲಿ ಯಶಗಳಿಸಿದ ಅನೇಕರು ತಾವು ನಿವೃತ್ತಿ ಹೊಂದ ಬೇಕಾದ ವಯಸ್ಸು ಬಂದಾಗಲೂ ಅದನ್ನು ಅನುಭವಿಸದೇ ಮತ್ತೆ ಕೆಲಸಕ್ಕೆ ಹೋಗುತ್ತಾ ತಮ್ಮ ಮುಂದಿನ ಜನಾಂಗದ ಕೆಲಸವನ್ನು ಕಿತ್ತುಕೊಳ್ಳುವುದನ್ನು ನೋಡುತ್ತಿಲ್ಲವೇ ?

ಪ್ರತಿನಿತ್ಯವೂ ಇಂದಿನ ಸುಖವನ್ನು ಅನುಭವಿಸಲು ನಮಗೆ ನಾಳೆಯ ಬಗ್ಗೆ ಆಶ್ವಾಸನೆ ಬೇಕೆಂದಾದರೆ, ಅದೆಂದೂ ಕೈಗೆಟುಕದೇ ಹೋಗುತ್ತದೆ. ಹೀಗೆ ಅತಿ ಸೂಕ್ಷ್ಮವಾದ ಸಂವೇದನಾ ಶೀಲತೆ, ಪ್ರಕೃತಿ ನೀಡಿರುವ ಅತಿ ಬುದ್ಧಿವಂತಿಕೆಯೇ ಮಾನವನ ಸಂಕಟಗಳಿಗೆ ಕಾರಣವೆಂದಾದರೆ, ಪ್ರತಿಕ್ಷಣದ ಸುಖಾನುಭವಕ್ಕೂ ಭವಿಷ್ಯದ ಸುರಕ್ಷೆ, ನೋವಿಲ್ಲದ ಸ್ಥಿತಿಯ ಭರವಸೆಯನ್ನೇ ಬಯಸುವುದಾದರೆ ನಾವು ಎಂದೆಂದಿಗೂ ನಲಿವನ್ನು ಅನುಭವಿಸಲು ಅಶಕ್ತರಾಗುತ್ತೇವೆ.

ಹಾಗೆಂದು 'ಧನ್ಯೋ ಜನಃ ಪ್ರಾಕೃತಃ' ಎನ್ನುತ್ತಾ ಪೂರ್ವಾನುಭವದಿಂದ ಏನನ್ನೂ ಕಲಿತು ಕೊಳ್ಳದೇ ಭವಿಷ್ಯತ್ತಿನ ಬಗ್ಗೆ ಯಾವ ತಯಾರಿಯನ್ನೂ ಮಾಡಿಕೊಳ್ಳದೇ ಇತರ ಪ್ರಾಣಿಗಳಂತೆ ಜೀವನ ನಡೆಸುವುದು ನಮಗೆ ಸಾಧ್ಯವಿಲ್ಲದ ಮಾತು. ಇವೆರಡರ ನಡುವಿನ ಸಮತೋಲನ ಸಾಧಿಸುವುದರಲ್ಲೇ ನಮ್ಮ ಜಾಣತನವಿರುವುದು. ಇಲ್ಲ, ನಮಗೆ ಏನೂ ತಿಳಿಯುವುದಿಲ್ಲ; ಭಗವಂತ ಮಾಡಿಸಿದ ಹಾಗೆ ಆಗುತ್ತದೆ ಎಂಬ ಅಚಲ ವಿಶ್ವಾಸವಾದರೂ ನಮ್ಮಲ್ಲಿರಬೇಕು. ಆಗ 'ಯದ್ಯತ್ ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ' ಎನ್ನುತ್ತಾ, ಕಾಲ ಕಾಲದ ಕರ್ಮ ಕೇಶವನಿಗರ್ಪಿಸಿ ನೆಮ್ಮದಿಯಿಂದಲಾದರೂ ಇರಬಹುದು. ಅಥವಾ ನಮ್ಮ ಸೂಕ್ಷ್ಮ ಬುದ್ಧಿಯನ್ನು ಉಪಯೋಗಿಸಿ, ಆಧುನಿಕ ವಿಜ್ಞಾನವಾಗಲೀ ಇತರ ಶಾಸ್ತ್ರಗಳಾಗಲೀ ಹೇಳುತ್ತಿರುವಂತೆ ಈ ಜೀವನದಲ್ಲಿ ಹೀಗೇ ಸರಿ ಎಂದು ನಿಶ್ಚಿತವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ, ಅನಿಶ್ಚಿತತೆ, ಅನಿರೀಕ್ಷಿತತೆಗಳೇ ಜೀವನ; ನಾವೆಷ್ಟೇ ಲೆಕ್ಕ ಹಾಕಿ ಪ್ರಯತ್ನಿಸಿದರೂ ಭವಿಷ್ಯವನ್ನು ಸಂಪೂರ್ಣವಾಗಿ ಹೀಗೇ ಆಗುತ್ತದೆ ಎಂದು ನಿರ್ಧರಿಸಲು ಸಾಧ್ಯವಿಲ್ಲ ಎಂದು ಮನವರಿಕೆ ಮಾಡಿಕೊಂಡು ಇಂದು ಬಂದದ್ದನ್ನು ಬಂದ ಹಾಗೆ ಅನುಭವಿಸಲು ಬುದ್ಧಿಪೂರ್ವಕವಾಗಿ ಕಲಿಯಬೇಕು.

ಆದಕಾರಣ, ಈ ಭೂತ ಭವಿಷ್ಯತ್ತುಗಳ ಸುಳಿಯ ನಡುವೆ ಬರುವ ವರ್ತಮಾನವನ್ನು ಅದು ಬಂದ ಹಾಗೆ ಸ್ವೀಕರಿಸಲು ನಾವು ಸಿದ್ಧರಾಗಬೇಕು. ಒಟ್ಟಿನಲ್ಲಿ ನೆನ್ನೆ ನಾಳೆಗಳ ನಡುವಿನ ಇಂದು ಕಳೆದುಹೋಗುವ ಮುನ್ನ ಅದನ್ನು ಆಸ್ವಾದಿಸಲು ನಾವರಿಯಬೇಕು.

**ಡಾ|| ಕೆ. ಪೂರ್ಣಮಂಗಳಾ**
೨೩, ೧೩ನೇ ಬ್ಲಾಕ್, ಎಸ್.ಬಿ.ಎಂ. ಕಾಲೋನಿ, ಶ್ರೀರಾಮಪುರ, ೨ನೇ ಹಂತ, ಮೈಸೂರು ೫೭೦ ೦೨೩



## ಆಲನಹಳ್ಳಿ

ಪುರಾಣ ಕೃಷ್ಣನಿಗು ಆಲನ ಹಳ್ಳಿಗು ಕಲ್ಪಿಸದಿದ್ದರೆ
ಸುತರಾಂ ಅಂವ ಹಳ್ಳಿಗಮಾರನೆ ಸರಿ
ಈ ಕೋಶ ಗುಣಾವಗುಣದಪರಾವತಾರ
ಬಿಚ್ಚಿ ಒದರುತ್ತಾವೆ ಮಾತುಕಥೆ ನಿಜವ
ಪರಸಂಗ ತುಂಬಿ ಸೂಸುತ್ತೆ ಹದವ

ಕನ್ನೆ ತೊಡೆಯಲ್ಲಿ ಮಾಯದಾಸೆಯ ಗಾಯ
ತೊಡಗುವುದೆ ಪ್ರಾಯದಭಿಪ್ರಾಯ

ಮರಿಹಕ್ಕಿ ಗರಿಬಿಚ್ಚಿ ಬಾನಂಗಳದಲಿ ಹಾರಾಟ
ಮುಳುಗುವುದು ಗಂಗೆ ಸಲಿಲದಾಳಕ್ಕೆ
ಕಣ್ಣ ತಾರೆಗಳಲ್ಲಿ ಮುತ್ತುಗಳ ಮಿರುಗು
ಯೋಗ ನಿದ್ದೆಗೆ ಮುನ್ನ ಕಣ್ಣ ಕಾಂತಿಗೆ ಜಗವೆ ಬೆರಗು.

ಬಟ್ಟ ಬಯಲಿಗೆ ಬೇಲಿ ಬಯಕೆ ತೋಟದ ಖಯಾಲಿ
ಖರೆ ಯಾರಿಗೆ ಗೊತ್ತು ಕೃಷ್ಣ ಕರಾಮತ್ತು
ನಿಶ್ಯಬ್ದವೆ ನಾಚಿ ತಜ್ಞರ ತಲೆ ತಾಕಿರಲು
ಹುಳುಹುಪ್ಪಟೆಗಳ ಪಾಡಿನ್ನೇನು
ಬದುಕಿಗೆ ಉತ್ತರ ಎತ್ತರ ಎತ್ತರ

ಜಗದೀ ಸಮಯ ಪರೀಕ್ಷೆಗೆ ಸದಾ ವಿಸ್ಮಿತ
ಪುಟಿವ ಹಾವಭಾವದ ಕಾರಂಜಿಯ ಜೀವ

ಮಾರಿ ಮಸಣಿ ಕಣ್ಣಿಂಗೋಗ
ಕಳಸ ಮುರಿದು ನುಂಗಿ ನೊಣದಳಿ
ಕಾಡೆಲ್ಲ ಹಾಡಾಗಿ ತೋರುವ ಕೃಷ್ಣ
ಬರೀ ನೆನಪಾಗಿ ಕಾಡುತ್ತಾನೆ.

**ಕೆ. ಎನ್. ಶಿವತೀರ್ಥನ್**
ವಿಳಾಸ :




# ಬಲವಾಗಿ ಬೀಸುತ್ತಿರುವ ಬದಲಾವಣೆಯ ಅಲೆ

ಸೀಯಾರ್ಕೆ

**ದ**ಕ್ಷಿಣ ಅಮೆರಿಕಾದಲ್ಲಿ ಸಮಾಜವಾದಿ ಒಲವಿನತ್ತ ಸಾಗಲು ಈಗ ಮತ್ತೊಂದು ದೇಶ ಸಜ್ಜಾಗುತ್ತಿದೆ. ವೆನೆಜುವೇಲ, ಬೊಲಿವಿಯ, ಬ್ರೆಜಿಲ್, ಅರ್ಜೆಂಟೈನಾ ಮೊದಲಾದ ದೇಶಗಳ ಜೊತೆಗೆ ಇಂಕಾ ನಾಗರಿಕತೆಯ ತವರಾದ ಪೆರು ಕೈಜೋಡಿಸುತ್ತಿದೆ. ಇಪ್ಪತ್ತೊಂದನೇ ಶತಮಾನದ ಮೊದಲ ದಶಕದಲ್ಲಿ ಸಂಭವಿಸಿರುವ ಪ್ರಮುಖ ಘಟನೆಗಳಲ್ಲಿ ಲ್ಯಾಟಿನ್ ಅಮೆರಿಕಾದ ದೇಶಗಳಲ್ಲಿ ಪರ್ಯಾಯ ವ್ಯವಸ್ಥೆ ಸ್ಥಾಪನೆಯತ್ತ ಬೀಸುತ್ತಿರುವ ಬದಲಾವಣೆಯ ಅಲೆ ಗಮನಾರ್ಹವಾದ್ದು. ಇಪ್ಪತ್ತನೆಯ ಶತಮಾನದಲ್ಲಿ ಬಲಾಢ್ಯ ಅಮೆರಿಕಾದ ನೆರೆಯಲ್ಲೇ ಇದ್ದರೂ ಅಲಿಪ್ತ ಚಳವಳಿಯಲ್ಲಿ ಸಕ್ರಿಯ ಪಾತ್ರವಹಿಸಿದ್ದ ಲ್ಯಾಟಿನ್ ಅಮೆರಿಕಾದ ದೇಶಗಳು ಇಂದು ಪ್ರಗತಿಪರ ಪರಿವರ್ತನೆಯತ್ತ ಹೆಜ್ಜೆ ಇರಿಸ ತೊಡಗಿವೆ. ಪೆರುವಿನ ರಾಜಧಾನಿ ಲಿಮಾದಲ್ಲಿ ಅಲಿಪ್ತ ರಾಷ್ಟ್ರಗಳ ಶೃಂಗ ಸಮಾವೇಶ ಜರುಗಿದ್ದುದನ್ನು ನೆನಪಿಸಿಕೊಳ್ಳಬಹುದು. ಸುಮಾರು ಮೂರು ಶತಮಾನಗಳ ಕಾಲ ಸ್ಪ್ಯಾನಿಷ್ ಸಾಮ್ರಾಜ್ಯಶಾಹಿಗಳ ಆಡಳಿತಕ್ಕೊಳಪಟ್ಟಿದ್ದ ಪೆರು ೧೮೨೧ರಲ್ಲಿ ಸ್ವಾತಂತ್ರ್ಯ ಪಡೆದರೂ ಆರ್ಥಿಕವಾಗಿ ಅಮೆರಿಕಾದ ಹಿಡಿತದಲ್ಲಿದೆ. ಹೇರಳವಾದ ಖನಿಜ ಸಂಪತ್ತನ್ನು, ತೈಲ ಮತ್ತು ಇಂಧನಾನಿಲ ನಿಕ್ಷೇಪಗಳನ್ನು ಹೊಂದಿದ್ದರೂ ಇನ್ನೂ ಬಡರಾಷ್ಟ್ರ. ದೇಶದ ಸುಮಾರು ಅರ್ಧಭಾಗ ಜನ ಬಡತನದಲ್ಲಿದ್ದಾರೆ. ಪ್ರಪಂಚದಲ್ಲಿ ತಾಮ್ರದ ಉತ್ಪಾದನೆಯಲ್ಲಿ ಮೂರನೆಯ ಸ್ಥಾನವನ್ನೂ ಬಂಗಾರದ ಉತ್ಪಾದನೆಯಲ್ಲಿ ಐದನೇ ಸ್ಥಾನವನ್ನೂ ಪಡೆದಿರುವ ದೇಶದ ಸ್ಥಿತಿ ಇದು. ರಾಷ್ಟ್ರದ ಸಂಪತ್ತಿನಲ್ಲಿ ಹೆಚ್ಚಿನ ಪಾಲು ಅಮೆರಿಕಾದ ಬಹುರಾಷ್ಟ್ರೀಯ ಸಂಸ್ಥೆಗಳ ಕೈಯ್ಯಲ್ಲಿರುವುದೇ ಇದಕ್ಕೆ ಕಾರಣ. ಈಗ ಅದು ಬದಲಾಗಬಹುದಾದ ಸೂಚನೆಗಳು ಕಾಣುತ್ತಿವೆ.

ಪೆರುವಿನಲ್ಲಿ ಈಚೆಗೆ ಜರುಗಿದ ಅಧ್ಯಕ್ಷ ಚುನಾವಣೆಯ ಮೊದಲ ಸುತ್ತಿನಲ್ಲಿ ವಾಮಪಂಥೀಯ ನಾಯಕ ಒಲ್ಲಾಂಟೆ ಹ್ಯುಮಾಲ ಅಧಿಕ ಮತ ಗಳಿಸಿ ಇತರ ಅಭ್ಯರ್ಥಿಗಳಿಗಿಂತ ಮುಂದಿದ್ದಾರೆ. ಇವರು ಎರಡನೆಯ ಸುತ್ತಿನಲ್ಲಿ ಅಧಿಕ ಮತ ಗಳಿಸಿ ಜಯಗಳಿಸುವ ನಿರೀಕ್ಷೆ ಇದೆ. ವೆನೆಜುವೇಲದ ಅಧ್ಯಕ್ಷ ಚಾವೆಜ್ ಮತ್ತು ಬೊಲಿವಿಯದ ಅಧ್ಯಕ್ಷ ಇವೊ ಮೊರಾಲೆಸ್‌ರಂತೆಯೇ ಹ್ಯುಮಾಲ ಕೂಡ ಅಮೆರಿಕನ್ ಸಾಮ್ರಾಜ್ಯಶಾಹಿ ನೀತಿಗಳ ಕಡುವಿರೋಧಿ. ''ಪೆರುವಿನ ಬಡಜನರ ವಾಣಿ ನಾನು'' ಎಂದು ಕರೆದುಕೊಳ್ಳುವ ಹ್ಯುಮಾಲ ಸಾಮ್ರಾಜ್ಯಶಾಹಿ ವಿರೋಧಿ ಹೋರಾಟಗಾರ. ಪೆರು ಸೇನೆಯಲ್ಲಿ ಅಧಿಕಾರಿಯಾಗಿದ್ದ ಈತ ಆಯ್ಕೆಯಾಗಲಿರುವುದು ಅಮೆರಿಕಾದ ಆಡಳಿತದ ತಲೆನೋವನ್ನು ಹೆಚ್ಚಿಸಿದೆ. ಇರಾಕಿನಲ್ಲಿ ಮೂಗು ಮುರಿಸಿಕೊಂಡಿರುವ ಅಮೆರಿಕಾದ ಆಡಳಿತಕ್ಕೆ ದಕ್ಷಿಣ ಅಮೆರಿಕಾ ಸಿಂಹಸ್ವಪ್ನವಾಗಿ ಸವಾಲನ್ನೊಡ್ಡಿದೆ. ವೆನೆಜುವೇಲ ಮತ್ತು ಬೊಲಿವಿಯಗಳಂತೆಯೇ ಪೆರುವಿನ ಹ್ಯುಮಾಲ ಕೂಡ ವಾಷಿಂಗ್ಟನ್ ಲ್ಯಾಟಿನ್ ಅಮೆರಿಕಾದ ದೇಶಗಳಿಗಾಗಿ ರೂಪಿಸಿರುವ ಮುಕ್ತ ವಾಣಿಜ್ಯ ಒಪ್ಪಂದಕ್ಕೆ ಸಹಿ ಹಾಕದಿರಲು ನಿರ್ಧರಿಸಿದ್ದಾರೆ. ಜಾಗತೀಕರಣವನ್ನು ಹಿಮ್ಮೆಟ್ಟಿಸಲು ಪಣ ತೊಟ್ಟಿದ್ದಾರೆ. ಈತ ಆಯ್ಕೆಗೊಂಡು ಅಧಿಕಾರ ವಹಿಸಿಕೊಂಡರೆ ದಕ್ಷಿಣ ಅಮೆರಿಕಾದಲ್ಲಿ ಸಮಾಜವಾದಿ ಒಲವಿನ ರಾಷ್ಟ್ರಗಳನ್ನು ಇನ್ನಷ್ಟು ಬಲಗೊಳಿಸುತ್ತದೆ. ಅಮೆರಿಕಾದ ಮುಕ್ತ ಮಾರುಕಟ್ಟೆ ವ್ಯವಸ್ಥೆಗೆ ವಿರುದ್ಧವಾಗಿ ಪರ್ಯಾಯ ವ್ಯವಸ್ಥೆ ರೂಪಿಸಲು ಸಹಾಯಕವಾಗುತ್ತದೆ. ದಕ್ಷಿಣ ಅಮೆರಿಕಾದ ಈ ದೇಶಗಳ ಯಶಸ್ಸು ಪ್ರಪಂಚದ ಇತರ ದೇಶಗಳ ಮೇಲೂ ಪರಿಣಾಮ ಬೀರುವುದರಲ್ಲಿ ಸಂಶಯವಿಲ್ಲ. ಈ ರಾಷ್ಟ್ರಗಳ ಪ್ರಯತ್ನ ಸಫಲವಾಗಲಿ ಎನ್ನುವುದೇ ಎಲ್ಲ ಪುರೋಗಾಮಿಗಳ ಹಾರೈಕೆ.



* * *

ಯೂರೋಪಿನಲ್ಲೂ ಕೂಡ ಈಚೆಗೆ ಬದಲಾವಣೆಗಳಾಗುವ ಸೂಚನೆಗಳು ಕಾಣಬರುತ್ತಿವೆ. ಅದು ಯಾವ ದಿಶೆಯಲ್ಲಿ ಮುಂದುವರಿಯುತ್ತದೆ ಎಂದು ಖಚಿತವಾಗಿ ಹೇಳುವುದು ಕಷ್ಟ. 'ನ್ಯಾಟೋ' ಕೂಟ ತನ್ನ ಕಬಂಧಬಾಹುವನ್ನು ಮಾಜಿ ಸೋವಿಯತ್ ಒಕ್ಕೂಟದ ಭಾಗವಾಗಿದ್ದ ದೇಶಗಳತ್ತ ಚಾಚುತ್ತಿರುವುದೀಗ ಕಳವಳಕಾರಿ ಬೆಳವಣಿಗೆ. ಇದು ಹೀಗೇ ಮುಂದುವರಿದರೆ ಮತ್ತೆ ಶೀತಯುದ್ಧಕಾಲದ ಪರಿಸ್ಥಿತಿ ಬಂದೀತೇನೋ ಎನ್ನುವ ಆತಂಕ ಇದೆ.

ಇತ್ತೀಚೆಗೆ ಫ್ರಾನ್ಸ್‌ನಲ್ಲಿ ಕಾರ್ಮಿಕರು ಮತ್ತು ವಿದ್ಯಾರ್ಥಿಗಳು ಜಾಗತೀಕರಣದ ಹಿನ್ನೆಲೆಯಲ್ಲಿ ಬಹುರಾಷ್ಟ್ರೀಯ ಸಂಸ್ಥೆಗಳಿಗೆ ಉಪಯೋಗವಾಗುವಂತೆ ಫ್ರೆಂಚ್ ಸರಕಾರ ಕಾರ್ಮಿಕ ಕಾಯಿದೆಯಲ್ಲಿ ತಂದಿದ್ದ ತಿದ್ದುಪಡಿಯನ್ನು ಯಶಸ್ವಿಯಾಗಿ ಹಿಮ್ಮೆಟ್ಟಿಸುವುದರಲ್ಲಿ ಯಶಸ್ವಿಯಾದರು. ಇದು ಯೂರೋಪಿನ ಕಾರ್ಮಿಕರು ತಮ್ಮ ಹಿತರಕ್ಷಣೆಗಾಗಿ ಹೋರಾಟ ನಡೆಸಲು ಹಿಂಜರಿಯುವುದಿಲ್ಲ ಎನ್ನುವುದನ್ನು ಸಮಸ್ಯೆಗಳನ್ನು ಎದುರಿಸಲು ಜೀವಂತರಾಗಿದ್ದಾರೆ ಎನ್ನುವುದನ್ನು, ತೋರಿಸಿದೆ.

ಅದೇ ರೀತಿ ನಿರುದ್ಯೋಗದ ಸಮಸ್ಯೆಯಿಂದ ತೊಳಲುತ್ತಿರುವ ಇಟಲಿಯಲ್ಲಿ ನಡೆದ ಮಹಾಚುನಾವಣೆಗಳಲ್ಲಿ ಎಡಪಕ್ಷಗಳನ್ನೊಳಗೊಂಡಿರುವ ಸಮ್ಮಿಶ್ರ ಸರಕಾರವೊಂದು ಅಸ್ತಿತ್ವಕ್ಕೆ ಬಂದಿರುವುದು ಗಮನಿಸಬೇಕಾದ ಸಂಗತಿ. ಇಟಲಿಯ ಮಾಜಿ ಪ್ರಧಾನಿ ರೊಮಾನೋ ಪ್ರೋದಿ ನೇತೃತ್ವದಲ್ಲಿರುವ ಮಧ್ಯಮಾರ್ಗಿಗಳು ಮತ್ತು ಎಡಪಕ್ಷಗಳ ಕೂಟ ಅಧಿಕಾರದಲ್ಲಿದ್ದ ಬೆರ್ಲುಸ್ಕೋನಿ ನೇತೃತ್ವದಲ್ಲಿರುವ ಹೌಸ್ ಆಫ್ ಫ್ರೀಡಮ್ಸ್ ಕೂಟಕ್ಕಿಂತಲೂ ಅಧಿಕ ಸ್ಥಾನ ಗಳಿಸಿ ವಿಜಯ ಸಾಧಿಸಿದೆ. ಹಾಗೆಯೇ ಅಧ್ಯಕ್ಷೀಯ ಸ್ಥಾನಕ್ಕೆ ನಡೆದ ಚುನಾವಣೆಯಲ್ಲಿ ಎಡಪಕ್ಷಕ್ಕೆ ಸೇರಿದ ಗಿಯೊರ್ಗಿಯಾ ನೆಪೋಲಿಟಾನೋ ಆಯ್ಕೆಗೊಂಡಿದ್ದಾರೆ. ಪ್ರಜಾಪ್ರಭುತ್ವ ಎಡಪಂಥೀಯ ಪಕ್ಷಕ್ಕೆ ಸೇರಿದ ಮಾಜಿ ಕಮ್ಯುನಿಸ್ಟ್ ಸದಸ್ಯ ನೆಪೋಲಿಟಾನೋ ಇದಕ್ಕೆ ಮೊದಲು ೧೯೯೬ರಲ್ಲಿ ಪ್ರೋದಿ ನೇತೃತ್ವದಲ್ಲಿದ್ದ ಸರಕಾರದಲ್ಲಿ ಗೃಹ ಸಚಿವರಾಗಿದ್ದರು. ಸಮಸ್ಯೆಗಳ ಸುಳಿಯಲ್ಲಿರುವ, ಮುಖ್ಯವಾಗಿ ಬೆಳೆಯುತ್ತಿರುವ ನಿರುದ್ಯೋಗ ಸಮಸ್ಯೆಯನ್ನು ಎದುರಿಸುತ್ತಿರುವ ಇಟಲಿಯಲ್ಲಿ ಅಧಿಕಾರಕ್ಕೇರಿರುವ ಹೊಸ ಸರಕಾರ ಯಾವ ನೀತಿಯನ್ನು ಅನುಸರಿಸುವುದೆಂಬುದನ್ನು ಕುತೂಹಲದಿಂದ ಕಾದು ನೋಡಬೇಕಾಗಿದೆ.

ಇಟಲಿಯ ಈ ಬೆಳವಣಿಗೆಗಳು ಒಂದು ಕಡೆಯಾದರೆ, ಜರ್ಮನಿಯಲ್ಲಿ ಅಂಗೆಲಾಮೆರ್ಕಲ್ ಎಂಬ ಮಹಿಳೆ ಮೊದಲಬಾರಿಗೆ ಚಾನ್ಸಲರ್ ಆಗಿ ಆಯ್ಕೆಯಾಗಿ ಅಧಿಕಾರ ನಡೆಸುತ್ತಿರುವುದು ಕುತೂಹಲಕರ. ಜರ್ಮನಿಯ ನೀತಿಗಳಲ್ಲಿ ಯಾವುದೇ ಮಾರ್ಪಾಟುಗಳಾಗದಿದ್ದರೂ ಸಂಪ್ರದಾಯವಾದಿ ಜರ್ಮನಿಯಲ್ಲಿ ಮಹಿಳೆಯೊಬ್ಬರು ಅಧಿಕಾರದ ಗದ್ದುಗೆ ಏರಿದ್ದಾರೆಂಬುದಷ್ಟೇ ಸಮಾಧಾನಕರ ಸಂಗತಿ.

ಏತನ್ಮಧ್ಯೆ ಬ್ರಿಟನ್ನಿನಲ್ಲಿ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್‌ನ ಪಾತಕ ಕೃತ್ಯಗಳಲ್ಲಿ ಸಹಭಾಗಿಯಾಗಿರುವ ಪ್ರಧಾನಿ ಟೋನಿ ಬ್ಲೇರ್‌ನ ಸ್ಥಿತಿ ದಿನೇ ದಿನೇ ಚಿಂತಾಜನಕವಾಗುತ್ತಿದೆ. ತನ್ನ ಹಠಮಾರಿತನದಿಂದ ಜನಬೆಂಬಲ ಕಳೆದುಕೊಂಡಿರುವ ಟೋನಿ ಬ್ಲೇರ್, ತಾನೂ ಮುಳುಗುತ್ತಿದ್ದು ಲೇಬರ್ ಪಕ್ಷವನ್ನೂ ಮುಳುಗಿಸುತ್ತಿದ್ದಾನೆ. ಇತ್ತೀಚೆಗೆ ನಡೆದ ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಿ ಟೋನಿ ಬ್ಲೇರ್ ನೇತೃತ್ವದಲ್ಲಿರುವ ಲೇಬರ್‌ಪಕ್ಷ ಅನುಭವಿಸಿರುವ ಸೋಲುಗಳೇ ಅದಕ್ಕೆ ಸಾಕ್ಷಿ.

## ರಷ್ಯಾ : ಹೆಚ್ಚುತ್ತಿರುವ ಅಮೆರಿಕಾದ ಒತ್ತಡ

**ಸು**ಮಾರು ಎರಡು ದಶಕಗಳಿಂದ ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ಏಕೈಕ ಬಲಾಢ್ಯ ರಾಷ್ಟ್ರವಾಗಿ ಮೆರೆಯುತ್ತಿರುವ ಅಮೆರಿಕಾ ಈಗ ಅತ್ಯಲ್ಪ ವಿರೋಧವನ್ನೂ ಸಹಿಸಲಾಗದ ಸ್ಥಿತಿ ಮುಟ್ಟಿದೆ. ಅದರ ದುರಾಕ್ರಮಣಕಾರಿ ಹಂಚಿಕೆಗೆ ಅಡ್ಡಬರುವವರ ಮೇಲೆ ಎಲ್ಲ ಬಗೆಯ ಒತ್ತಡಗಳನ್ನು ತರುವುದರ ಜೊತೆಗೆ, ಬೆದರಿಕೆಯನ್ನು ಹಾಕತೊಡಗಿದೆ. ರಷ್ಯಾ ಅದಕ್ಕೆ ಉದಾಹರಣೆಯಾಗಿದೆ. ಇತ್ತೀಚೆಗೆ ಲಿತುವೇನಿಯಾಗೆ ಭೇಟಿ ನೀಡಿದ್ದ ಯುದ್ಧದಾಹಿ ಎಂದೇ ಕುಖ್ಯಾತನಾಗಿರುವ ಅಮೆರಿಕಾದ

ಉಪಾಧ್ಯಕ್ಷ ಡಿಕ್ ಶೆನಿ ರಷ್ಯಾದ ಮೇಲೆ ಯದ್ವಾತದ್ವಾ ಕಿಡಿಕಾರಿದ್ದಾನೆ. ಶೀತಯುದ್ಧ ಕಾಲದಲ್ಲಿ ಸೋವಿಯತ್ ಒಕ್ಕೂಟದ ಮೇಲೆ ಅಮೆರಿಕಾದ ವಾಗ್ದಾಳಿಯನ್ನೇ ನೆನಪಿಸುವಂತೆ ಆವೇಶದಿಂದ ವಾಗ್ದಾಳಿ ನಡೆಸಿದ್ದಾನೆ. ಅಧಿಕೃತವಾಗಿ ರಷ್ಯಾ ಈ ಪ್ರಚೋದನಕಾರಿ ವರ್ತನೆಯನ್ನು ಕಟುವಾಗಿ ಟೀಕಿಸಿರುವುದು, ಆರೋಪಗಳನ್ನು ತಿರಸ್ಕರಿಸಿರುವುದು ಸಮಂಜಸವಾಗಿದೆ. ಆಶ್ಚರ್ಯಕರ ಸಂಗತಿ ಎಂದರೆ ಅಮೆರಿಕಾದ ಬೆನ್ನುಹತ್ತಿ ಸೋವಿಯತ್ ಒಕ್ಕೂಟದ ವಿಸರ್ಜನೆಗೆ ಕಾರಣೀಭೂತನಾದ ಮಿಖಾಯಿಲ್ ಗೋರ್ಬಚೆವ್ ಕೂಡ ಡಿಕ್ ಶೆನಿ ಆರೋಪಗಳನ್ನು ಪ್ರಚೋದನಕಾರಿ, ರಷ್ಯಾದ ಆಂತರಿಕ ವ್ಯವಹಾರಗಳಲ್ಲಿ ತಲೆಹಾಕುವುದಾಗಿದೆ ಎಂದು ಬಣ್ಣಿಸಿರುವುದು. ಇದಕ್ಕೆ ಮುಂಚೆ ಇನ್ನೋರ್ವ ಬುಷ್‌ನ ಬಾಲಂಗೋಚಿ ಅಮೆರಿಕಾದ ವಿದೇಶಾಂಗ ಕಾರ್ಯದರ್ಶಿ ಕಾಂಡಲೀಸ ರೈಸ್ ಕೂಡ ಮಾಜಿ ಸೋವಿಯತ್ ಒಕ್ಕೂಟಕ್ಕೆ ಸೇರಿದ್ದ, ಈಗ ಸ್ವತಂತ್ರವಾಗಿರುವ ದೇಶಗಳಲ್ಲಿ ಅಮೆರಿಕಾದ ಹಿತಾಸಕ್ತಿಯನ್ನು ಎತ್ತಿ ಹಿಡಿದು ಉದ್ಧಟತನದಿಂದ ಮಾತನಾಡಿದ್ದಾಳೆ. ಈ ಎಲ್ಲ ಆಕ್ರೋಶಗಳಿಗೆ ಕಾರಣ ಈಚೆಗೆ ರಷ್ಯಾ ವಿದೇಶಾಂಗ ನೀತಿಯ ಕ್ಷೇತ್ರದಲ್ಲಿ ಸ್ವತಂತ್ರವಾದ, ದೃಢವಾದ ನಿಲುವನ್ನು ತೋರುತ್ತಿರುವುದು. ಉದಾಹರಣೆಗೆ, ಇರಾನಿನ ವಿಷಯದಲ್ಲಿ, ಪ್ಯಾಲಸ್ಟೈನ್‌ನಲ್ಲಿ ಅಧಿಕಾರಕ್ಕೆ ಬಂದಿರುವ ಹಮಾಸ್‌ನ ವಿಷಯದಲ್ಲಿ ರಷ್ಯಾ ತಳೆದಿರುವ ಧೋರಣೆ.

ಸೋವಿಯತ್ ಒಕ್ಕೂಟದ ವಿಘಟನೆಯ ನಂತರದಲ್ಲಿ ಅವ್ಯವಸ್ಥೆಯ ಆಗರವಾಗಿದ್ದ ರಷ್ಯಾ ಹಾಗೂ ಅದರ ಆಸುಪಾಸಿನ ದೇಶಗಳಲ್ಲಿ ಅಮೆರಿಕಾ ನಾನಾ ರೀತಿಯಲ್ಲಿ ತನ್ನ ಪ್ರಭಾವ ಬೆಳೆಸಿಕೊಂಡು, ಬೇಕಾದಂತೆ ವರ್ತಿಸಿತು. ಅಮೆರಿಕಾದ ತಾಳಕ್ಕೆ ತಕ್ಕಂತೆ ಕುಣಿಯುತ್ತಿದ್ದ ಬೋರಿಸ್ ಯೆಲ್‌ತ್ಸಿನ್ ಅಧಿಕಾರದಲ್ಲಿರುವವರೆಗೆ ವಾಷಿಂಗ್ಟನ್ ಪ್ರಭೃತಿಗಳಿಗೆ ತೊಂದರೆ ಇರಲಿಲ್ಲ. ಅನಂತರ ಅಧಿಕಾರಕ್ಕೆ ಬಂದ ಅಧ್ಯಕ್ಷ ವ್ಲಡೀಮಿರ್ ಪುಟಿನ್ ನಿಧಾನವಾಗಿ ನಿಯಂತ್ರಣ ಸಾಧಿಸಿಕೊಂಡು, ಆರ್ಥಿಕಕ್ಷೇತ್ರದಲ್ಲಿ, ಮುಖ್ಯವಾಗಿ ತೈಲಕ್ಷೇತ್ರದಲ್ಲಿ ಬೇರೂರಿದ್ದ ಮಾಫಿಯಾ ದೊರೆಗಳ ಬೆನ್ನುಮುರಿದು ದೇಶದ ಸಂಪನ್ಮೂಲಗಳ ಪರಭಾರೆಯಾಗದಂತೆ ಕ್ರಮ ಕೈಗೊಂಡರು. ಆಗಲೇ ಅಮೆರಿಕಾದ ವರಿಷ್ಠರು ಅಧ್ಯಕ್ಷ ಪುಟಿನ್ ಪ್ರಜಾಸತ್ತಾತ್ಮಕಕ ಸುಧಾರಣೆಗಳಿಗೆ ಅಡ್ಡಗಾಲು ಹಾಕುತ್ತಿದ್ದಾರೆ ಎಂದು ಗೊಣಗಾಡತೊಡಗಿದ್ದರು. ರಷ್ಯಾದ ಆರ್ಥಿಕ ಹಾಗೂ ರಾಜಕೀಯ ಪರಿಸ್ಥಿತಿ ಆಗಿನ್ನೂ ಅಷ್ಟು ಸುಧಾರಿಸಿರಲಿಲ್ಲ. ಆದರೂ ರಷ್ಯಾದ ಅಧ್ಯಕ್ಷ ಈ ಪ್ರದೇಶದಲ್ಲಿ ಅಧಿಕಾರವನ್ನು ಗಟ್ಟಿಗೊಳಿಸುತ್ತಿದ್ದ ಹಾಗೆಯೇ ಅಮೆರಿಕಾದ ಹುಬ್ಬೇರಿತು. ಅದನ್ನು ಎದುರಿಸುವುದಕ್ಕಾಗಿಯೇ ಅದು ರಷ್ಯಾದ ನೇತೃತ್ವದಲ್ಲಿ ರೂಪುಗೊಂಡಿದ್ದ, ಮಾಜಿ ಸೋವಿಯತ್ ಒಕ್ಕೂಟದ ಬೇರೆ ಬೇರೆ ರಾಜ್ಯಗಳನ್ನೊಳಗೊಂಡಿದ್ದ ಕಾಮನ್‌ವೆಲ್ತ್ ಅನ್ನು ಛಿದ್ರಗೊಳಿಸಲು ಸನ್ನಾಹ ನಡೆಸಿದೆ. ಜಾರ್ಜಿಯಾ, ಅಜರ್‌ಬೈಜಾನ್, ಉಕ್ರೇನ್, ಕಜಕಿಸ್ತಾನ್ ಮೊದಲಾದ ದೇಶಗಳನ್ನು ರಷ್ಯಾದ ಮೇಲೆ ಎತ್ತಿ ಕಟ್ಟಿತು. ಇವೆಲ್ಲ ನಡೆದುಹೋದ ಘಟನೆಗಳು. ರಷ್ಯಾದ ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದ್ದರಿಂದ, ವ್ಯವಸ್ಥೆ ಇನ್ನೂ ದೃಢಗೊಳ್ಳಬೇಕಾಗಿದ್ದುದರಿಂದ ರಷ್ಯಾದ ವಿದೇಶಾಂಗ ನೀತಿ ಅಮೆರಿಕಾಕ್ಕೆ ವಿರೋಧವಾಗಿ ಹೋಗುವ ಸ್ಥಿತಿಯಲ್ಲಿರಲಿಲ್ಲ. ಇರಾಕಿನ ಮೇಲೆ ಅಮೆರಿಕಾದ ದುರಾಕ್ರಮಣಕ್ಕೆ ನೀಡಿದ ಮೌನಸಮ್ಮತಿ ಅದಕ್ಕೆ ಉದಾಹರಣೆ.

ಈಚೆಗೆ ರಷ್ಯಾದ ರಾಜಕೀಯ ಹಾಗೂ ಆರ್ಥಿಕ ಪರಿಸ್ಥಿತಿ ತಕ್ಕಮಟ್ಟಿಗೆ ಸುಧಾರಿಸಿದೆ. ಚೀಣಾದೊಂದಿಗೆ ಸಂಬಂಧಗಳು ಉತ್ತಮಗೊಂಡಿವೆ, ಎಲ್ಲ ಬಗೆಯಲ್ಲಿಯೂ. ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ರಷ್ಯಾ ಸ್ವತಂತ್ರವಾದ ನಿಲುವು ತಳೆಯತೊಡಗಿದೆ. ಇರಾನಿಗೆ ಕ್ಷಿಪಣಿ ವ್ಯವಸ್ಥೆಯನ್ನು ಮಾರಾಟಮಾಡಲು ಒಪ್ಪಂದ ಮಾಡಿಕೊಂಡಿದೆಯಲ್ಲದೆ, ಇರಾನಿನಲ್ಲಿ ಮೊದಲ ನ್ಯೂಕ್ಲಿಯರ್ ವಿದ್ಯುತ್ ಸ್ಥಾವರ ನಿರ್ಮಾಣದ ಕಾರ್ಯ ಕೈಗೊಂಡಿದೆ. ಈ ಎರಡನ್ನೂ ಅಮೆರಿಕಾ ಬಲವಾಗಿ ವಿರೋಧಿಸಿದೆ. ಪ್ಯಾಲಸ್ಟೈನ್‌ನಲ್ಲಿ ಹಮಾಸ್ ಪಕ್ಷ ವಿಜಯ ಗಳಿಸಿ ಅಧಿಕಾರಕ್ಕೆ ಬಂದಮೇಲೆ ಅದರ ನಾಯಕರನ್ನು ಮಾಸ್ಕೋಗೆ ಕರೆಸಿಕೊಂಡು ಮಾತುಕತೆ ನಡೆಸಿ, ಪ್ಯಾಲಸ್ಟೈನ್‌ಗೆ ಆರ್ಥಿಕ ನೆರವು ನೀಡಿರುವುದು ಅಮೆರಿಕಾದ ವರಿಷ್ಠರನ್ನು ಕಂಗೆಡಿಸಿದೆ. ಅದೇ ಧಾಟಿಯಲ್ಲೇ ಇರಾನ್ ನ್ಯೂಕ್ಲಿಯರ್ ಶಸ್ತ್ರಾಸ್ತ್ರ ತಯಾರಿಕೆಯಲ್ಲಿ ತೊಡಗುತ್ತಿದೆ ಎಂದು ಅಮೆರಿಕಾ ಹೊರಿಸಿರುವ ಆಪಾದನೆಯನ್ನು ಪುರಸ್ಕರಿಸದ ರಷ್ಯಾ, ಇರಾನಿನ ಮೇಲೆ ವಿಶ್ವಸಂಸ್ಥೆಯಿಂದ ಯಾವುದೇ ಕ್ರಮ ಕೈಗೊಳ್ಳುವುದನ್ನು ವಿರೋಧಿಸುತ್ತಿದೆ. ಅದರಿಂದಲೇ ಅಮೆರಿಕಾ ಆಕ್ರೋಶಗೊಂಡಿದೆಯಲ್ಲದೆ, ನೆರೆಯ ಉಕ್ರೇನ್ ರಾಷ್ಟ್ರವನ್ನು 'ನ್ಯಾಟೋ' ಕೂಟದಲ್ಲಿ ಸೆಳೆದುಕೊಳ್ಳಲು ಹವಣಿಸಿದೆ. ಆದರೆ ರಷ್ಯಾ ಇದನ್ನು ಪ್ರತಿಭಟಿಸಿದೆ, ಹಾಗೂ ಉಕ್ರೇನಿನೊಂದಿಗೆ ಎಲ್ಲ ರಕ್ಷಣಾ ಒಪ್ಪಂದಗಳನ್ನೂ ರದ್ದುಗೊಳಿಸಿದೆ.

ಅಮೆರಿಕಾದ ಹಂಚಿಕೆಗಳನ್ನು ರಷ್ಯಾ ಸಾಕಷ್ಟು ದೃಢವಾಗಿ ಎದುರಿಸುತ್ತಿರುವುದು ಸ್ವಾಗತಾರ್ಹ ಬೆಳವಣಿಗೆ. ನ್ಯಾಟೋ ಕೂಟದ ಆಚೆಗೆ ಇಂದಿಗೂ ಪ್ರಬಲವಾಗಿರುವ ರಷ್ಯಾ ಸ್ವತಂತ್ರ ವಿದೇಶೀ ಧೋರಣೆ ಅನುಸರಿಸಿ, ಅಮೆರಿಕಾದ ಒತ್ತಾಯಗಳಿಗೆ ಮಣಿಯದೆ ದೃಢವಾದ, ನ್ಯಾಯವಾದ ನಿಲುವು ತಳೆದರೆ ಅದಕ್ಕೂ ಒಳ್ಳೆಯದು, ಪ್ರಪಂಚಕ್ಕೂ ಒಳ್ಳೆಯದು.

**ಸೀಯಾರ್ಕೆ**
'ಚೌಬೀನ' ೮೪೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

ಇತ್ತೀಚೆಗೆ ಬಿಡುಗಡೆಯಾಗಿರುವ ಕೃತಿಗಳು

ತಾಯಿ
ಪುಟ : 360 ರೂ. 100

ಅರ್ನೆಸ್ಟೊ ಚೆ ಗುವಾರ
ಪುಟ : 132 ರೂ. 100

God
a creation of man
ಪುಟ : 168 ರೂ. 100

ಶಾಖೆಗಳು

ಗಾಂಧಿನಗರ
ಬೆಂಗಳೂರು - ೯ ✆ ೨೨೨೫೧೩೮೨

ಕೆ.ಎಸ್.ರಾವ್ ರಸ್ತೆ
ಮಂಗಳೂರು - ೧ ✆ ೨೪೪೧೦೦೧೬

ರಾಮಸ್ವಾಮಿ ವೃತ್ತ
ಮೈಸೂರು - ೨೪ ✆ ೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೨ ✆ ೨೨೪೩೦೨

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂ. ೫೧೯೭, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೨೦೩೫೮೦, ೩೦೫೭೮೦೨೨ e-mail : navakarnataka@vsnl.com
website : www.navakarnatakabooks.com



# ಬುಧಗ್ರಹ ಎಲ್ಲಿದೆ ?

ಡಾ|| ಬಿ. ಎಸ್. ಶೈಲಜಾ

**ಸಾ**ಧಾರಣವಾಗಿ ಗ್ರಹವನ್ನು ಗುರುತಿಸಬಲ್ಲಿರಾ ಎಂದೊಡನೆ ನೆನಪಾಗುವುದು ಶುಕ್ರಗ್ರಹ – ಬೆಳ್ಳಿ. ಬೆಳಗಿನ ಜಾವ ಪೂರ್ವದಲ್ಲಿ ಕೋರೈಸುವಂತೆ ಬೆಳಗುವ ಇದನ್ನು ಗಮನಿಸದೇ ಇರುವುದು ಸಾಧ್ಯವೇ ಇಲ್ಲ. ಹೀಗೆ ಸಂಜೆ, ಮುಂಜಾವುಗಳಲ್ಲಿ ಮಾತ್ರ ಕಾಣುವ ಇನ್ನೊಂದು ಗ್ರಹ ಬುಧ. ಆದರೆ ಅದನ್ನು ಗುರುತಿಸಲು ಶ್ರಮ ಪಡಲೇಬೇಕು. ಈ ತಿಂಗಳಲ್ಲಿ ಇದನ್ನು ಸುಲಭವಾಗಿ ಗುರುತಿಸಲು ಒಳ್ಳೆಯ ಅವಕಾಶವಿದೆ.

ಸಂಜೆಯ ಆಕಾಶದತ್ತ ಗಮನಹರಿಸಿ. ಪ್ರಜ್ವಲಿಸುವ ಗುರುಗ್ರಹವನ್ನು ಸುಲಭವಾಗಿ ಗುರುತಿಸಬಹುದು. ಅದರ ಸಮೀಪದ ಪ್ರಕಾಶಮಾನ ನಕ್ಷತ್ರ ನೀಲಿ ಬಣ್ಣದ್ದು ಚಿತ್ರಾ. ಅದರಿಂದ ಸ್ವಲ್ಪ ಉತ್ತರಕ್ಕೆ ಕಾಣುವ ಕೆಂಪುನಕ್ಷತ್ರ ಸ್ವಾತಿ. ಇನ್ನೂ ಉತ್ತರಕ್ಕೆ ದೃಷ್ಟಿ ಹಾಯಿಸಿದರೆ ಸಪ್ತರ್ಷಿ ಮಂಡಲ. ಈಗ ಪಶ್ಚಿಮದತ್ತ ಕಣ್ಣು ಹೊರಳಿಸಿ. ದಿಗಂತದ ಅಂಚಿನಲ್ಲಿ ಶನಿ, ಮಂಗಳ ಮತ್ತು ಬುಧ – ಇವುಗಳ ಓಟದ ಸ್ಪರ್ಧೆ. ತಿಂಗಳ ಮೊದಲಲ್ಲಿ ಬುಧ ಅಂಚಿನಲ್ಲಿ, ಅದರ ಮೇಲೆ ಮಂಗಳ, ಇನ್ನೂ ಮೇಲೆ ಶನಿ. ತಿಂಗಳ ನಡುವಿನಲ್ಲಿ ಶನಿ-ಮಂಗಳಗಳ ಸಮಾಗಮ. ಶನಿಯನ್ನು ಹಿಂದೆ ಹಾಕಿ ಮಂಗಳ ಸಿಂಹರಾಶಿಯತ್ತ ಓಡುವುದು. ಈ ಓಟ ನೋಡಲು ಆಕರ್ಷಕ; ಗ್ರಹಗಳ ಚಲನೆ ತಿಳಿಯಲು ಸದವಕಾಶ. ಈ ಓಟಕ್ಕೆ ''ರೆಫರಿ''ಯಾಗುವ ಬುಧ ತಿಂಗಳುದ್ದಕ್ಕೂ ಸಂಜೆ ಕಾಣಸಿಗುತ್ತದೆ. ಸಂಜೆಗೆಂಪಿನಲ್ಲಿ ಕಳೆದುಹೋಗಿಬಿಡಬಹುದಾದರೂ ಸೂಕ್ಷ್ಮವಾಗಿ ಗಮನಿಸಿದರೆ ಪತ್ತೆಯಾಗುವುದು. ೨೦ರಂದು ದಿಗಂತದಿಂದ ಅತಿ ಎತ್ತರದಲ್ಲಿ ಕಾಣುವುದು. ಆ ಮುಂದೆ ಪುನಃ ದಿಗಂತದ ಕಡೆಗೆ ಸರಿಯುವುದು. ತಿಂಗಳ ಕೊನೆಗೆ ೨೭ರಂದು ಬಾಲಚಂದ್ರದ ಪಕ್ಕದಲ್ಲಿ ಕಾಣುವುದು. ಚಂದ್ರ ೨೮ರಂದು, ಶನಿ, ಮಂಗಳಗಳ ಪಕ್ಕ ಹಾಯುವುದು. ೨೯ರಂದು ಚಂದ್ರ, ಮಂಗಳ, ಶನಿ, ಬುಧ ಸಾಲಾಗಿ ಕಾಣುವುವು.




೮ರಂದು ಗುರು ಮತ್ತು ಚಂದ್ರ ಜೋಡಿಯಾಗುವುವು. ೧೦ರಂದು ಹುಣ್ಣಿಮೆಯ ಚಂದ್ರನನ್ನು ಗುರುತಿಸಿ. ವಾಸ್ತವವಾಗಿ ಹುಣ್ಣಿಮೆ ೧೧ರಂದು ರಾತ್ರಿ ೧೧:೩೩ಕ್ಕೆ. ಆದರೆ ೧೦ರಂದು ಜ್ಯೇಷ್ಠಾನಕ್ಷತ್ರವನ್ನು ಗುರುತಿಸಲು ಒಳ್ಳೆಯ ಅವಕಾಶವಿದೆ. ಚಂದ್ರನ ಬೆಳಕಿನಲ್ಲಿ ನಕ್ಷತ್ರಗಳೆಲ್ಲ ಮಂಕಾಗಿದ್ದರೂ ವೃಶ್ಚಿಕರಾಶಿಯನ್ನು ಗುರುತಿಸಬಹುದು. ಅದರಲ್ಲಿಯ ಕೆಂಪುನಕ್ಷತ್ರವೇ ಜ್ಯೇಷ್ಠಾ. ೧೧ರಂದು ಪುನಃ ಚಂದ್ರನನ್ನು ಕಂಡಾಗ ಅದು ಜ್ಯೇಷ್ಠಾ ನಕ್ಷತ್ರವನ್ನು ದಾಟಿ ಮುನ್ನಡೆದಿರುವುದು ಸ್ಪಷ್ಟವಾಗುತ್ತದೆ.

ಚಂದ್ರ ಸಂಜೆಯ ಆಕಾಶದಿಂದ ಕಣ್ಮರೆಯಾದ ಮೇಲೆ, ಅಂದರೆ ಹುಣ್ಣಿಮೆಯ ಮುಂದಿನ ದಿನಗಳಲ್ಲಿ ಸಂಜೆ ಪಶ್ಚಿಮ ದಿಕ್ಕಿನತ್ತ ದೃಷ್ಟಿಹರಿಸಿ. ಶನಿ-ಮಂಗಳ ಇವುಗಳ ಓಟವನ್ನು ಛಾಯಾಚಿತ್ರದಿಂದ ಗುರುತಿಸಲು ಒಳ್ಳೆಯ ಅವಕಾಶವಿದೆ.

ಗುರುಗ್ರಹ ಸುಮಾರು ಬೆಳಗಿನ ಜಾವದವರೆಗೂ ಕಾಣುವುದು. ಆದ್ದರಿಂದ ಅದರ ಕೆಂಪುಮಚ್ಚೆ ನೋಡಲು ಈಗ ಒಳ್ಳೆಯ ಅವಕಾಶ ಸಂಜೆ ದೂರದರ್ಶಕದಿಂದ ಅದನ್ನು ನೋಡಿದಾಗ ಕೆಂಪುಮಚ್ಚೆ ಕಾಣಲಿಲ್ಲವೆಂದಾದರೆ ನಿರಾಶರಾಗಬೇಕಿಲ್ಲ. ಸುಮಾರು ಐದುಗಂಟೆಗಳ ನಂತರ ಅದು ಕಂಡೇ ಕಾಣುತ್ತದೆ. (ಗುರುಗ್ರಹದ ''ದಿನ'' ಕೇವಲ ಹತ್ತು ಗಂಟೆಗಳು) ಕೆಲವು ಹವ್ಯಾಸೀ ವೀಕ್ಷಕರು ಗುರುಗ್ರಹದ ಹೊಸ ಮಚ್ಚೆಯನ್ನೂ ಗಮನಿಸಿದ್ದಾರೆ.



೨೮ರ ಸಂಜೆ ಪಶ್ಚಿಮದಲ್ಲಿ ಮಂಗಳ, ಬಾಲಚಂದ್ರ, ಶನಿ ಮತ್ತು ಬುಧ ಸಾಲುಗಟ್ಟಿ ನಿಲ್ಲುತ್ತವೆ

ನಕ್ಷತ್ರ, ಗ್ರಹಗಳನ್ನು ಮುಚ್ಚಿ ಗ್ರಹಣದಂತಹ ಆಚ್ಛಾದನೆಗಳನ್ನು ಪ್ರತಿತಿಂಗಳೂ ಸೃಷ್ಟಿಸುವ ಚಂದ್ರ, ಈ ತಿಂಗಳಲ್ಲಿ ಮೂರು ಇಂತಹ ಘಟನೆಗಳಿಗೆ ಅವಕಾಶ ಮಾಡಿಕೊಡುತ್ತಾನೆ. ಆದರೆ ಅವು ಯಾವುದೂ ನಮಗೆ ಕಾಣುವುದಿಲ್ಲ. ೭ರಂದು ಚಂದ್ರ-ಚಿತ್ರಾ, ೧೦ರಂದು ಜ್ಯೇಷ್ಠಾ ಮತ್ತು ೧೭ರಂದು ಯುರೇನಸ್‌ಅನ್ನು ಚಂದ್ರ ಮರೆಮಾಡುವನು. ಆ ದಿನಗಳಲ್ಲಿ ಆಯಾ ಕಾಯಗಳನ್ನು ಗುರುತಿಸಲು ಒಳ್ಳೆಯ ಅವಕಾಶ ಇವು.

೨೩ರ ಬೆಳಗಿನ ಜಾವ ಚಂದ್ರ- ಶುಕ್ರ ಜೋಡಿಯಾಗುವುವು. ಸುಮಾರು ೫ ಗಂಟೆಗೇ ಎದ್ದು ಚಂದ್ರನನ್ನು ಸೂಕ್ಷ್ಮವಾಗಿ ಗಮನಿಸಿದರೆ, ಅದರ ಹಿಂದೆ ಕೃತ್ತಿಕಾ ನಕ್ಷತ್ರಗುಚ್ಛದ ಕೆಲವು ತಾರೆಗಳು ಮರೆಯಾಗಿರುವುದು ಪತ್ತೆಯಾಗುತ್ತದೆ. ಛಾಯಾಗ್ರಹಣಕ್ಕೆ ಇದೊಂದು ಅಪೂರ್ವ ಅವಕಾಶ.

ಜೂನ್ ೨೧ರಂದು ದಕ್ಷಿಣಾಯನ. ಭೂಮಿ ತನ್ನ ಕಕ್ಷೆಯಲ್ಲಿನ ಹಂತವೊಂದನ್ನು ದಾಟುವ ದಿನ. ಅಂದು ದಿನದ ಅವಧಿ ಗರಿಷ್ಠ. ಆ ಮುಂದೆ ದಿನದ ಅವಧಿ ಕಡಿಮೆಯಾಗತೊಡಗುವುದು. ಬೇಸಿಗೆಯ ಮುಕ್ತಾಯ ಎನ್ನಬಹುದು.

ತುಂಡುತುಂಡಾಗಿ ಸಿಡಿದುಹೋದ ಧೂಮಕೇತು ಶ್ವಾಸ್‌ಮನ್-ವಾಚ್‌ಮನ್, ಮೇ ತಿಂಗಳಲ್ಲಿ ಭೂಮಿಯನ್ನು ದಾಟಿ ಸೂರ್ಯನತ್ತ ಧಾವಿಸಿತು. ಸೂರ್ಯನನ್ನು ಸಮೀಪಿಸುವ, ಅಂದರೆ

ಕಕ್ಷೆಯಲ್ಲಿ ಪುರರವಿ ಎಂಬ ಬಿಂದುವನ್ನು ದಾಟುವ, ದಿನ ಜೂನ್ ೬. ಈಗಾಗಲೇ ೪೦ಕ್ಕೂ ಹೆಚ್ಚ ತುಂಡುಗಳನ್ನು ಗುರುತಿಸಲಾಗಿದೆ. ಛಿದ್ರವಾಗುವ ಕಾರ್ಯ ನಡೆಯುತ್ತಲೇ ಇದೆ. ಆದ್ದರಿಂದ ಜೂನ್ ತಿಂಗಳಲ್ಲಿ ಏನಾಗುವುದು ? ಧೂಮಕೇತು ಸತ್ತೇ ಹೋದಂತೆಯೇ ? ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ಸಿಗಬೇಕಾಗಿದೆ.

### ಖಗೋಳ ದಿನಚರಿ

ಜೂನ್ ೩ ಚಾಂದ್ರಮಾಸದ ಮೊದಲ ಪಾದ
ಚಂದ್ರಾಸ್ತ ನಡುರಾತ್ರಿಗೆ
೪ ಚಂದ್ರ - ಭೂಮಿ ದೂರ ಗರಿಷ್ಠ
೭ ಚಂದ್ರ - ಚಿತ್ರಾ ಜೋಡಿ
೮ ಗುರು-ಚಂದ್ರ ನಡುವೆ ಐದು ಡಿಗ್ರಿ ಕೋನ
೧೦ ಚಂದ್ರ-ಜ್ಯೇಷ್ಠಾ ಜೋಡಿ
೧೧ ರಾತ್ರಿ ೧೧:೩೩ಕ್ಕೆ ಹುಣ್ಣಿಮೆ
೧೬ ಚಂದ್ರ - ಭೂಮಿ ದೂರ ಕನಿಷ್ಠ
೧೭ ಚಂದ್ರ - ಯುರೇನಸ್ ಜೋಡಿ
೧೮ ಚಾಂದ್ರಮಾಸದ ಕೊನೆಯ ಪಾದ
ಚಂದ್ರೋದಯ ನಡುರಾತ್ರಿಗೆ
೨೦ ಬುಧ ಗ್ರಹದ ಗರಿಷ್ಠ ಕೋನೋನ್ನತಿ
೨೧ ದಕ್ಷಿಣಾಯನ ೧೭:೫೬ಕ್ಕೆ
೨೩ ಚಂದ್ರ - ಶುಕ್ರ ಜೋಡಿ
ಕೃತ್ತಿಕಾ ಚಂದ್ರನ ಹಿಂದೆ
೨೫ ಅಮಾವಾಸ್ಯೆ ೨೧:೩೫ಕ್ಕೆ
೨೭ ಬುಧ - ಚಂದ್ರ ಜೋಡಿ
೨೮ ಮಂಗಳ, ಶನಿ, ಚಂದ್ರ, ಬುಧ – ಇವುಗಳ ಸಾಲು
ಜುಲೈ ೧ ಭೂಮಿ - ಚಂದ್ರ ದೂರ ಗರಿಷ್ಠ
೨ ಶುಕ್ರ - ರೋಹಿಣಿ ಜೋಡಿ
೩ ಭೂಮಿ - ಸೂರ್ಯ ದೂರ ಗರಿಷ್ಠ

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧




# ಮಾಡಿದರೆ ಮಾಡಬೇಕು ಅಂಥ ಯುದ್ಧ

(ಒಂದು ಹಾಡು)

ಮಾಡಿದರೆ ಮಾಡಬೇಕು ಅಂಥ ಯುದ್ಧ
ಭರತ ಮತ್ತು ಬಾಹುಬಲಿಗಳಂಥ ಯುದ್ಧ!

೧

ಕೈಯಲ್ಲಿ ಆಯುಧ ಹಿಡಿಯಲಿಲ್ಲ
ಮೈಯಲ್ಲಿ ಕವಚಗಳ ತೊಡಲಿಲ್ಲ
ಬಿರುದುಬಾವಲಿಗಳ ಉಗುಳಲಿಲ್ಲ
ವೀರ ಪ್ರತಿಜ್ಞೆಗಳ ಉಗ್ಗಡಿಸಲಿಲ್ಲ

ಒಂದು ಹನಿ ನೆತ್ತರ ಚೆಲ್ಲಲಿಲ್ಲ
ಒಡವರ ಮಕ್ಕಳ ಕೊಲ್ಲಲಿಲ್ಲ
ಆಳರಸರ ರುಂಡ ಚೆಂಡಾಡಲಿಲ್ಲ
ಮೂಕಪ್ರಾಣಿಗಳ ಮುಂಡಾಡಲಿಲ್ಲ

ವೀರರು ಕಲ್ಲುಗಳ ಸೇರಲಿಲ್ಲ
ಮಾಸತಿಯರು ಬೆಂಕಿಗೆ ಹಾರಲಿಲ್ಲ
ಜೋಳದ ಪಾಳಿಯ ನುಡಿಯಲಿಲ್ಲ
ಲೆಂಕರ ತಲೆಗಳು ಸಿಡಿಯಲಿಲ್ಲ

ಮುತ್ತೈದೆಯರ ತಾಳಿ ಹರಿಯಲಿಲ್ಲ
ಹೆತ್ತ ಕರುಳಗಳ ಕತ್ತರಿಸಲಿಲ್ಲ
ಅನಾಥ ಮಕ್ಕಳ ಬಿಕ್ಕಲಿಲ್ಲ
ಬಂಧು ಬಾಂಧವರು ಬಿಕ್ಕಲಿಲ್ಲ

ಹೆಣದ ರಾಶಿಗಳ ಒಟ್ಟಲಿಲ್ಲ
ರಕ್ತ ಕೊಳೆತು ಮಡುಗಟ್ಟಲಿಲ್ಲ
ಬಿಡಿ ಬಿಡಿ ಅಂಗಾಂಗ ಮಿಡುಕಲಿಲ್ಲ
ವಿಕಲಾಂಗ ಜೀವಗಳು ನಡುಕಲಿಲ್ಲ

ಮಾರಿಗೆ ಔತಣವಾಗಲಿಲ್ಲ
ಹದ್ದುಗಳು ತಿಂದು ತೇಗಲಿಲ್ಲ
ನರರು ರಾಕ್ಷಸರಾಗಲಿಲ್ಲ
ಎದೆ ಬಗೆದು ನೆತ್ತರ ಹೀರಲಿಲ್ಲ

೨

ಮಾಡಿದರೆ ಮಾಡಬೇಕು ಅಂಥ ಯುದ್ಧ
ಭರತ ಮತ್ತು ಬಾಹುಬಲಿಗಳಂಥ ಯುದ್ಧ

ಆಯುಧ ಬಿಸುಟಿ ಭಟರು ಪ್ರೇಕ್ಷಕರಾಗಿ
ರಾಜರೇ ಎದುರುಬದುರಾದಂಥ ಯುದ್ಧ
ಆಳರಸ ಮಾಂಡಲಿಕ ದಂಡನಾಯಕರಾದಿ
ಬಾಯ್ದೆರೆದು ಕಣ್ಬಿಟ್ಟು ಕೂತಂಥ ಯುದ್ಧ

ಊರೂರ ಜಾತ್ರೆಗಳ ಕಣಗಳಲ್ಲಿ
ನಡೆವ ಕುಸ್ತಿಯಾಟದಂಥ ಯುದ್ಧ
ಕೆರೆಬಾವಿ ಹೊಳೆಹಳ್ಳ ಕಾಲುವೆಗಳಲ್ಲಿ
ಎಳೆಯರ ನೀರಾಟದಂಥ ಯುದ್ಧ

ಯಾರೇ ಬೀಳಲಿ ಯಾರೇ ಏಳಲಿ
ಚಪ್ಪಾಳೆ ತಟ್ಟಿ ನಲಿವಂಥ ಯುದ್ಧ
ಯಾರೇ ಗೆಲ್ಲಲಿ ಯಾರೇ ಸೋಲಲಿ
ಯಾರಿಗೂ ಸಾವು ತರದಂಥ ಯುದ್ಧ

೩

ಮಾಡಿದರೆ ಮಾಡಬೇಕು ಅಂಥ ಯುದ್ಧ
ಭರತ ಮತ್ತು ಬಾಹುಬಲಿಗಳಂಥ ಯುದ್ಧ
ಸೋತವನು ಚಕ್ರವರ್ತಿಯಾದಂಥ ಯುದ್ಧ
ಗೆದ್ದವನು ಗೊಮ್ಮಟನಾದಂಥ ಯುದ್ಧ

ಕೊಲುವ ಆಜ್ಞೆಯ ಹೊತ್ತ ಚಕ್ರರತ್ನ
ಜಿನನ ಪಾದಕೆರಗಿದಂಥ ಯುದ್ಧ!

ಎಂ.ಡಿ. ಒಕ್ಕುಂದ
ಕನ್ನಡ ಪ್ರಾಧ್ಯಾಪಕರು, ಶ್ರೀ ಸಿದ್ದೇಶ್ವರ ಸರಕಾರಿ ಪದವಿ ಕಾಲೇಜು, ನರಗುಂದ, ಗದಗ ಜಿಲ್ಲೆ



# ಬರಗೂರರ 'ತಾಯಿ'ಯ ಬಂಡಾಯ



ಜಗತ್ತಿನ ನೂರಾ ಇಪ್ಪತ್ತೇಳು ಭಾಷೆಗಳಿಗೆ ಅನುವಾದಗೊಂಡಿರುವ ಮಕ್ಸೀಂ ಗೋರ್ಕಿಯವರ 'ತಾಯಿ'ಗೆ ಈಗ ನೂರು ವರ್ಷ. ಮೂಲತಃ ಈಕೆ ಸೋರ್ಮೊವೋ ಎಂಬ ಪುಟ್ಟ ಹಳ್ಳಿಯ ಪೋತೆರ್‌ನ ತಾಯಿ. ಆದರೆ ಅಲ್ಲಿನ ಕಾರ್ಮಿಕ ಚಳವಳಿಗೆ 'ತಾಯ್ತನ' ನೀಡಿದ ಕಾರಣಕ್ಕೆ ಈಕೆ ರಷ್ಯಾ ದೇಶದ ತಾಯಿ ಆದಳು. ಅಷ್ಟೇ ಅಲ್ಲ, ದುಡಿವ ವರ್ಗಕ್ಕೆ ಬಿಡುಗಡೆಯ ಮಡಿಲಾದಳು; ಕ್ರಾಂತಿಕಾರಿಗಳ ಒಡಲಾದಳು. ಇದಕ್ಕಾಗಿಯೇ ಇರಬೇಕು, ಗೋರ್ಕಿ ಕೃತಿಯ 'ಕಪ್ಪು' ಅಕ್ಷರಗಳೆಂದರೆ ಜಗತ್ತಿನ 'ಕೆಂಪು' ಮನಸ್ಸುಗಳಿಗೆ ಬಲು ಪ್ರೀತಿ. ಈ ಕಾರಣದಿಂದಲೇ ಬರಗೂರು ರಾಮಚಂದ್ರಪ್ಪ ಅವರು ರಷ್ಯಾ ಮೂಲದ ಈ 'ತಾಯಿ'ಯನ್ನು ಭಾರತಕ್ಕೆ ಕರೆತಂದಿದ್ದಾರೆ; ಕನ್ನಡ ಚಲನಚಿತ್ರರಂಗದಲ್ಲಿ ಸಂಚಲನ ಮೂಡಿಸಿದ್ದಾರೆ.

ಈಗಾಗಲೇ ಕನ್ನಡ ಚಲನಚಿತ್ರರಂಗ ಹಲವು ಪ್ರಯೋಗಗಳನ್ನು ಕಂಡಿದೆ. ಒಂದೆಡೆ 'ಕಾನೂರು ಹೆಗ್ಗಡಿತಿ'ಯಂಥ ಕಾದಂಬರಿಗಳನ್ನು ಆಧರಿಸಿಕೊಂಡಿದೆ. ಇನ್ನೊಂದೆಡೆ ತವರಿನ ಹಲವು ತಾಯಂದಿರನ್ನು ಹೊಂದಿದೆ. ಹಾಗೆ ನೋಡಿದರೆ ಮಕ್ಸೀಂ ಗೋರ್ಕಿಯವರ ಈ ಕೃತಿಯು ಸಹ ಒಂದೆಡೆ ಕಾದಂಬರಿ; ಇನ್ನೊಂದೆಡೆ ತಾಯಿ ಆಗಿರುವಂಥದ್ದು. ಆದರೆ, ಇಲ್ಲಿ ಗಮನಿಸಬೇಕಾದ ಬಹುಮುಖ್ಯ ಅಂಶವೆಂದರೆ ಮಕ್ಸೀಂ ಗೋರ್ಕಿಯವರ ಆ 'ಮದರ್' ಈಗ ಬರಗೂರರ 'ತಾಯಿ'. ನೂರುವರ್ಷದ ನಂತರ ರಷ್ಯಾದಿಂದ ಭಾರತಕ್ಕೆ ಬಂದ ಈಯಮ್ಮನಿಗೆ ಅನೇಕ ಗುಣಗಳಿವೆ.

ಮೂಲತಃ ಮಕ್ಸೀಂ ಗೋರ್ಕಿ ಸವಾಲಿನ ಸಾಹಿತಿ. ಹೋರಾಟದ ಕಿಡಿಗಳನ್ನು ಹೊತ್ತಿಸಿದವನು, ಈ ಕಿಡಿಗಳ ಜ್ವಾಲೆಯನ್ನು ಕಣ್ಣಾರೆ ಕಂಡವನು, ಕೆಂಡ ತುಳಿದವನು, ಕಟಕಟೆ ಏರಿದವನು, ಥೇಟ್ ತನ್ನ 'ತಾಯಿ' ತರಹ. ಇಂಥ ಸಾಹಿತಿಯ ಕೃತಿಯನ್ನು ಸಿನಿಮಾ ಮಾಡುವುದೆಂದರೆ ಸವಾಲಿನ ಕೆಲಸವೇ ಸರಿ. ಏಕೆಂದರೆ, ಗೋರ್ಕಿಯವರ 'ತಾಯಿ'ಯ ಒಡಲಲ್ಲಿ ರಷ್ಯಾದೇಶದ ಸಾಂಸ್ಕೃತಿಕ ಜಗತ್ತಿದೆ. ಅಲ್ಲಿನ ಸಮುದಾಯ-ಸಂಘರ್ಷ, ಭಾಷೆ-ಬಂಧುತ್ವ, ಕಥೆ-ವ್ಯಥೆ, ಮಾತು-ಮೌನ, ಹಸಿವು-ಆಕ್ರೋಶ, ಬಲ್ಲಿದ-ಬಡವ, ವಿಚಾರ-ಹೋರಾಟ, ಕಾರ್ಮಿಕ-ಕ್ರಾಂತಿ, ಬಂಧನ-ಬಿಡುಗಡೆಯಲ್ಲಿ ತಾಯಿ-ಮಗನ ತಂತುಗಳನ್ನು ಹೊಂದಿದೆ. ಇವೆಲ್ಲವುಗಳ ಒಟ್ಟು ರೂಪಕವೇ 'ತಾಯಿ'. ಇಂಥ 'ತಾಯಿ'ಯನ್ನು ರಷ್ಯಾದ ಗಡಿದಾಟಿಸಿ ಭಾರತಕ್ಕೆ ಕರೆತರುವಾಗ ಮತ್ತು ಕನ್ನಡಿಗರ ಮನಸ್ಸಿಗೆ ತಲುಪಿಸುವಾಗ ಬರಗೂರರು ತೋರಿರುವ ಸಾಧನೆ ನಿಜಕ್ಕೂ ಮೆಚ್ಚಬೇಕಾದುದು. ಅನ್ಯ ದೇಶ, ಭಾಷೆ, ಸಾಹಿತ್ಯ-ಸಂಸ್ಕೃತಿ ಹೊಂದಿರುವ 'ತಾಯಿ'ಯಂಥ ಕೃತಿಯನ್ನು ಇಲ್ಲಿನ ದೃಶ್ಯಮಾಧ್ಯಮಕ್ಕೆ ದಕ್ಕಿಸಿಕೊಳ್ಳುವುದು ಸಹ ಕಷ್ಟದ ಕೆಲಸ. ಇಂಥ ಸಂದರ್ಭದ ನಡುವೆಯೂ ಗೋರ್ಕಿಯವರ 'ತಾಯಿ'ಯನ್ನು ಇಲ್ಲಿನ ಸಮುದಾಯ-ಸಂಘರ್ಷಗಳಿಗೆ ಅನ್ವಯಿಸಿಕೊಳ್ಳುವಲ್ಲಿ ಬರಗೂರರ ಚಿತ್ರಕತೆ, ಸಂಭಾಷಣೆ ಮತ್ತು ನಿರ್ದೇಶನ ಯಶಸ್ಸು ಕಂಡಿದೆ. ಕಾರಣ, ಬರಗೂರು ಅವರದು ಪಳಗಿದ ಪ್ರತಿಭೆ. ಈಗಾಗಲೇ ಕನ್ನಡ ಚಲನಚಿತ್ರ ರಂಗದಲ್ಲಿ ಅದು ಹೊಸ ಹೊಸ ಪ್ರಯೋಗಗಳನ್ನು ನೀಡಿದೆ. 'ಶಾಂತಿ'ಯಂಥ ಏಕವ್ಯಕ್ತಿ ಸಿನಿಮಾದ ಮೂಲಕ ಗಿನ್ನಿಸ್ ದಾಖಲೆಯನ್ನೂ ಸ್ಥಾಪಿಸಿದೆ. ಕೋಟೆ, ಕರಡಿಪುರ, ಹಗಲುವೇಷ, ಒಂದು ಊರಿನ ಕತೆ, ಬೆಂಕಿ, ಸೂರ್ಯ, ಕ್ಷಾಮ ಮುಂತಾದ ಚಿತ್ರಗಳಲ್ಲಿ ಸಿನಿಮಾಕ್ಕೆ ಇರುವ ಸೃಜನಶೀಲತೆಯನ್ನು ಹೇಳಿದೆ. ಆದ್ದರಿಂದಲೇ 'ತಾಯಿ' ಚಿತ್ರ ಸಿದ್ಧಗೊಳ್ಳಲು ಸಾಧ್ಯವಾಗಿದೆ.

**ಡಾ|| ರಂಗರಾಜ ವನದುರ್ಗ**



ಗೋರ್ಕಿಯವರ ಕಾದಂಬರಿಯ ಕೇಂದ್ರ ಸ್ಥಳ ರಷ್ಯಾದ ಸೋರ್ಮೊವೊ ಎಂಬ ಪುಟ್ಟ ಪ್ರದೇಶ. ಅಲ್ಲಿ ವಾಸಿಸುತ್ತಿದ್ದವರು ನಿಝ್ನಿ – ನೊವ್ಗೊರೊದ್‌ನ ಕಾರ್ಮಿಕರು. ಕಾರ್ಖಾನೆ ಆಡಳಿತದ ಕ್ರೂರನೀತಿಗೆ ಬೇಸತ್ತ ಕಾರ್ಮಿಕರಲ್ಲಿ ಪೋತೆರ್, ಆನ್ದ ಕಿರೀಲ್ಲೊವ್ನ ಹಾಗೂ ಇತರ ಕಾರ್ಮಿಕರು ಮುಖ್ಯರು. ಈ ಆನ್ದಳೇ 'ತಾಯಿ' ಕಾದಂಬರಿಯ ಪೆಲಗೇಯ ವ್ಲಾಸೋವ; ಹೀಗಿರುವ ಕಾರ್ಮಿಕರ ಚಾರಿತ್ರಿಕ ಬದುಕನ್ನು ಕಥನವಾಗಿಸಿಕೊಂಡದ್ದು 'ತಾಯಿ' ಕಾದಂಬರಿ.

ಅಲ್ಲಿನ ಸೋರ್ಮೊವೊ ಇಲ್ಲಿ ಶಿವದುರ್ಗ (ಚಿತ್ರದುರ್ಗ). ಜೊತೆಗಿರುವ ಮಾರಿ ಕಣಿವೆ ಇಡೀ ಇಂಡಿಯಾದ ಭಿತ್ತಿ. ಅದರಂತೆ ಅಲ್ಲಿದ್ದ ಪಾವೆಲ್, ಹೊಹೋಲ್, ಅಂದ್ರೇಯ್, ನಹೋದ್ಕ, ನತಾಷರೆಲ್ಲ ಇಲ್ಲಿ ರಾಜು, ಈಶ್ವರ, ರಂಜಾನ್, ಸೀತಾ, ಶೇಖರ್‌ರಾಗಿ ಬರುವಾಗ ಪಾತ್ರಗಳಿಗೆ ದೇಸೀಯತೆ ದಕ್ಕಿ ಬಿಡುತ್ತದೆ. ಕಾರ್ಖಾನೆಗೆ ಇಟ್ಟ ''ಜಾರ್ಜ್ ಬುಷ್ ಲಿಂಕ್ ಕಂಪನಿ'' ಹೆಸರಿನ ಮೂಲಕವೂ ಚಿತ್ರ ಸಮಕಾಲೀನ ಗೊಳ್ಳುತ್ತದೆ; ಅಮೆರಿಕಾ ಮತ್ತು ಬ್ರಿಟಿಷ್ ವಸಾಹತುಗಳನ್ನು ನೆನಪಿಸುತ್ತಲೇ ಜಾಗತೀಕರಣಕ್ಕೆ ಎದುರು ನಿಲ್ಲಲು ಪ್ರೇರೇಪಿಸುತ್ತದೆ.

ಈ ಚಿತ್ರ ಪ್ರಾರಂಭವಾಗುವುದೇ ಜಾರ್ಜ್‌ಬುಷ್ ಲಿಂಕ್ ಕಂಪನಿಯ ಮುಂಬಾಗಿಲ ಮೂಲಕ. ಅಲ್ಲಿ ರಾಜು ಮತ್ತು ಆತನ ಸಂಗಾತಿಗಳಿಂದ ವ್ಯಕ್ತವಾಗುವ ಸಾತ್ವಿಕ ಸಿಟ್ಟು ಮುಂದಿನ ಸಂಘರ್ಷಾತ್ಮಕ ಹಾದಿಯನ್ನು ಸೂಚಿಸುತ್ತದೆ. ಈ ನಡುವೆ ಏನೂ ಅರಿಯದ ಅನಕ್ಷರಸ್ಥೆ 'ತಾಯವ್ವ' ಮನೆಮುಗ್ಧೆ. ಈಕಡೆ ಕುಡುಕ ಗಂಡನ ಕಾಟ, ಆಕಡೆ ತರುಣ ಮಗನ ಹೋರಾಟ. ಇವೆರಡನ್ನು ನಿಭಾಯಿಸುವಲ್ಲಿ ಹೈರಾಣಗೊಂಡ ವೃದ್ಧೆ. ಗಂಡನ ಕಡುಕೋಪಕ್ಕೆ, ಕೋಪದ ಪ್ರತಿಯೊಂದು ಏಟಿಗೆ, ಮೈ, ಮನ, ಮುಖ ಕೊಟ್ಟವಳು. ಕೊಟ್ಟ ಮುಖದ ತುಂಬಾ ಮಾಯದ ಗಾಯಗಳು. ಇಲ್ಲಿಂದ ಜಗದ ಗಾಯಗಳ ಕಡೆ ವ್ಯಾಪಿಸಿಕೊಳ್ಳುವ 'ತಾಯಿ'ಯ ನೋವುಗಳು ಸಿದ್ಧಾಂತ, ಸಂಘಟನೆ ಹಾಗೂ ಸಂಘರ್ಷದ ಮಜಲುಗಳಲ್ಲಿ ದಾಖಲುಗೊಳ್ಳುತ್ತಾ ಹೋಗುತ್ತದೆ. ಈ ಮೂರು ಹಂತಗಳಲ್ಲಿ ಸಜ್ಜುಗೊಳ್ಳುವ ಸಂಗಾತಿಗಳು ಒಂದು ಕಡೆಯಾದರೆ, ಮಾನವೀಯತೆ, ಸಮಾನತೆ ಮತ್ತು ಪ್ರಾಮಾಣಿಕತೆಯಲ್ಲಿ ಚಲಿಸುವ ತಾಯಿ ಇನ್ನೊಂದು ಕಡೆ ಕಾಣುತ್ತಾಳೆ. ಇವು ಬರಗೂರರ 'ತಾಯಿ'ಯ ಬಹುಮುಖ್ಯ ಮಾದರಿಗಳು. ಮಕ್ಸೀಂ ಗೋರ್ಕಿಯ 'ತಾಯಿ'ಗಿಂತ ಬರಗೂರರ 'ತಾಯಿ' ವಿಭಿನ್ನವಾಗಿ ನಿಲ್ಲುವುದು ಸಹ ಇಲ್ಲಿಯೆ.

ರಾಜುಗೆ ತಾಯಿ ಆದದ್ದು ಮೊದಲ ಹಂತ. ರಾಜುವಿನ ಚಳವಳಿಗೆ 'ತಾಯ್ತನ' ತುಂಬಿದ್ದು ಎರಡನೆಯ ಹಂತ. ಈ ಎರಡನೇ ಹಂತದ ತಾಯಿಗೆ ಮನುಷ್ಯರಲ್ಲಿ ಮಾನವೀಯತೆಯನ್ನು, ಸಮಾಜದಲ್ಲಿ ಸಮಾನತೆಯನ್ನೂ, ಸಂಘರ್ಷದಲ್ಲಿ ಪ್ರಾಮಾಣಿಕತೆಯನ್ನೂ ಅರಿಯುವ ಹಂಬಲವಿದೆ. ಇಂಥ ಹಂಬಲ ಬರಗೂರರ 'ತಾಯಿ'ಗೆ ಮಾತ್ರ ಸಾಧ್ಯವೇನೋ. ಏಕೆಂದರೆ, ಈ ತಾಯಿಯ ಹುಡುಕು ಬಟ್ಟೆ.

ಮುರುಕು ಮನೆ, ಬಡಭಾರತದ ಸಂಕೇತ. ಇಂಥ ಮುರುಕು ಮನೆಯಲ್ಲಿ ಕುಳಿತೇ ಕ್ರಾಂತಿರಾಜ್ಯದ ಕನಸು ಕಾಣುವ ಮಗ, ಈ ಕನಸುಗಳಿಗೆ ರೆಕ್ಕೆಪುಕ್ಕ ಬಲಿಸುವ ಕೆಂಪು ಪುಸ್ತಕ, ಜೊತೆಗಿರುವ ಸೀತೆ-ಶೇಖರ್‌ನಂಥ ಸಂಗಾತಿಗಳ ಬದ್ಧತೆ. ಆದರೆ ಇವರೆಲ್ಲ ಕೂಡಿ ದಿನವೆಲ್ಲ ಮಾಡುವ ಘನವಾದ 'ಡಿಬೇಟ್'ಗಳಂತೂ ತಾಯಿಗೆ ಎಳ್ಳಷ್ಟೂ ಅರ್ಥವಾಗುವುದಿಲ್ಲ. ಅವು ಥೇಟ್ ಭಾರತದೇಶದ ಬಜೆಟ್‌ಗಳಂತೆ ಭಾಸವಾಗುತ್ತವೆ.

'ದೇಹವೇ ದೇಗುಲ' ಕುರಿತಂತೆ ಅಂದು ಶರಣರಲ್ಲಿ ನಡೆದ ಚರ್ಚೆ ಇಂದು ಶಿವದುರ್ಗದ ಸಂಗಾತಿಗಳಲ್ಲಿಗೆ ವಿಸ್ತರಿಸಿಕೊಂಡದ್ದು ಸಹ ವಿಶೇಷವೇ. ರಷ್ಯಾ ದೇಶದ ಹೋರಾಟದ ನೆಲೆಗಳನ್ನು ಇಲ್ಲಿನ ಸ್ಥಳೀಯ ನೆಲಕ್ಕೆ ಅನ್ವಯಿಸಿಕೊಳ್ಳುವಲ್ಲಿ ಬರಗೂರರು ಬಳಸಿಕೊಳ್ಳುವ ಶರಣರ ವಚನಗಳು, ಸೂಫಿಯ ಅನುಭಾವಗಳು, ಕುವೆಂಪು ಕಾವ್ಯದ ಸಾಲುಗಳು ನೆಲಮೂಲವನ್ನು ನೆನಪಿಸುತ್ತವೆ. ಅದರಂತೆ, ಕರಪತ್ರ ಹಂಚುವ 'ತಾಯಿ'ಯಲ್ಲಿ ಕಪ್ಪು, ಕೆಂಪು, ಹಸಿರು ಬಣ್ಣಗಳನ್ನು ಕೇಳುವ ಸಂಗಾತಿಗಳ ಆಶಯಗಳು ಸಹ ಡಿಎಸೆಸ್ಸು, ಕಮ್ಯುನಿಸ್ಟು, ಸೋಸ್ಯಾಲಿಸ್ಟುಗಳನ್ನು ಪ್ರತಿನಿಧಿಸುತ್ತವೆ. ಆ ಮೂಲಕ ದೇಸೀ ಹೋರಾಟಗಳಿಗೆ ಮತ್ತು ಜಾಗತೀಕರಣದ ಮುಖಾಮುಖಿಗೆ ಅಂಬೇಡ್ಕರ್, ಮಾರ್ಕ್ಸ್ ಹಾಗೂ ಲೋಹಿಯಾ ಅವರ ವಿಚಾರಧಾರೆಗಳ ಅಗತ್ಯತೆಯನ್ನು ಒತ್ತಿ ಹೇಳುತ್ತವೆ. ಇವೆಲ್ಲವುಗಳ ಮೂಲಕ 'ತಾಯಿ' ಚಿತ್ರ ಸಮಕಾಲೀನ ಸಂದರ್ಭಕ್ಕೆ ಸ್ಪಂದಿಸುತ್ತಾ ಹೋಗುತ್ತದೆ.

ಸಂಗಾತಿಗಳು ಮಾಡುವ ಮನೆಯಲ್ಲಿನ ಚರ್ಚೆ ತಾಯಿಗೆ ತಿಳಿಯದು. ಕಾರಣ ಅವಳು ಅನಕ್ಷರಸ್ಥೆ, ಮೇಲಾಗಿ ಮುಗ್ಧೆ. ಹಾಗಾಗಿ ತನ್ನ ಮಗ ರಾಜುವನ್ನು ಪೊಲೀಸರು ಬಂಧಿಸಿದಾಗಲೇ ಗೊತ್ತಾದದ್ದು, ಈ ಸಂಗಾತಿಗಳೆಲ್ಲ ಬರೀ ಕಾರ್ಮಿಕರಲ್ಲ, ಕ್ರಾಂತಿಕಾರಿಗಳೆಂದು. ಅಂದಿನಿಂದಲೇ ಕಾರ್ಮಿಕ ರಾಜುವಿನ ತಾಯಿ, ಸಂಗಾತಿಗಳಿಗೆ ಸಮುದಾಯಕ್ಕೆ ಕೊನೆಗೆ ಸಂಘರ್ಷಕ್ಕೇ ತಾಯಿ ಆಗುತ್ತಾಳೆ. ಕ್ರಾಂತಿರಾಜ್ಯದ ಹೋರಾಟಕ್ಕೆ ತಾಯ್ತನ ತುಂಬುತ್ತಾಳೆ. ಒಮ್ಮೆ, ನೀಲೊವ್ನ ಸೈನಿಕರು ಮತ್ತು ಜೈಲರುಗಳು ''ಜನರಿಗೆ ಚಿತ್ರಹಿಂಸೆ ಕೊಡುತ್ತಾರೆಯೇ? ಮೈ ಹರಿದು ಮೂಳೆ ಮುರೀತಾರೆಯೆ?'' ಎಂದು ಮಗನಿಗೆ ತಾಯಿ ಕೇಳಿದ್ದಳು. ಆಗ ಮಗ ''ಅವರು ಮೈಯೊಳಗಿನ ಮೂಳೆ ಮಾತ್ರ ಅಲ್ಲ, ವ್ಯಕ್ತಿತ್ವವನ್ನು ಮುರೀತಾರಮ್ಮ'' ಎಂದದ್ದು ತಾಯಿಗೆ ನೆನಪಾಗುತ್ತದೆ. ಬಂಧನದಲ್ಲಿರುವ ಮಗ ಪದೇ ಪದೇ ಕಣ್ಮುಂದೆ ಬರುತ್ತಾನೆ. ಇದೇ ಸಂದರ್ಭದಲ್ಲಿ ಹಿನ್ನೆಲೆಯಾಗಿ

''ಕಿರುಬನ ಬಾಯಲ್ಲಿ
ಕರುಳು ಸಿಕ್ಕಿತು ನೋಡಾ
ಬೆವರಲ್ಲೆ ಬಲೆ ಹೆಣೆದು
ಒಳಗೆ ನಕ್ಕಿತು ಜೇಡ
ಬಲೆ ಯಾರದೊ ಇಲ್ಲಿ ಬಲಿ ಯಾರದೊ
ತಾಯಿ ತಬ್ಬಲಿಯಾದ ಕಥೆ ನಮ್ಮದು''

ಎಂದು ಕೇಳಿ ಬರುವ ಹಾಡು ಕೇಳುಗರೆದೆಯಲ್ಲಿ ಕಂಪನ ಹುಟ್ಟಿಸುತ್ತದೆ. ಇಲ್ಲಿ ಬಂಧಿತ ಮಗನ ಬಿಡುಗಡೆಗೆ ಹಂಬಲಿಸುತ್ತಿದ್ದ ತಾಯಿ, ಬರುಬರುತ್ತಾ ಇಡೀ ಬೆವರಿನ ಮಕ್ಕಳ ಬಿಡುಗಡೆಗೆ ವಿಸ್ತರಿಸಿಕೊಳ್ಳುವುದು ತುಂಬಾ ಪರಿಣಾಮಕಾರಿಯಾಗಿದೆ. ಅಂದರೆ, ''ಹೋರಾಟವೇ ತಾಯಿ, ನಾವು ಅವಳ ಮಕ್ಕಳು'' ಎನ್ನುವ ಸಂಗಾತಿಗಳ ಮಾತು ಇದನ್ನು ರುಜುವಾತುಪಡಿಸುತ್ತದೆ. ಹುಡುಕಾಟ ಮತ್ತು ಹೋರಾಟ, ಬಂಧನ ಮತ್ತು ಬಿಡುಗಡೆಯ ನಡುವೆ ನಲುಗಿಹೋಗಿದ್ದ ತಾಯಿಗೆ ''ನಡೆಮುಂದೆ ನಡೆಮುಂದೆ ನುಗ್ಗಿ ನಡೆಮುಂದೆ'' ಎಂದು ಹಾಡುವ ಶಿವಸ್ವಾಮಿಯ ಹಾಡು ತಾಯಿಯನ್ನು ಮತ್ತೆ ಮುನ್ನುಗ್ಗುವಂತೆ ಮಾಡುತ್ತದೆ. ಬೆಳೆಗೆ ಭೂಮಿ, ಮಳೆಗೆ ಆಕಾಶವನ್ನು ಧ್ಯಾನಿಸುವ ಶಿವಸ್ವಾಮಿಯ ಮನಸ್ಸು ರೈತಹೋರಾಟಕ್ಕೆ ನಾಂದಿ ಹಾಡುತ್ತದೆ. ಅಂದರೆ, ಏಕಕಾಲಕ್ಕೆ ರೈತ, ದಲಿತ, ಕಾರ್ಮಿಕ ಹೋರಾಟಗಳನ್ನು ರೂಪಿಸುವುದರೊಂದಿಗೆ ಅವುಗಳಿಗೆ 'ತಾಯ್ತನ' ತುಂಬಬೇಕೆಂಬ ಹಂಬಲ ಬರಗೂರು ಅವರಲ್ಲಿರುವುದು ಇದರಿಂದ ಸ್ಪಷ್ಟವಾಗುತ್ತದೆ. ''ಬರತೇವೆ ನಾವು ಬರತೇವೆ, ಬೆವರಿಗೆ ಬೆಲೆಯ ತೆರತೇವೆ'' ಎಂದು ಘೋಷಿಸುವ ಮೇ ದಿನವು ಇದನ್ನೇ ಧ್ವನಿಸುತ್ತದೆ.

ಬಂಧಿತ ರಾಜುವಿನ ಬಿಡುಗಡೆಗಾಗಿ ನಡೆಯುವ ಮತ್ತೊಂದು ಪ್ರಯತ್ನ ನ್ಯಾಯಾಲಯದಲ್ಲಿ ನಡೆಯುತ್ತದೆ. ಈ ದೃಶ್ಯದಲ್ಲಿ ಭಾಗವಹಿಸುವ ಸಂಗಾತಿಗಳು ''ಸಮಾನತೆ ನಮ್ಮ ಕನಸು, ಮಾನವೀಯತೆ ನಮ್ಮ ಮನಸ್ಸು'' ಎಂದು ಹೇಳುತ್ತಿರುವಾಗಲೇ ಕೋರ್ಟಿನ ಭಾಷೆ ಕಾರ್ಮಿಕರಿಗೆ, ಕಾರ್ಮಿಕರ ಭಾಷೆ ಕೋರ್ಟಿಗೆ ಅರ್ಥವಾಗುವುದಿಲ್ಲ. ಕಟಕಟೆಯಲ್ಲಿ ನಿಂತ ರಾಜುವಿಗೆ ''ನಿಮ್ಮ ಪರವಾಗಿ ಯಾರು ವಾದಿಸುತ್ತಾರೆ?'' ಎಂದು ನ್ಯಾಯಾಧೀಶ ಕೇಳಿದಾಗ, ತಕ್ಷಣವೇ ರಾಜು ''ಹೋರಾಟಕ್ಕೆ ವಕೀಲ ಬೇಕಿಲ್ಲ''ವೆಂದು ಪ್ರತಿಕ್ರಿಯಿಸಿದಾಗ ಇಡೀ ಕೋರ್ಟಿಗೆ ಕೋರ್ಟೇ ಒಂದು ಸಲ ಗಪ್‌ಚುಪ್ ಆಗುತ್ತದೆ. ಆದರೆ ಮತ್ತೆ ಗುಜುಗುಜು ಪ್ರಾರಂಭವಾದಾಗ ನ್ಯಾಯಾಧೀಶರ ಸುತ್ತಿಗೆ ಬಡ ಕಕ್ಷಿದಾರರ ನೆತ್ತಿಗೆ ಕುಕ್ಕಿದಂತೆ ಟೇಬಲ್ ತಲೆಗೆ ಕುಕ್ಕುತ್ತದೆ. ''ಅಯ್, ನ್ಯಾಯ ಕೇಳಾಕ ಮಾತಾಡಬಾರ್ದಾ'' ಎನ್ನುವ ತಾಯಿಯ ಮುಗ್ಧತೆಯಂತು ಶ್ರಮಿಕರ ಸಂಕೇತವೇ ಆಗಿದೆ. ಈ ನಡುವೆಯೆ ಕೋರ್ಟಿನಲ್ಲಿ ನೆರೆದ ಎಲ್ಲರೆದುರಿಗೂ ರಾಜು ಕ್ರಾಂತಿಗಾಗಿ ಕರೆ ನೀಡಿದ್ದು ಮೈ ನವಿರೇಳಿಸುವಂತಹದ್ದು. ತನ್ನ ಬಿಡುಗಡೆಗಿಂತ ನಾಡಿನ ಬಡವರೆಲ್ಲರ ಬಿಡುಗಡೆ ಮುಖ್ಯವೆಂದದ್ದು ಕಾಮ್ರೇಡ್‌ನ ಕರ್ತವ್ಯವಾಗಿ, ತ್ಯಾಗದ ದ್ಯೋತಕವಾಗಿ ಕಾಣುತ್ತದೆ. ಆದರೆ, ಆಳುವವರ ಪರವಿರುವ ಆ ಕೋರ್ಟು ರಾಜು ಮತ್ತು ಆತನ ಸಂಗಾತಿಗಳಿಗೆ ಮರಣದಂಡನೆ ವಿಧಿಸುವ ಮೂಲಕ ಅವರ ಕ್ರಾಂತಿಯ ಕರೆಯನ್ನು ಕತ್ತರಿಸಿ ಹಾಕಿತು. ಆಗ, ತಬ್ಬಲಿಯಾದ ತಾಯಿಯನ್ನು, ಗಲ್ಲಿಗೇರುವ ಮಗನನ್ನು ನೋಡುವ ಹೃದಯಗಳು ಒಂದು ಸಲ ಸ್ತಬ್ಧವಾಗುತ್ತವೆ. ಆದರೆ ತಾಯಿ, ಮಗ ಮತ್ತು ಸಂಗಾತಿಗಳೆಲ್ಲರ ಜಿಗಿಗೊಂಡ, ಬಲಗೈ ಮುಷ್ಟಿಗಳು ಮೇಲೆದ್ದಾಗ ನೋಡುಗರೆದೆಯಲ್ಲಿ ಸ್ಫೂರ್ತಿ, ಸ್ಫೋಟಗೊಳ್ಳುವಂತೆ ಮಾಡುತ್ತದೆ.

ಇಂಥದ್ದೇ ಇನ್ನೊಂದು ದೃಶ್ಯ ಚಿತ್ರದ ಕೊನೆಯ ಭಾಗದಲ್ಲಿದೆ. ಒಂದರ್ಥದಲ್ಲಿ ಇದು ಚಿತ್ರದ ಕ್ಲೈಮಾಕ್ಸ್. ಗಲ್ಲಿಗೇರುವ ಮುನ್ನ ಕ್ರಾಂತಿಗಾಗಿ ಕರೆನೀಡಿದ ಮಗನ ಮಾತುಗಳನ್ನು ಅಕ್ಷರಗಳಾಗಿ ಹಂಚುವ ತಾಯಿಯ ಕಕ್ಕುಲಾತಿ ಇಲ್ಲಿ ಹೃದಯಂಗಮವಾಗಿ ಮೂಡಿಬಂದಿದೆ. ಬಸಿರೊಳಗಿನ ಮಗ ಆಗಲೇ ಗಲ್ಲಿಗೇರಿದ. ಈಗ ತಾಯಿಗೆ ಉಳಿದಿರುವುದು ಒಡಲೊಳಗಿನ ಉಸಿರು ಮಾತ್ರ. ಪೆಟ್ಟಿಗೆಯಲ್ಲಿ ಮಗನ ಮಾತು ತುಂಬಿಕೊಂಡು ಕೇರಿ ಏರಿ, ಊರು ಸುತ್ತಿ ಹಂಚಬೇಕು ಅನ್ನುವಷ್ಟರಲ್ಲೇ ತಾಯಿಯನ್ನು



ಪ್ರಮೀಳಾ ಜೋಷಾಯ್, ಸುಂದರ್‌ರಾಜ್, ಡಾ|| ಅರಸ್, ಎಚ್.ಎಂ.ಟಿ. ನಂದಾ

ಪೊಲೀಸರು ಹಿಡಿಯುತ್ತಾರೆ. ಅಂತಿಮವಾಗಿ ಪೊಲೀಸರೆದುರು, ನೆರೆದ ಜನರೆದುರು ತನ್ನ ಒಡಲ ಉರಿಯಲ್ಲಿ ಮಗನ ಮಾತನ್ನು ಚೀರಿ ಚೀರಿ ಹೇಳಬೇಕೆಂದು ಕೂಸಿರ್ರಾಡುತ್ತಾಳೆ. ಆದರೆ ಉಸಿರಾಡುವ ಗಂಟಲಿಗೆ ಕೈಹಾಕಿದ ಪೊಲೀಸರು ಅವಳ ಕತ್ತನ್ನೇ ಹಿಚುಕಿಬಿಡುತ್ತಾರೆ. ಥೇಟ್ ಹೋರಾಟದ ಧ್ವನಿಯನ್ನೇ ಸಾಯಿಸಿದಂತೆ ಸಾಯಿಸುತ್ತಾರೆ. ಇಲ್ಲಿಗೆ ಮಕ್ಸಿಂ ಗೋರ್ಕಿಯ ಕತೆ ಮುಗಿಯುತ್ತದೆ. ಆದರೆ ಬರಗೂರರ ಕತೆ ಇಲ್ಲಿಂದ ಮುಂದುವರೆಯುತ್ತದೆ. ಅಂದರೆ ಈ ತಾಯಿ ಸಾಯುವುದಿಲ್ಲ, ಇವಳು ಹೋರಾಟದ ತಾಯಿ. ಸಾಯಿಸುವ ಶಕ್ತಿ ಯಾರಿಗೂ ಇಲ್ಲ. ಅದಕ್ಕೆಂದೇ ಈ ತಾಯಿ ಕೆಂಬಾವುಟ ಹಿಡಿದ ದಲಿತ ಬಾಲಕನ ಮೂಲಕ ಮತ್ತೆ ಬದುಕಿ ಬರುತ್ತಾಳೆ; ಹೋರಾಟ ಮುಂದುವರೆಸುತ್ತಾಳೆ.

ಹೀಗೆ ಬರಗೂರು ರಾಮಚಂದ್ರಪ್ಪನವರ ನಿರ್ದೇಶನದಲ್ಲಿ ಮೂಡಿಬಂದಿರುವ 'ತಾಯಿ' ಸಿನಿಮಾ ಅದ್ಭುತವಾಗಿ ಚಿತ್ರಿತಗೊಂಡಿದೆ. ನೂರುವರ್ಷದ ನಂತರ ರಷ್ಯಾ ಕ್ರಾಂತಿಯನ್ನು ನೆನಪಿಸುತ್ತಲೇ ಸದ್ಯದ ಭಾರತವನ್ನು ಅರ್ಥೈಸುವ ರೀತಿ ಅರ್ಥಪೂರ್ಣವಾಗಿದೆ. ಜನಪರ ಚಳವಳಿಗೆ ತಾಯ್ತನ ತುಂಬುತ್ತಲೇ ಒಳ ಹೊರ ಹೋರಾಟಗಳನ್ನು ರೂಪಿಸುವ ಆಶಯ ಹೊಂದಿದೆ. ಇದಕ್ಕೆ ತಕ್ಕಂತೆ, ಪ್ರಮೀಳಾ ಜೋಷಾಯ್ ತಾಯಿ ಪಾತ್ರಕ್ಕೆ ಜೀವ ತುಂಬಿದ್ದರೆ, ಕುಮಾರ ಗೋವಿಂದ್, ಸುಂದರ್‌ರಾಜ್, ಶ್ರೀನಿವಾಸಮೂರ್ತಿ, ಕರಿಬಸವಯ್ಯ, ನಂದಿನಿ ಮುಂತಾದವರ ಅಭಿನಯ ಪ್ರೇಕ್ಷಕರ ಗಮನ ಸೆಳೆಯುತ್ತದೆ. ಎಂದಿನಂತೆ ಹಂಸಲೇಖರ ಸಂಗೀತ, ಅದವಾನಿ ನಾಗರಾಜ ಅವರ ಛಾಯಾಗ್ರಹಣ ಮನಸೂರೆಗೊಳ್ಳುತ್ತವೆ. ಈ ಎಲ್ಲಾ ಕಾರಣಕ್ಕಾಗಿ 'ತಾಯಿ' ಚಿತ್ರತಂಡಕ್ಕೆ ಲಾಲ್ ಸಲಾಮ್.

ಡಾ|| ರಂಗರಾಜ ವನದುರ್ಗ
ಕನ್ನಡ ರೀಡರ್, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ



**ಭ್ರಮಣ** (ಕಾದಂಬರಿ)
ಎಚ್. ಜಿ. ಸೋಮಶೇಖರರಾವ್
**ಪುಟ : ೧೨+೨೧೧** **ಬೆಲೆ : ರೂ. ೨೦೦**
**ಸುಂದರ ಪ್ರಕಾಶನ,** ಚಿತ್ರಶ್ರೀ - ಕಲಾಮಂದಿರ, ೫ನೇ ತಿರುವು, ಅ.ನ.ಸು. ರಸ್ತೆ, ಹನುಮಂತನಗರ, ಬೆಂ-೧೯

'ಸೋಮಣ್ಣನ ಸ್ಟಾಕ್‌ನಿಂದ' ಎಂಬ ತಮ್ಮ ಆತ್ಮಕಥನದಿಂದ ಗಮನಸೆಳೆದಿದ್ದ ಈ ಲೇಖಕರ ಚೊಚ್ಚಲ ಕಾದಂಬರಿ 'ಭ್ರಮಣ'. ತಮ್ಮ ಜೀವನದುದ್ದಕ್ಕೂ ಅನೇಕ ಬಗೆಯ ವೃತ್ತಿಗಳನ್ನು ನಿರ್ವಹಿಸಬೇಕಾಗಿ ಬಂದದ್ದರಿಂದ ಅವರಿಗೆ ಅನೇಕ ಸ್ತರಗಳಲ್ಲಿನ ಅನುಭವಗಳು ದಕ್ಕಿವೆ. ಜೊತೆಗೆ ಸಾಹಿತ್ಯಕ ಮನಸ್ಸು ಮತ್ತು ತುಡಿತ ಅವರಿಗಿರುವುದರಿಂದ ಅವೆಲ್ಲ ಅನುಭವಗಳನ್ನು ತಮ್ಮ ಗೆಳೆಯರೊಡಗೂಡಿ ಹಂಚಿಕೊಳ್ಳುವಾಗ ಆ ಅನುಭವಗಳೇ ಕೆಲ ಕಲ್ಪನಾಂಶಗಳನ್ನು ಮೈಗೂಡಿಸಿಕೊಂಡು 'ಭ್ರಮಣ' ಕಾದಂಬರಿಯಾಗಿ ಮೈ ತಳೆದಿದೆ. ಓದಿಸಿಕೊಂಡು ಹೋಗುವ ಗುಣವನ್ನು ಹೊಂದಿದ್ದು ಭಾಷಾ ಶೈಲಿ ಸಶಕ್ತವಾಗಿದೆ. ಕಥನಗಾರಿಕೆಗೇ ಹೆಚ್ಚು ಒತ್ತುಕೊಟ್ಟು ಬರೆಯಲಾಗಿದೆ ಎಂದೆನಿಸಿದರೂ ಒಂದು ಅನುಭವಲೋಕ ಕಟ್ಟಿಕೊಡುವುದರಲ್ಲಿ ಸಫಲವಾಗಿದೆ. 'ಇಲ್ಲಿ ಮಾತಿಗಿರುವಷ್ಟೇ ಬೆಲೆ ಮೌನಕ್ಕೂ ಇದೆ' ಎಂದು ಸುಮತೀಂದ್ರ ನಾಡಿಗ ಹೇಳಿದ್ದಾರೆ.



**ವಿಮರ್ಶೆಯ ಸವಾಲು** (ಲೇಖನಗಳು)
ಡಾ|| ಆರ್ಕೆ, ಮಣಿಪಾಲ
**ಪುಟ : xx+೪೧೦** **ಬೆಲೆ : ರೂ. ೨೦೦**
**ಸಂವಾದ ಪ್ರಕಾಶನ,** ಮಣಿಪಾಲ.



ಡಾ|| ಆರ್ಕೆ, ಮಣಿಪಾಲರವರು ಎರಡು ದಶಕಗಳ ಅವಧಿಯಲ್ಲಿ ಸಾಹಿತ್ಯ ಸಂಸ್ಕೃತಿಗಳ ಸಂಬಂಧವಾಗಿ ಬರೆದ ವಿಮರ್ಶೆಗಳು ಇಲ್ಲಿ ಸಂಕಲಿತವಾಗಿವೆ. 'ಜಾತಿ-ಲಿಂಗ-ವರ್ಗ ಅಸಮಾನತೆಯ ಸಮಾಜದಲ್ಲಿ ಅಕ್ಷರ ಕಲಿಕೆ, ಸಾಹಿತ್ಯ ಸೃಷ್ಟಿ ವಿಮರ್ಶೆ ಕೂಡ ಒಂದು ಸವಾಲೆಂಬುದು ನನ್ನ ತಿಳುವಳಿಕೆ' ಎಂದು ಪ್ರತಿಕ್ರಿಯಿಸಿದ್ದಾರೆ. ಸಾಹಿತ್ಯ ಕೃತಿಗಳ ಬಗೆಗೆ ಆರ್ಕೆ ವಿಮರ್ಶೆ ವಿವೇಚನೆಯಿಂದ ಕೂಡಿದೆ ಎಂದೆನಿಸಿದರೂ ಕೆಲ ಸಾಹಿತಿ, ವಿಮರ್ಶಕರ ಬಗೆಗೆ – ಲಂಕೇಶ್, ಡಿ. ಆರ್., ಅನಂತಮೂರ್ತಿಯವರ ಬಗೆಗಿನ ಅಭಿಪ್ರಾಯಗಳು ಮತ್ತೊಮ್ಮೆ ಪರಿಶೀಲನೆಗೆ ಒಳಗಾಗಿ ದಾಖಲಾಗಬೇಕಿತ್ತು ಅನಿಸುತ್ತವೆ. 'ಭವ' ಕಾದಂಬರಿಯ ಬಗ್ಗೆ ಡಿ. ಆರ್. ಬರೆದಿರುವುದನ್ನು ಆರ್ಕೆ ಅಲ್ಲಗಳೆಯುತ್ತಾರೆಯೆ ಹೊರತು ಅದಕ್ಕೆ ತಕ್ಕುದಾದ, ಅಧ್ಯಯನ ಯೋಗ್ಯವಾದ ಕಾರಣಗಳನ್ನು ಕೊಡುವುದಿಲ್ಲ. ಲಂಕೇಶ್ ಪ್ರತಿಕ್ರಿಯೆಗಳನ್ನು ಇವರಿನ್ನೂ ಸರಿಯಾಗಿ ಅರ್ಥೈಸಿಕೊಳ್ಳಬೇಕಿದೆ ಎನ್ನುವುದು ಇಲ್ಲಿನ ಕೆಲ ವಿಮರ್ಶೆಗಳಿಂದ ಸ್ಪಷ್ಟವಾಗುತ್ತದೆ.

**ನುಡಿಬಿಂಬ**
ಡಾ|| ಜಿ. ರಾಮಕೃಷ್ಣ
**ಪುಟ : viii+೧೪೦** **ಬೆಲೆ : ರೂ. ೧೨೦**
**ಸಿ.ವಿ.ಜಿ. ಪ್ರಕಾಶನ,** ನ. ೭೦, ೨ನೇ ಮುಖ್ಯರಸ್ತೆ, ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೫೬೦ ೦೦೩



ಡಾ|| ಜಿ. ರಾಮಕೃಷ್ಣರವರು ಹಲವು ಭಿನ್ನ ಸಂದರ್ಭಗಳಲ್ಲಿ ಬರೆದ ಲೇಖನಗಳ ಸಂಕಲನ. ಸಮಾಜಮುಖಿ ಚಿಂತನೆಯಲ್ಲಿ ವೈಚಾರಿಕತೆ ಬೆರೆಸಿ ಓದುಗರನ್ನು ಆಳವಾದ ಚಿಂತನೆಗೆ ಹಚ್ಚುವ ಶಕ್ತಿ ಇಲ್ಲಿನ ಲೇಖನಗಳಿಗಿವೆ. ಜಿ.ಆರ್. ಮಾರ್ಕ್ಸ್‌ವಾದವನ್ನು ತರ್ಕಬದ್ಧವಾಗಿ ಅಧ್ಯಯನ ಮಾಡಿರುವುದರಿಂದ ಅವರ ಚಿಂತನೆಯಲ್ಲಿ ಮಾರ್ಕ್ಸ್‌ವಾದಿ ದೃಷ್ಟಿಕೋನ ಹಾಸುಹೊಕ್ಕಾಗಿ ಬೆರೆತಿದೆ. ವೈಜ್ಞಾನಿಕತೆಯನ್ನು ತ್ಯಜಿಸುವ ವೈಚಾರಿಕತೆಯನ್ನು ಅವರು ಒಪ್ಪುವುದಿಲ್ಲ. 'ಪರ್ಯಾಯ ಶೋಧ ಮತ್ತು ಗುಣಾತ್ಮಕ ಬದಲಾವಣೆಯ ಕಡೆಗಿನ ತುಡಿತ ಇಲ್ಲಿ ಬರವಣಿಗೆಯ ಅಂತಃಸತ್ವವಾಗಿದೆ' ಎಂದು ಬೆನ್ನುಡಿಯಲ್ಲಿ ರಾಮಲಿಂಗಪ್ಪ ಟಿ. ಬೇಗೂರು ಹೇಳಿರುವುದು ಸಮಂಜಸವಾಗಿದೆ. ಆಯಾ ಸಂದರ್ಭಗಳಿಗೆ ತಕ್ಕುದಾಗಿ ಪ್ರತಿಸ್ಪಂದಿಸುತ್ತ ಹೊಸ ವಿಚಾರಧಾರೆಗೆ ನಾಂದಿ ಹಾಡಿರುವುದು 'ಹೊಸ ಶಿಕ್ಷಣ ನೀತಿ – ಒಂದು ಮರುಪರಿಶೀಲನೆ', 'ಯುವಜನರು ಮತ್ತು ಸಾಮಾಜಿಕ ಬದಲಾವಣೆ' – ಮುಂತಾದ ಲೇಖನಗಳಲ್ಲಿ ಕಂಡುಬರುತ್ತದೆ.



**ಅರೆಖಾಸಗಿ** (ಸ್ಮೃತಿಚಿತ್ರಣಗಳ ಅಂಕಣ ಬರಹ)
ವಿಷ್ಣು ನಾಯ್ಕ
**ಪುಟ : ೧೯೦** **ಬೆಲೆ : ರೂ. ೧೦೦**
**ಶ್ರೀ ರಾಘವೇಂದ್ರ ಪ್ರಕಾಶನ,** ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪

ಅಂಕಣ ಬರಹಗಳು ಈಚೆಗೆ ಹೆಚ್ಚೆಚ್ಚು ಸೃಷ್ಟಿಯಾಗುತ್ತಿವೆ. ಸಮಾಜಮುಖಿಯಾಗಿ ಕೆಲವರು ಬರೆದರೆ ಇನ್ನು ಕೆಲವರು ತಮ್ಮ ಖಾಸಗಿ ಸಂಗತಿಗಳನ್ನೇ ಬರೆದು ಜನಪ್ರಿಯ ಅಂಕಣಕಾರರಾಗಿದ್ದಾರೆ. ಲಂಕೇಶರ ಟೀಕೆಟಿಪ್ಪಣಿ, ರವಿ ಬೆಳಗೆರೆಯವರ 'ಖಾಸ್‌ಬಾತ್' ಹೀಗೆ... 'ಅರೆಖಾಸಗಿ' – ವಿಷ್ಣು ನಾಯ್ಕರವರ ಅಂಕಣ ಬರಹಗಳ ಸಂಕಲನ. 'ಸಕಾಲಿಕ' ಎಂಬ ಪತ್ರಿಕೆಯಲ್ಲಿ ನಿಯತವಾಗಿ ಬರೆದ ಬರಹಗಳೇ ಇಲ್ಲಿ ಒಟ್ಟುಗೂಡಿವೆ. ಎಚ್.ಎಸ್.ವಿ. ಹೇಳಿರುವ ಮಾತು ಗಮನಾರ್ಹ: ಅಂಕಣ ಬರಹಗಳನ್ನು ಸಾಹಿತ್ಯ ಕಕ್ಷೆಗೆ ತರುವಲ್ಲಿ ಸಂಕೋಚಪಡಬೇಕಾದ ಕಾಲವೊಂದಿತ್ತು. ಈಗ ಅಂಥ ಸಂಕೋಚಕ್ಕೆ ಆಸ್ಪದವಿಲ್ಲ ಎಂಬುದನ್ನು ವಿಷ್ಣು ನಾಯ್ಕರ ಅಂಕಣ ಬರಹಗಳ ಹಿನ್ನೆಲೆಯಲ್ಲಿ ಹೇಳಿದ್ದಾರೆ. ಪ್ರತಿಯೊಂದು ಸಂಗತಿಯನ್ನು ತನ್ಮಯತೆಯಿಂದ ಕಣ್ಣಿಗೆ ಕಟ್ಟುವಂತೆ ಬರೆದು ಮತ್ತು ತಮ್ಮ ಪರಿಸರವನ್ನು ಸಮರ್ಥವಾಗಿ ಬಳಸಿಕೊಂಡು ಯಶಸ್ವಿಯಾಗಿದ್ದಾರೆ. ಪುಟಗಟ್ಟಲೆ ಬರೆಯಲಿಕ್ಕೆ ಹೋಗದೆ ಕ್ಲುಪ್ತವಾಗಿ ಬರೆದಿರುವುದು ನಮ್ಮ ಗಮನ ಸೆಳೆಯುತ್ತದೆ.



**ಕುಮಟೆಗೆ ಬಂದಾ ಕಿಂದರಿಜೋಗಿ**
(ಕಥಾ ಸಂಕಲನ) ಯಶವಂತ ಚಿತ್ತಾಲ
**ಪುಟ : viii+೧೬೪** **ಬೆಲೆ : ರೂ. ೬೦**
**ಶ್ರೀ ರಾಘವೇಂದ್ರ ಪ್ರಕಾಶನ,** ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪

ಯಶವಂತ ಚಿತ್ತಾಲರ ಏಳು ಕಥೆಗಳು ಇಲ್ಲಿ ಸಂಕಲಿತವಾಗಿವೆ. ಇಲ್ಲಿನ ಒಂದೊಂದು ಕಥೆಯೂ ಚಿತ್ತಾಲರ ಪರಿಪಕ್ವ ಜೀವನ ದೃಷ್ಟಿಯಿಂದ ಗಮನ ಸೆಳೆಯುತ್ತವೆ. ನಗರಗಳಲ್ಲಿ ವಾಸಿಸುವವರ ಬದುಕು ನಿಧಾನಕ್ಕೆ ಪಲ್ಲಟಗೊಳ್ಳುವ ಪರಿಯನ್ನು ತುಂಬು ತನ್ಮಯತೆಯಿಂದ ಅದರೆಲ್ಲ ಸಂಬಂಧಗಳ ಸಮೇತ ಹಿಡಿದಿಡಲು ಚಿತ್ತಾಲರಿಗೆ ಸಾಧ್ಯವಾಗಿದೆ. 'ಆಟ', 'ಕತೆಯಾದಳು ಹುಡುಗಿ' – ಮುಂತಾದ ಸಂಕಲನಗಳಿಂದ ಗಮನ ಸೆಳೆದ ಚಿತ್ತಾಲರು ಅಲ್ಲಿನ ಪರಿಸರವನ್ನೇ ಮೂಲಭಿತ್ತಿಯಾಗಿಟ್ಟುಕೊಂಡು ಬದುಕಿನ ಬೇರೆ ಬೇರೆ ಪ್ರಭೇದಗಳನ್ನು ಶೋಧಿಸುತ್ತಿರುವುದಕ್ಕೆ ಈ ಸಂಕಲನ ಸಾಕ್ಷಿಯಾಗಿದೆ. ಇಲ್ಲಿನ ಕಥೆಗಳನ್ನು ಓದಿದಾಗ ಅವು ಗಾಢ ಅನುಭವ ಮೂಡಿಸುತ್ತವಾದರೂ ಕೆಲವು ಭಾಗಗಳಲ್ಲಿ ವಾಕ್ಯರಚನೆ ಹೆಚ್ಚು ಲಂಬಿಸಿದಂತೆ ಕಂಡುಬರುತ್ತದೆ. ಹಾಗಾಗಿ ಕಣ್ಣಿಗೆ ಕಟ್ಟಬೇಕಾದ ಚಿತ್ರಗಳು ಗೊಂದಲದಲ್ಲಿ ಕಲಸಿ ಹೋಗುವ ಅಪಾಯ ಎದುರಿಸುತ್ತವೆ. ಈ ಲೋಪವನ್ನು ಬಿಟ್ಟುಕೊಟ್ಟು ಓದುವುದಾದರೆ ಸಮಗ್ರ ಅನ್ಯವಾದ ಪರಿಸರವೊಂದನ್ನು ಆಪ್ತಮಾಡಿಕೊಂಡಂತೆ ಅನಿಸುವುದು ಖಂಡಿತ.

**ಮುಳ್ಳಿನ ಬಾಯಿಯಲ್ಲಿ ಹೂ ನಾಲಿಗೆ**
(ನೂರಾರು ಗಜಲುಗಳ ಸಂಕಲನ) ಜಂಬಣ್ಣ ಅಮರಚಿಂತ
**ಪುಟ : ೮೦** **ಬೆಲೆ : ರೂ. ೩೩**
**ಸುಮುಖ ಪ್ರಕಾಶನ,** ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ ಟೋಲ್‌ಗೇಟ್, ಬೆಂಗಳೂರು - ೨೩

ಜಂಬಣ್ಣ ಅಮರಚಿಂತರ ಗಜಲುಗಳ ಸಂಕಲನ ಇದು. ಗಜಲುಗಳು ಎಂದಕೂಡಲೇ ಪ್ರೇಮದ ಉನ್ಮಾದತೆ, ಮದಿರೆ, ಹೆಣ್ಣು ಇತ್ಯಾದಿ ನೆನಪಾಗುತ್ತವೆ. ಶಾಂತರಸ ಮತ್ತು ಮುಕ್ತಾಯಕ್ಕ ಸಮರ್ಥವಾಗಿ ಗಜಲುಗಳನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟು ಒಂದು ಬುನಾದಿ ಹಾಕಿಕೊಟ್ಟರು. ಜಂಬಣ್ಣನವರು ಇಲ್ಲಿ ಪ್ರೇಮ ಮತ್ತು ಕಾಮಕ್ಕೆ ತಮ್ಮ ಗಜಲುಗಳಲ್ಲಿ ಅವಕಾಶ ಕಲ್ಪಿಸಿಕೊಡದೆ ಬಂಡಾಯದ ಧ್ವನಿಯನ್ನು ಸೇರಿಸಿರುವುದು ಈ ಸಂಕಲನದ ಹೆಗ್ಗಳಿಕೆ. 'ನೀವು ಮಹಾತ್ಮರಲ್ಲ, ನಾವು ಹುತಾತ್ಮರಲ್ಲ/ನಾವು ಮನುಷ್ಯರು, ಮನುಷ್ಯರಂತೆ ಮಾತಾಡೋಣ.' ಇಂಥ ಆಶಯಗಳೇ ಬೇರೆ ಬೇರೆ ರೂಪವಾಗಿ ಮೈತಾಳಿವೆ. ಗೇಯತೆಯನ್ನು ಉಳಿಸಿಕೊಂಡಿರುವುದೊಂದು ವಿಶೇಷ. ಕೆಲವು ಗಜಲುಗಳು ಡಾ|| ಸಿದ್ದಲಿಂಗಯ್ಯನವರ ಕವನಗಳನ್ನು ನೆನಪಿಗೆ ತರುತ್ತವೆ.

– ಎನ್. ಸಿ. ಮಹೇಶ್, ಸೇಂಟ್ ಆ್ಯನ್ಸ್ ವುಮೆನ್ಸ್ ಪ್ರಥಮ ದರ್ಜೆ ಕಾಲೇಜು,
ನಂ. ೨, ಕೇಂಬ್ರಿಡ್ಜ್ ರಸ್ತೆ, ಹಲಸೂರು, ಬೆಂಗಳೂರು - ೫೬೦ ೦೦೮

# ನಾವು ಸಹಜ ಕೃಷಿಕರಾದೆವು

ಪ್ರವೀಣ್ ಖನ್ನಾ

ನಮ್ಮ ಜಮೀನು ಬೆಂಗಳೂರಿನಿಂದ ಸುಮಾರು ೬೦ ಕಿ.ಮೀ. ದೂರದಲ್ಲಿರುವ ನಂದೀ ಬೆಟ್ಟಸಾಲಿನ ಕೆಳ ಇಳಿಜಾರಿನಲ್ಲಿದೆ. ಇದರ ವಿಸ್ತೀರ್ಣ ೧೦ ಎಕರೆ. ನಾವಿದನ್ನು ಖರೀದಿಸಿದಾಗ ಕೇವಲ ೨ ಎಕರೆ ಸೋಪಾನಪ್ರದೇಶದಲ್ಲಿ ರಾಗಿಬೇಸಾಯ ಮಾಡುತ್ತಿದ್ದರು. ಉಳಿದೆಲ್ಲ ನೆಲವೂ ಬೋಳು ಶಿಲಾಮಯ ಬಂಜರು. ೨೦೦೨ರ ತನಕ ಸುಮಾರು ನಾಲ್ಕು ವರ್ಷ ಕಾಲ ಈ ವಲಯ ಅನಾವೃಷ್ಟಿಪೀಡಿತವೂ ಆಗಿತ್ತು.

ಇಲ್ಲಿಯ ಹೆಚ್ಚಿನ ರೈತರು ಮಳೆಯಾಶ್ರಯವನ್ನೇ ನೆಚ್ಚಿ ರಾಗಿ, ಜೋಳ, ನೆಲಗಡಲೆ ಮುಂತಾದವನ್ನು ಬೆಳೆಸುವವರು. ವರ್ಷಕ್ಕೊಂದು ಕೊಯ್ಲು. ಕೆಲವೇ ಮಂದಿ ಕೊರೆಬಾವಿಗಳಿರುವ ತಮ್ಮ ಹಿಡುವಳಿಗಳಲ್ಲಿ ತರಾವರಿ ತರಕಾರಿಗಳ ಬೇಸಾಯ ಕೂಡ ಮಾಡುವುದುಂಟು. ನೀರಿನ ಸಲುವಾಗಿ ನಮ್ಮ ಜಮೀನಿನ ಜೊತೆಗೆ ಕೊರೆಬಾವಿಯಿದ್ದ ಒಂದು ಪುಟ್ಟ ನಿವೇಶನ ಕೊಂಡು ೨ ಎಕರೆ ಸೋಪಾನಪ್ರದೇಶದಲ್ಲಿ ಬಾಳೆ, ಪಪ್ಪಾಯಿ, ತೆಂಗು ಮತ್ತು ಸಿಲ್ವರ್ ಓಕ್ ಸಸಿಗಳನ್ನು ನೆಟ್ಟೆವು (ಫೆಬ್ರುವರಿ ೨೦೦೪). ನಮಗೆ ಕೃಷಿಯ ಅನುಭವವಿಲ್ಲದ್ದರಿಂದ ಶುಲ್ಕ ತೆತ್ತು ಒಬ್ಬ ತಜ್ಞನ ನೆರವನ್ನೂ ಪಡೆದೆವು.

ಆತನ ಸಲಹೆ ಮೇರೆಗೆ ಹನಿಬೇಸಾಯದ ಮೇಲೆ ಸಾಕಷ್ಟು ಬಂಡವಾಳ ಹೂಡಿದೆವು. ಆದರೆ ಮುಂದೆ ಆತ ಯಾವ ಮಾರ್ಗದರ್ಶನವನ್ನೂ ನೀಡದೆ ನಡುನೀರಿನಲ್ಲೇ ಕೈಕೊಟ್ಟ. ಇತ್ತ ಮರಗಳು ದೊಡ್ಡವಾದಂತೆ ಹನಿಬೇಸಾಯ ಸಾಕಾಗದೆಂಬ ಅರಿವು ಮೂಡಿತು. ಎಂದೇ ಇದನ್ನು ಬಿಟ್ಟು ಹಾಯಿಬೇಸಾಯ ತೊಡಗಿದೆವು.

ಆರಂಭದಿಂದಲೂ ನಾವು ಸಾವಯವ ಕೃಷಿಯೊಂದನ್ನೇ ಅವಲಂಬಿಸುವ ಶಿಸ್ತು ಪಾಲಿಸುತ್ತಿದ್ದೆವು. ಹೀಗಾಗಿ ಸಸ್ಯಪೋಷಕಗಳ ಮೇಲೆ ತಕ್ಕಷ್ಟು ಖರ್ಚುಮಾಡುವುದು ಅನಿವಾರ್ಯವಾಯಿತು. ಭೂರಿಪ್ರಮಾಣದಲ್ಲಿ ಗೊಬ್ಬರ ಕೊಂಡು ಬಳಸಿದೆವು. ಆದರೆ ಈ ಪ್ರದೇಶದಲ್ಲಿ ದೊರೆಯುವ ಗೊಬ್ಬರದ ಗುಣಮಟ್ಟ ತೀರ ಕಳಪೆ. ಇತ್ತ ಕಳೆದ ಹಂಗಾಮಿನಲ್ಲಿ ಮಿತ ಪ್ರಮಾಣದ ಮಳೆಯೂ ಸುರಿಯಿತು. ಇನ್ನಷ್ಟು ಶ್ರಮವಹಿಸಿದೆವು. ಹಣವನ್ನೂ ವೆಚ್ಚಿಸಿದೆವು. ಆದರೂ ವರ್ಷಾಂತ್ಯದಲ್ಲಿ ದೊರೆತ ಬಾಳೆಫಸಲು ಮಾತ್ರ ತೀರ ನಿರಾಶಾದಾಯಕವಾಗಿತ್ತು. ಸಾವಯವ ಕೃಷಿಕರಾಗಿಯೇ ಉಳಿದಿರಬೇಕೆಂಬ ನಮ್ಮ ದೃಢ ಸಂಕಲ್ಪದ (ದುಷ್-) ಫಲವಿದು, ಅಧಿಕ ಪೋಷಕಗಳ ಹೂಡಿಕೆಯೊಂದೇ ಹಾದಿಯೆಂದು ಮುಂತಾಗಿ ಸಲಹೆಗಳು ಬಂದುವು. ಈ ಹೊಸ ಹೊರೆಯನ್ನು ಹೊರುವ ಅದೇ ಮೊದಲು ನಮಗೆ ತೀರ ಆಕಸ್ಮಿಕವಾಗಿ ಡಾಕ್ಟರ್ ಖಾದರ್ ಅವರ ಪರಿಚಯವಾಯಿತು. ಮುಂದಿನ ಕತೆ ಬೇರೆಯೇ!

ಮೈಸೂರುನಿವಾಸಿ ಖಾದರ್ ಸನಿಹದ ಮತ್ತು ದೂರದ ರೈತಮಂದಿಗೆ ಸಲ್ಲಿಸುತ್ತಿದ್ದ ನಿಸ್ವಾರ್ಥ ಸೇವೆ ಮತ್ತು ತತ್ಫಲವಾದ ಉತ್ಕೃಷ್ಟ ಫಲಿತಾಂಶಗಳ ಬಗ್ಗೆ ಕೇಳಿದ್ದೆವು. ಅವರು ಸಹಜಕೃಷಿ ಕುರಿತ ತಮ್ಮ ಪರಿಕಲ್ಪನೆಯನ್ನು ವಿವರಿಸಿದರು. ಅದು ಬಲು ಸರಳ ಮತ್ತು ತಾರ್ಕಿಕವಾಗಿದ್ದು ನಮ್ಮ ಹೃದಯವನ್ನೇ ತಟ್ಟಿತು. ಅವರು ರಚಿಸಿರುವ ''ತುಂಡು ಭೂಮಿಯ ಬಿಡುಗಡೆ, ವಿಶ್ವದ ಬಿಡುಗಡೆ'' ಎಂಬ ಕಿರುಹೊತ್ತಗೆಯಲ್ಲಿ ಅದನ್ನು ವಿವರಿಸಿದ್ದಾರೆ :

''ರೈತರ ಮಟ್ಟಿಗೆ ಹೇಳುವುದಾದರೆ ಕೆಲವು ಸರಳ ಸೂತ್ರಗಳನ್ನು ವ್ಯವಸಾಯದಲ್ಲಿ ಅಳವಡಿಸಿಕೊಂಡು, ಭೂಮಿಯನ್ನು ಬದುಕಿಸಿಕೊಳ್ಳಬಹುದು, ನಾವೂ ಬದುಕಬಹುದು. ತುಂಡು ಭೂಮಿಯನ್ನು ಒಳಗಿನಿಂದಲ್ಲದೇ ಹೊರಗಿನಿಂದಲೂ ಬಿಡಿಸಿಕೊಳ್ಳಬಹುದು. ಯಾವುದೇ ಹಣಕಾಸಿನ ಅಗತ್ಯವಿಲ್ಲದ, ಬದಲು ಕೇವಲ ರೈತನ 'ಶ್ರಮವೆಚ್ಚ' ವಿರುವ ಈ ಸೂತ್ರಗಳು :

''೧. ಆಯಾ ಪ್ರದೇಶಗಳಲ್ಲಿಯ ಮಣ್ಣಿನ ರಚನೆ ಹಾಗೂ ನೀರಿನ ಲಭ್ಯತೆಗನುಗುಣವಾದ ಬೆಳೆಗಳನ್ನು ಮಾತ್ರ ಬೆಳೆಸುವುದು ಮುಖ್ಯ.

''೨. ದವಸ, ಧಾನ್ಯ, ಕಾಳು, ಕಡ್ಡಿ, ಹಣ್ಣು, ಹಂಪಲು, ಸೊಪ್ಪು, ತರಕಾರಿ, ಗೆಡ್ಡೆಗೆಣಸು ಮುಂತಾದವನ್ನು ತಮ್ಮ ಹೊಲದಲ್ಲೇ ಬೆಳೆಸಿ ತಿನ್ನುವುದು ಸರಿಯಾದ ಕ್ರಮ. ಹೀಗಲ್ಲದೇ ಮಾಂಸ, ಅಕ್ಕಿ, ಗೋಧಿ, ಸೋಯಾ, ಸಕ್ಕರೆಗಳನ್ನು ಬಳಸುವುದು ಶ್ರೀಮಂತಿಕೆ, ರಾಗಿ, ಜೋಳ, ನವಣೆ, ಅಲಸಂದೆ, ಬೆಲ್ಲಗಳನ್ನು ಬಳಸುವುದು ಬಡತನ ಎಂಬ ಭಾವನೆ ಬಹುಮಂದಿಯಲ್ಲಿ ಬೇರೂರಿದೆ. ಈ ಭಾವನೆ ತುಂಡು ಭೂಮಿಯ ರೈತರಿಗೆ ಶಾಪ. ಸಹಜವೂ ವೈವಿಧ್ಯಮಯವೂ ಆದ ಸಸ್ಯಾಹಾರ ಪದ್ಧತಿ ಮನುಷ್ಯನಿಗೆ ಮತ್ತು ಸುತ್ತಮುತ್ತಲಿನ ಪ್ರಕೃತಿಗೆ ಆರೋಗ್ಯಕರ.

''೩. ಭೂಮಿಯನ್ನು ಉಳುಮೆ ಮಾಡದಿರುವುದರಿಂದ ಸೂಕ್ಷ್ಮಾಣುಜೀವಿಗಳು ಅತಿನೇರಿಳೆ ವಿಕಿರಣದಿಂದಾಗಿ ನಾಶವಾಗುವುದನ್ನು, ಆದ್ದರಿಂದ ಭೂಮಿಯ ಫಲವತ್ತತೆ ಕಡಿಮೆಯಾಗುವುದನ್ನು, ತಪ್ಪಿಸಬಹುದು.

''೪. ಹೊಲಗಳಲ್ಲಿ ಇಳಿಜಾರಿಗೆ ಅನುಗುಣವಾಗಿ ಗುಳಿ, ಬದು, ಕಾಲುವೆ, ಕೆರೆಗಳನ್ನು ತೋಡಿ ಹೆಚ್ಚಿನ ಮೊತ್ತದಲ್ಲಿ ಮಳೆನೀರನ್ನು ಶೇಖರಿಸುವುದು ಈ ವಿಕೇಂದ್ರೀಕರಣ ವ್ಯವಸಾಯ ಪದ್ಧತಿಯ ಬೆನ್ನೆಲುಬು. ಇದು ಮೇಲ್ಮೈ ಮಣ್ಣನ್ನು ಅಲ್ಲೇ ಉಳಿಸಿಡಲು ಸಹಾಯಕವಾಗುವುದು.

''೫. ಜೊತೆಗೆ ರಾಸಾಯನಿಕ ಗೊಬ್ಬರ, ಕೀಟ-ಕಳೆ-ಶಿಲೀಂಧ್ರನಾಶಕಗಳು ಮುಂತಾದ ಕೃತಕ ಪದಾರ್ಥಗಳನ್ನು ಬಳಸದಿರುವುದರಿಂದ ವಿಷರಹಿತ ಫಸಲು ದೊರೆಯುವುದಲ್ಲದೆ ಸೂಕ್ಷ್ಮಜೀವಿಗಳು ನಾಶಗೊಳ್ಳದೆ ವರ್ಷದಿಂದ ವರ್ಷಕ್ಕೆ ಮಣ್ಣಿನ ಫಲವತ್ತತೆ ವೃದ್ಧಿಸುತ್ತದೆ.

''೬. ಭೂಮಿಯನ್ನು ಸೊಪ್ಪು ಕಡ್ಡಿಗಳಿಂದ ಮುಚ್ಚಿಗೆ ಮಾಡುವುದು ಇನ್ನೊಂದು ಮುಖ್ಯಾಂಶ. ಮುಚ್ಚಿಗೆ ಮಾಡಿದ ಪದಾರ್ಥಗಳು ಕ್ರಮೇಣ ಸಾವಯವ ಗೊಬ್ಬರವಾಗಿ ಮಾರ್ಪಡುತ್ತವೆ. ತೀರ ಕಡಿಮೆ ಮಳೆ ಬೀಳುವ ಪ್ರದೇಶಗಳಲ್ಲಿಯೂ ಮುಚ್ಚಿಗೆಮಾಡಿ ನೀರಿನ ಒರತೆಯನ್ನು ಕಾಪಾಡಿಕೊಳ್ಳಬಹುದು. ಒರತೆ ಉಳಿದಷ್ಟೂ ಭೂಮಿ ಹೆಚ್ಚು ಹೆಚ್ಚು ಜೀವಂತವಾಗುತ್ತದೆ.''

ಖಾದರ್ ತೆರಳಿದ ಮರುದಿನವೇ ನಾವು ಬಾಳೆ, ಪಪ್ಪಾಯಿ, ತೆಂಗು ಮತ್ತು ಸಿಲ್ವರ್ ಓಕ್ ಇದ್ದ ೨ ಎಕರೆ ಹೊಲದಲ್ಲಿ ಮುಚ್ಚಿಗೆ ಕೆಲಸ ತೊಡಗಿದೆವು. ಆ ತನಕ ಗಿಡಗಳನ್ನು ತೀರ ಒತ್ತೊತ್ತಿಗೆ ನೆಟ್ಟಿದ್ದೆವು. ಇದು ಸರಿಯಲ್ಲವೆಂದು ಅವರು ವಿವರಿಸಿದ್ದರು. ಹೀಗಾಗಿ ನಮ್ಮ ಆಸ್ತಿಯಲ್ಲಿಯ ಅರ್ಧದಷ್ಟು ಬಾಳೆಮರಗಳನ್ನು ಕಡಿದುಹಾಕಿ ಉಳಿದವುಗಳಿಗೆ



ಸೊಂಪಾಗಿ ಬೆಳೆಯಲು ಜಾಗ ಒದಗಿಸಿದೆವು.

ಅವರ ಸೂಚನೆ ಪ್ರಕಾರ ಚಾಮರಾಜನಗರದ ಬಳಿ ಇರುವ ಆಲೂರಿಗೆ ಹೋಗಿ ಶ್ರೀ ಮೂರ್ತಿಯವರ ಜಮೀನು ನೋಡಿ ಬಂದೆವು. ಸುಮಾರು ಮೂರು ವರ್ಷಗಳ ಹಿಂದೆ ಇವರ ಎಲ್ಲ ತೆಂಗಿನ ಮರಗಳೂ ತೀವ್ರ ಸೋಂಕುಗ್ರಸ್ತವಾಗಿ ಅವುಗಳಲ್ಲಿ ಕಾಯಿ ಹಿಡಿಯುವುದು ಕೈದಾಗಿತ್ತು. ಇವೆಲ್ಲ ಮರಗಳೂ ಅವರಿಗೆ ವಾರ್ಷಿಕವಾಗಿ ೧೨೦ರಿಂದ ೧೫೦ ಕಾಯಿಗಳಷ್ಟು ಇಳುವರಿ ನೀಡುತ್ತಿದ್ದುವು. ಈ ಮರಗಳನ್ನು ಇನ್ನು ಉಳಿಸುವುದು ಅಸಾಧ್ಯವೆಂಬ ಅಭಿಪ್ರಾಯ ತಜ್ಞರದಾಗಿತ್ತು. ಖಾದರ್ ಅವರ ಸಲಹೆಯನ್ನು ಇವರು ಅನುಸರಿಸುತ್ತ ಮೂರು ವರ್ಷ ಸಂದಾಗ ಅವೇ ಮರಗಳು ಮತ್ತೆ ಕಾಯಿ ಕೊಡಲು ತೊಡಗಿದುವು! ೨೦೦೪ರಲ್ಲಿ ದೊರೆತ ಸರಾಸರಿ ಇಳುವರಿ ಮರವೊಂದರ ಸುಮಾರು ೩೦ ತೆಂಗಿನಕಾಯಿಗಳು. ಪ್ರಸಕ್ತ ಸಾಲಿನಲ್ಲಿ (೨೦೦೫) ಈ ಸರಾಸರಿ ಮರವೊಂದಕ್ಕೆ ಎಷ್ಟೋ ಅಧಿಕವಾಗುವ ನಿರೀಕ್ಷೆ ಉಂಟು.




ನಾವು ಮುಚ್ಚಿಗೆ ತೊಡಗಿದ ಕೆಲವೇ ವಾರಗಳಲ್ಲಿ ಖಾತ್ರಿ ಫಲಿತಾಂಶ ದೊರೆಯಲಿದೆ ಎಂಬುದರ ಬಗ್ಗೆ ಹಲವಾರು ಸಾಕ್ಷ್ಯಗಳು ಕಂಡುಬಂದುವು :

ಬಾಳೆಕಾಂಡಗಳು ದೃಢಗೊಂಡು ಗಟ್ಟಿಯಾಗಿ ನೆಲಕ್ಕೆ ತಳವೂರಿ ನಿಂತುವು. ಇವುಗಳಿಂದ ನಮಗೆ ದೊರೆತ ಹಣ್ಣುಗಳ ತೂಕ ಹೆಚ್ಚು, ಅಲ್ಲದೇ ಇವು ನಿರೋಗವಾಗಿಯೂ ಇದ್ದುವು. ತೆಂಗಿನ ಮರಗಳು ಇನ್ನಷ್ಟು ಆರೋಗ್ಯಕರವಾಗಿ ನಳನಳಿಸಲಾರಂಭಿಸಿದುವು. ಪಪ್ಪಾಯಿ ಕಾಂಡಗಳು ಸಾಕಷ್ಟು ತೋರವಾಗಿಯೂ ದೃಢವಾಗಿಯೂ ಎದ್ದುಕಾಣುತ್ತಿವೆ. ಇವುಗಳಲ್ಲಿ ಹಿಡಿದಿರುವ ಹಣ್ಣುಗಳು ಹೆಚ್ಚು ಹಸುರು ಬಣ್ಣ ತಳೆದಿವೆ. ನಮ್ಮ ಕೈತೋಟಕ್ಕೆ ಪೂರ್ತಿ ಮುಚ್ಚಿಗೆ ಹಾಕಿದ್ದೇವೆ. ಇಲ್ಲೀಗ ಹೆಚ್ಚು ಆರೋಗ್ಯಕರ ಸಸಿಗಳನ್ನು ನೋಡುತ್ತಿದ್ದೇವೆ. ಈಚೆಗೆ ಪಚ್ಚೌಲಿಯನ್ನು ನೆಡಲು ತೊಡಗಿದ್ದೇವೆ. ಇದರ ತುಂಡುಗಳನ್ನು ನಮಗೆ ಪೂರೈಸುತ್ತಿರುವಾತನ ಪ್ರಕಾರ ಇವು, ಆತ ಪೂರೈಕೆಮಾಡಿದ ಇತರೆಡೆಗಳಿಗಿಂತ, ಇಲ್ಲಿ ಚೆನ್ನಾಗಿ ಬೆಳೆಯುತ್ತಿವೆ.

ಎಂದೇ ಸಹಜಬೇಸಾಯ ಬಲು ಚೆನ್ನಾಗಿ ಫಸಲು ನೀಡುವುದೆಂಬುದರ ಬಗೆಗಿನ ನಮ್ಮ ನಂಬಿಕೆ ಭದ್ರವಾಗಿದೆ. ಈಗ ಇದನ್ನು ನಮ್ಮ ಹಿಡುವಳಿಯಲ್ಲಿ ಸುಮಾರು ೭ ಎಕರೆಗಳಷ್ಟು ಶಿಲಾಮಯ ಬಂಜರು ನೆಲಕ್ಕೆ ವಿಸ್ತರಿಸುತ್ತಿದ್ದೇವೆ :

ಜಮೀನಿನ ಅಧಿಕ ಭಾಗದಿಂದ ಬಂಡೆಕಲ್ಲುಗಳನ್ನು ತೆಗೆದುಹಾಕಿದ್ದೇವೆ. ಆಯಕಟ್ಟಿನ ನೆಲೆಗಳಲ್ಲಿ ನೀರು ಸಂಗ್ರಹಿಸಿಡುವುದರ ಸಲುವಾಗಿ ದೊಡ್ಡ ಒಂದು ಕೆರೆಯನ್ನೂ ಚಿಕ್ಕದಿನ್ನೊಂದನ್ನೂ ತೋಡಿದ್ದೇವೆ. ಇಳಿಜಾರು ಭಾಗದಲ್ಲಿ ಕೆಳಹರಿದು ಹೋಗುವ ಮಳೆನೀರನ್ನು ಕಲೆಹಾಕಲು ೩ ಅಡಿ ಅಗಲದ ಒಟ್ಟು ೭ ಕಂದಕಗಳನ್ನು ಕಡಿದಿದ್ದೇವೆ. ಪ್ರಸಕ್ತ ಹಂಗಾಮಿನಲ್ಲಿ (೨೦೦೫) ಸಮೃದ್ಧ ಮಳೆ ಸುರಿದಿದೆ. ಮೊದಲ ಬಾರಿಗೆ ಈ ಹಳ್ಳಿಯಲ್ಲೀಗ ಪರಿಣಾಮಕಾರೀ ಮಳೆಕೊಯ್ಲು ರೂಢಿಗೆ ಬಂದಿದೆ.

ನಮ್ಮ ಹಿಡುವಳಿಯು ಬೆಟ್ಟದ ಒಡಲಿನ ಬಲು ಆಯಕಟ್ಟು ನೆಲೆಯಲ್ಲಿರುವುದರಿಂದ ಕೆಳಗಿರುವ ಎಲ್ಲ ಹಳ್ಳಿಗಳಿಗೂ ಈ ಲಾಭ ಒದಗಲಿದೆ. ಮುಚ್ಚಿಗೆ ಸಾಮಗ್ರಿಗಳನ್ನು ನಮ್ಮಲ್ಲೇ ಉತ್ಪಾದಿಸುವ ಸಲುವಾಗಿ ವಿಸ್ತಾರ ಪ್ರದೇಶಗಳಲ್ಲಿ ಜೋಳದ ಬೇಸಾಯ ತೊಡಗಿದ್ದೇವೆ. ಇದರ ಒತ್ತೊತ್ತಿಗೆ ಪಚ್ಚೌಲಿಯನ್ನೂ ನೆಡುತ್ತಿದ್ದೇವೆ. ಬೃಹದ್ವೃಕ್ಷಗಳ ವಿವಿಧ ಬಗೆಗಳನ್ನೂ (ಮಾವು, ಹುಣಸೆ, ಬೇವು, ಹಲಸು, ಬ್ರೆಡ್‌ಹಣ್ಣು) ನಡುಗಾಲದ ಇಳುವರಿಗಾಗಿ ಕೆಲವು ಪುಟ್ಟ ಮರಗಳ ಬಗೆಗಳನ್ನೂ (ತೆಂಗು, ಸಪೋಟ, ಗೇರು, ನಿಂಬೆ, ಏಲಕ್ಕಿ) ಕ್ಷಿಪ್ರಕೊಯ್ಲಿಗೆ ಬರುವ ಕೆಲವು ನಗದು ತಳಿಗಳನ್ನೂ (ಪಚ್ಚೌಲಿ, ಬಾಳೆ, ತರಕಾರಿ ಬಗೆಗಳು, ನುಗ್ಗೆ, ಚಕ್ಕೋತ) ಸದ್ಯವೇ ಬೆಳೆಸುವ ಯೋಜನೆಗಳನ್ನು ತಯಾರಿಸಿದ್ದೇವೆ. ಜೊತೆಯಲ್ಲೇ ಇಡೀ ಪ್ರದೇಶದಲ್ಲಿ ಮುಚ್ಚಿಗೆ ಭರದಿಂದ ಮುಂದುವರಿಯಲಿದೆ. ಹೊಸ ಬೀಜಗಳು ಅಲ್ಲದೇ ತುಂಡು/ಅಗೆ ಸಸಿಗಳೆಲ್ಲವನ್ನೂ ಬೀಜೋಪಚಾರ ದ್ರಾವಣದ ಸಂಸ್ಕರಣಕ್ಕೆ ಒಳಪಡಿಸುತ್ತಿದ್ದೇವೆ. ನಿಯತಕಾಲಿಕವಾಗಿ ಮಣ್ಣಿಗೂ ಈ ಸಂಸ್ಕಾರ ಕೊಡುತ್ತಿದ್ದೇವೆ. ಪರಿಣಾಮವಾಗಿ ಗೊಬ್ಬರ ಕೊಳ್ಳುವುದನ್ನು ಪೂರ್ತಿ ಮನ್ನಾ ಮಾಡಿದ್ದೇವೆ. ಮಣ್ಣಿಗೆ ಬೇಪಿನ ಅಥವಾ ನೆಲಗಡಲೆ ಹಿಂಡಿ ಊಡುವುದರ ಮೇಲಿನ ವೆಚ್ಚವೂ ನಿಂತುಹೋಗಿದೆ. ಮುಚ್ಚಿಗೆಗೆ ಒದಗುವ ಎಲ್ಲ ಹಸುರು ಪದಾರ್ಥಗಳ ಕಟಾವನ್ನು ಸದಾ ಮಾಡುತ್ತಲೇ ಇರುವ ಸಲುವಾಗಿ ಹೆಚ್ಚಿಗೆ ಕೆಲಸಗಾರರನ್ನು ನಿಯೋಜಿಸಿದ್ದೇವೆ.

ನಮಗೆ ವಿವಿಧ ಮಟ್ಟಗಳಲ್ಲಿ ತೃಪ್ತಿ ಹಾಗೂ ಮನಶ್ಶಾಂತಿ ಲಭಿಸಿವೆ :

ಮಣ್ಣನ್ನು ರಸಗೊಬ್ಬರ ಇಲ್ಲವೇ ಕೀಟನಾಶಕಗಳೆಂಬ ರಾಸಾಯನಿಕಗಳು ಎಂದೂ ಮಲಿನಗೊಳಿಸದಂತೆ ಕಾಪಾಡಲು ನಾವು ಸದಾ ಬದ್ಧರೆಂಬ ಅರಿವು ನಮಗುಂಟು. ಈಗ ನಾವು ಖಾದರ್ ನೀಡಿರುವ ವಿವರಣೆ ಪ್ರಕಾರ ಮುಚ್ಚಿಗೆ ಹಾಕುತ್ತ, ಸೆಗಣಿ, ಗೋಮೂತ್ರ ಮತ್ತು ಇತರ ಸೇರ್ಪಡೆಗಳಿಂದ ತಯಾರಿಸಿದ ಪದಾರ್ಥದಿಂದ ಮಣ್ಣನ್ನು ಸಂಸ್ಕರಿಸುತ್ತ ಮುನ್ನಡೆಯುತ್ತಿದ್ದೇವೆ. ಮಣ್ಣಿಂದಾದರೂ ಮಲಿನಗೊಂಡೀತೆಂಬ ಭಯ ನಮಗಿಲ್ಲ. ಇಲ್ಲಿಯ ತನಕ ನಾವು ಅನುಸರಿಸುತ್ತಿದ್ದ ಸಾವಯವ ಕೃಷಿಯಲ್ಲಿ ಪೋಷಕಗಳ ಮತ್ತು ಕೀಟನಿಯಂತ್ರಕಗಳ ಮೇಲೆ ದುಬಾರಿ ವೆಚ್ಚ ಭರಿಸಬೇಕಾಗಿತ್ತು. ಸಹಜಕೃಷಿಗೆ ಬದಲಾಯಿಸಿದಂದಿನಿಂದ ಈ ವೆಚ್ಚ ವಾರ್ಷಿಕವಾಗಿ ಪ್ರತಿ ಎಕರೆಗೆ ಕೇವಲ ಕೆಲವೇ ನೂರು ರೂಪಾಯಿಗಳಿಗೆ ಇಳಿದಿದೆ. ಉತ್ತು ಸಾಗುವಳಿ ಮಾಡಲು ತಾಗುವ ವೆಚ್ಚವೀಗ ಮುಚ್ಚಿಗೆಯಿಂದಾಗಿ ನಿವಾರಣೆಗೊಂಡಿದೆ. ಮಣ್ಣು ಸದಾ ಆರ್ದ್ರ ಮತ್ತು ಮೆದುವಾಗಿರುವುದರಿಂದ ದೊಡ್ಡ ಸಸಿಗಳಿಗಾಗಿ ಹಿರಿದಾದ ಗುಂಡಿಗಳನ್ನು ತೋಡುವುದು ಅಗ್ಗವಾಗಿದೆ. ಅಂದರೆ ಈಗ ಕಡಿಮೆ ಸಂಖ್ಯೆಯ ಆಳುಗಳು ಈ ಕೆಲಸವನ್ನು ನಿಭಾಯಿಸಬಲ್ಲರು. ಕೊನೆಯದಾಗಿ, ಆದರೆ ಪ್ರಧಾನವಾಗಿ, ಮುಂದಿನ ಸುಮಾರು ೫ ವರ್ಷ ಪರ್ಯಂತ ಬೇಸಾಯದ ನಿರ್ವಹಣೆಗೂ, ಪ್ರಾಯಶಃ ತುಸುಮಟ್ಟಿಗೆ ನಮ್ಮ ಖರ್ಚಿಗೂ, ಅಲ್ಪಕಾಲಿಕ ಇಳುವರಿ ಕೊಡುವ ಬೆಳೆಗಳನ್ನೇ ಅವಲಂಬಿಸಿರುತ್ತೇವೆ. ಅಷ್ಟರಲ್ಲಿ ಮಾವು, ತೆಂಗು, ಸಪೋಟ ಮುಂತಾದ ಮರಗಳು ಫಲವೀಯಲು ತೊಡಗಲಿವೆ. ಆಗ ನಾವು ತರಕಾರಿ ಮುಂತಾದ ಅಲ್ಪಕಾಲಿಕಗಳನ್ನು ಬಿಟ್ಟು ಸುದೀರ್ಘಕಾಲ ಬಾಳಿ ಸಮೃದ್ಧ ಇಳುವರಿ ಕೊಡುವ ವೃಕ್ಷಗಳನ್ನೇ ಆಶ್ರಯಿಸಬಹುದು. ಇವುಗಳ ಪಾಲನೆ ಸುಲಭ, ದೈನಂದಿನ ಕೆಲಸ ಕಡಿಮೆ, ಆದಾಯವೂ ಹೆಚ್ಚು, ಅಲ್ಲದೇ ಆ ವೇಳೆಗೆ ನಮಗೂ ವಯಸ್ಸಾಗಿರುವುದು. ಹೀಗೆ ನಮ್ಮ ಪೀಳಿಗೆಗೆ ನಾವೊಂದು ಭವ್ಯ ಪರಂಪರೆ ಮತ್ತು ವ್ಯವಸಾಯಶೈಲಿಯನ್ನು ಬಳುವಳಿಯಾಗಿ ನೀಡಿರುತ್ತೇವೆ.

ನಾವು ಮುಂಗಾಣದೆ ಗೊಂದಲದಲ್ಲಿದ್ದಾಗ ಖಾದರ್ ಅವರ ಮಾರ್ಗದರ್ಶನ ಲಭಿಸಿದ್ದೊಂದು ವರವೆಂದು ಭಾವಿಸಿದ್ದೇವೆ. ಇವರ ಹಿರಿತನದಲ್ಲಿ ನಾವು ಕೈಗೊಂಡಿರುವ ಸಹಜಕೃಷಿ ಕುರಿತ ಪ್ರತಿಯೊಂದು ಹಂತದ ಬಗೆಗೂ ನಮಗೆ ಸ್ಪಷ್ಟ ಕಲ್ಪನೆ ಇದೆ. ನಾವೇನು ಮಾಡುತ್ತಿದ್ದೇವೆಂಬ ಅರಿವು ಕೂಡ ಉಂಟು.

''ನಿಮ್ಮ ಸಲಹೆ ಸೂಚನೆಗಳಿಗೆ ಮತ್ತು ನಮ್ಮಲ್ಲಿಗೆ ಬಂದು ಮರಳಿದ್ದಕ್ಕೆ ನಾವು ನಿಮಗೆಷ್ಟು ಗೌರವ ಸಂಭಾವನೆ ಕೊಡಬೇಕು ?'' ನಮ್ಮ ಈ ವಿನಂತಿಗೆ ಖಾದರ್ ತೀರ ಸಹಜವಾಗಿ ನೀಡಿದ ಉತ್ತರ ನಮ್ಮನ್ನು ಒಂದು ಕ್ಷಣ ದಂಗುಬಡಿಸಿತು. ''ಈ ಕರ್ತವ್ಯ ನಿರ್ವಹಣೆಯಲ್ಲಿ ನನಗೆ ಲಭಿಸಿದ ಸಂತೃಪ್ತಿಯೇ ನಿಜ ಸಂಭಾವನೆ.''

''ಈ ಒಗಟು ನುಡಿಯನ್ನು ತುಸು ವಿವರಿಸುವಿರಾ ?''

''ಅಂತಿಮವಾಗಿ ನಾವೆಲ್ಲರೂ ನೆಲತಾಯಿಯ ಮಕ್ಕಳು. ನಾಗರಿಕತೆ, ಪ್ರಗತಿ, ಅಭಿವೃದ್ಧಿ ಮುಂತಾದ ಹೆಸರುಗಳಲ್ಲಿ ನಾವು ಅವಳನ್ನು ಸಾಕಷ್ಟು ಹಿಂಸಿಸಿದ್ದೇವೆ. ನಮ್ಮ ಮತ್ತು ನಮ್ಮ ಪೀಳಿಗೆಯ ಉಳಿವಿಗೆ ಇನ್ನಾದರೂ ಈ ಹಗಲು ದರೋಡೆ ನಿಲ್ಲಲೇಬೇಕು. ಈ ನಿಟ್ಟಿನಲ್ಲಿ ನನ್ನ ಯತ್ಕಿಂಚಿತ್ತು ಸೇವೆ ಸಲ್ಲಿಸಿದ್ದೇನೆಂಬ ತೃಪ್ತಿ ನನಗಿದೆ – ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವನ ಸಂತೋಷ ನನಗಿದೆ. ನೀವಾದರೂ ಇದೇ ಹಾದಿಯಲ್ಲಿ ಮುನ್ನಡೆಯಬೇಕು.''

ಹೌದು, ಅವರ ಈ ನಿಷ್ಕಾಮಕರ್ಮ ನಮ್ಮಲ್ಲಿ ಅಧಿಕ ಉತ್ಸಾಹ ತುಂಬಿದೆ. ಎಂದೇ ನಾವು ಇನ್ನಷ್ಟು ಉದ್ದೀಪಿತರಾಗಿ ಕಾರ್ಯಮಗ್ನರಾಗಿದ್ದೇವೆ. ''ಬೇಸಾಯದವ ಬೇಗ ತಾ ಸಾಯ'' ಎಂಬ ನಾಣ್ಣುಡಿಯ ಪೂರ್ಣ ಅರ್ಥ ಈಗ ನಮಗೆ ತಿಳಿದಿದೆ.

ಇಂಗ್ಲಿಷ್ ಮೂಲ : ಪ್ರವೀಣ್ ಖನ್ನಾ ಅನುವಾದ : ಜಿ. ಟಿ. ನಾರಾಯಣರಾವ್
ನಂ. ೮, 'ಅತ್ರಿ', ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತಿಪುರಂ, ಮೈಸೂರು - ೫೭೦ ೦೦೯

ಜಗತ್ತಿನ ಅತ್ಯಂತ ಶಕ್ತಿಶಾಲಿ ಆಯುಧ ಯಾವುದು ? ಎಂಬ ಪ್ರಶ್ನೆಗೆ ಥಟ್ಟನೆ ಆಟಂ ಬಾಂಬು, ಹೈಡ್ರೋಜನ್ ಬಾಂಬು ಮುಂತಾದ ಉತ್ತರಗಳು ಸಿಕ್ಕಬಹುದು. ಆದರೆ ಕೊಂಚ ನಿಧಾನಿಸಿ ವಿಚಾರ ಮಾಡಿದರೆ ಇಂಥ ಬಾಂಬುಗಳನ್ನೆಲ್ಲ ಕಂಡುಹಿಡಿದ 'ಮನಸ್ಸು' ನಿಜವಾಗಿಯೂ ಜಗತ್ತಿನ ಅತ್ಯಂತ ಶಕ್ತಿಶಾಲಿಯಾದ ಆಯುಧವೆಂಬುದು ಅರಿವಾಗುತ್ತದೆ.

'ಮನಸ್ಸು' ಎಂದರೇನು, ಎಂಬುದನ್ನು ಒಂದು ಮಾತಿನಲ್ಲಿ ವಿವರಿಸಲು ಸಾಧ್ಯವಿಲ್ಲ. ಜೀವಕಳೆ, ಚೈತನ್ಯ, ಆತ್ಮ, ಹೃದಯ, ಮನಸ್ಸು ಮುಂತಾದ ಮಾತುಗಳಲ್ಲಿ ಮೂರ್ತ-ಅಮೂರ್ತಗಳೆರಡೂ ಇವೆ. ಜೀವಸಾಕ್ಷಿ-ಚೈತನ್ಯಸಾಕ್ಷಿ-ಆತ್ಮಸಾಕ್ಷಿ-ಹೃದಯಸಾಕ್ಷಿ-ಮನಸ್ಸಾಕ್ಷಿ ಎಂಬ ಸರಣಿಯಲ್ಲಿ ಸಾಕ್ಷಿಪ್ರಜ್ಞೆ ಯೊಂದನ್ನು ಮನಗಾಣಬಹುದು. 'ಜೀವ'ದ ಸೃಷ್ಟಿ-ಸ್ಥಿತಿ-ಲಯಗಳು ಪಂಚಭೂತಗಳೊಂದಿಗೆ ಮಿಳಿತಗೊಂಡಿವೆ. ಮಣ್ಣು-ನೀರು-ಬೆಂಕಿ-ಗಾಳಿ-ಗಗನಗಳೆಂಬ ಪಂಚಭೂತಗಳ ಮೇಳನ ಅಥವಾ ಸಮ್ಮಿಲನದಿಂದ 'ಜೀವ' ಹುಟ್ಟುತ್ತದೆ. ಈ ಜೀವವು ಪೋಷಣೆಗೊಳ್ಳುವುದು ಪಂಚಭೂತಗಳಿಂದ ಮತ್ತು ಈ ಜೀವವು ಸೇರಿಹೋಗುವುದು ಪಂಚಭೂತಗಳಲ್ಲೆ! ಇಂಥ ಪಂಚತ್ವದಿಂದಲೇ ಪ್ರಪಂಚವು ನಡೆಯುತ್ತಿದೆ.

ಪಂಚತ್ವವೆಂದರೆ ಮರಣವೆಂಬ ಪರಿಮಿತಾರ್ಥವನ್ನು ನಿಘಂಟುಗಳು ಹೇಳುತ್ತವೆ. ಇದು ಪೂರ್ಣಾರ್ಥವಲ್ಲ! ಪಂಚತ್ವದಿಂದಲೇ ಜೀವದ ಸೃಷ್ಟಿ-ಸ್ಥಿತಿ-ಲಯಗಳು ನಡೆಯುತ್ತಿರುವುದರಿಂದ, ಪಂಚತ್ವವೆಂದರೆ ಜೀವದ ಹುಟ್ಟು-ಪೋಷಣೆ-ಮರಣ ಎಂಬಂತೆ ಮುಮ್ಮುಖವಾಗಿ ಗ್ರಹಿಸಬೇಕಾಗಿದೆ.

ತಂದೆ-ತಾಯಿಗಳ ವಿಶಿಷ್ಟ ಜೈವಿಕ ಲಕ್ಷಣಗಳು ಮಕ್ಕಳು ಮರಿಗಳ ಸಂತಾನ ಪರಂಪರೆಯಲ್ಲಿ



# ಹೇಂಗೆ ಮನ ಹಾಂಗೆ ಘನ

ವಿ. ಚಂದ್ರಶೇಖರ ನಂಗಲಿ

ಮುಂದುವರೆಯುವುದನ್ನು ವಂಶವಾಹಿ ವಿಜ್ಞಾನದಲ್ಲಿ ಕಂಡುಹಿಡಿಯಲಾಗಿದೆ. ಈ ಬಗೆಯ ಜ್ಞಾನವನ್ನು 'Anthropo-Genetics' ಎಂದು ಕರೆಯಬಹುದು. ಪಂಚಭೂತಗಳಾದ ಮಣ್ಣು-ನೀರು-ಬೆಂಕಿ-ಗಾಳಿ-ಗಗನಗಳಿಗೆ ಸೇರಿದ ವಿವಿಧಾವಸ್ಥೆಗಳು ಮತ್ತು ಕ್ರಿಯಾ ವೈವಿಧ್ಯಗಳು, ಪಂಚಭೂತಗಳಿಂದಲೇ ಸೃಷ್ಟಿಯಾಗಿ ಪೋಷಣೆ ಪಡೆಯುತ್ತಾ ಐಕ್ಯವಾಗುವ 'ಜೀವ'ದಲ್ಲೂ ಕಂಡುಬರುತ್ತವೆ. ಅಂದರೆ, ಪಂಚಭೂತಗಳ ವಿಶಿಷ್ಟ ಗುಣಲಕ್ಷಣಗಳೆಲ್ಲವೂ ಮನಸ್ಸಿನಲ್ಲಿ ಪ್ರಕಟಗೊಳ್ಳಬಲ್ಲವು. ಮಣ್ಣನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ ಮನಸ್ಸು ಮರುಭೂಮಿಯೂ ಹೌದು; ನಂದನವನವೂ ಹೌದು! ಬಂಜರು ನೆಲ, ಫಲವತ್ತಾದ ನೆಲ, ಗರಜುನೆಲ, ಬಂಡೆನೆಲ ಎಂಬ ಮಾತುಗಳನ್ನು ಮನಸ್ಸಿನ ವಿವಿಧ ಅವಸ್ಥೆಗಳೆಂದೂ ಕರೆಯಬಹುದು. ನೀರನ್ನು ದೃಷ್ಟಿಯಲ್ಲಿಟ್ಟುಕೊಂಡರೆ ನಮ್ಮ ಮನಸ್ಸು ಜಿನುಗುವ ಜಲ, ಹರಿಯುವ ನದಿ, ಧುಮ್ಮಿಕ್ಕುವ ಜಲಪಾತ, ಸುವಿಶಾಲ ಸಾಗರ ಇತ್ಯಾದಿ ಏನೆಲ್ಲ ಆಗಬಹುದು. ಗಾಳಿಯನ್ನು ದೃಷ್ಟಿಯಲ್ಲಿಟ್ಟುಕೊಂಡರೆ ನಮ್ಮ ಮನಸ್ಸಿನ ವಿವಿಧ ಅವಸ್ಥೆಗಳಂತೆ ತಂಗಾಳಿ-ಸುಂಟರಗಾಳಿ-ಬಿರುಗಾಳಿ-ಬೆಂಗಾಳಿಗಳು ಕಂಡುಬರುತ್ತವೆ. ಹಾಗೆಯೇ ನಮ್ಮ ಮನಸ್ಸು ಉರಿವ ಬೆಂಕಿಯೂ, ಬೆಳಗುವ ಬೆಳಕೂ ಆಗಿಬಿಡುವುದುಂಟು. ಗಗನಕ್ಕೆ ಗಗನವೇ ಸಾಟಿಯೆನ್ನುತ್ತಾರೆ; ಅಂತೆಯೇ ಮನಸ್ಸಿಗೆ ಮನಸ್ಸೆ ಸಾಟಿಯೆನ್ನಬಹುದು. ಹೀಗೆ ನಿಸರ್ಗದ ವಿವಿಧಾವಸ್ಥೆಗಳು ಮತ್ತು ಕ್ರಿಯಾವೈವಿಧ್ಯಗಳು ಜೀವದಲ್ಲಿ ಕಂಡುಬರುವುದನ್ನು Natural Genetics ಎಂದು ಕರೆಯಬಹುದು.

ಪಂಚಭೂತಗಳಿಗಿರುವ ಚಂಡ-ಪ್ರಚಂಡ ಶಕ್ತಿಗಳೆಲ್ಲವೂ ಮನಸ್ಸಿಗೂ ಇರುವುದರಿಂದ ಮನಸ್ಸೆ ಜಗತ್ತಿನ ಅತ್ಯಂತ ಶಕ್ತಿಶಾಲಿ ಆಯುಧವೆಂದು ಹೇಳಬಹುದು. ಮಾನವ ಮನಸ್ಸಿಗಿರುವ ಈ ಶಕ್ತಿವಿಶೇಷವು ಬಹುಸಂಖ್ಯಾತ ಮಾನವರಿಗೆ ತಿಳಿದಿಲ್ಲ. ಇದೊಂದು ರೀತಿಯಲ್ಲಿ ತನ್ನ ಶಕ್ತಿಯನ್ನು ಅರಿಯದ ಶಾಪಗ್ರಸ್ತ ಹನುಮಂತನ ಸ್ಥಿತಿಯೆನ್ನಬಹುದು. ಕಪಿಬುದ್ಧಿ-ಕಪಿಚೇಷ್ಟೆ-ಕಪಿಮುಷ್ಟಿ ಮುಂತಾದ ಶಬ್ದಗಳಲ್ಲಿ ಹೀನಾರ್ಥವಿದೆ. ಕಪಿಬುದ್ಧಿ-ಕಪಿಚೇಷ್ಟೆಗಳೆಲ್ಲ ಅಳಿದು ಪರಿವರ್ತನೆಗೊಂಡು ಹನುಮದ್ವಿಕಾಸವಾಗುವಂತೆ ನಮ್ಮ ಮನಸ್ಸು ಪರಿವರ್ತನೆಗೊಂಡು ಶಕ್ತಿಸಂಪನ್ನವಾಗಬೇಕು. ಈ ಆಶಯದಿಂದಲೇ ಶರಣರು ''ಹೇಂಗೆ ಮನ ಹಾಂಗೆ ಘನ'' ಎಂದು ನುಡಿದಿದ್ದಾರೆ. ಕುವೆಂಪು ಅವರು ಇಂಥ ಸದಾಶಯದಿಂದಲೇ ''ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ'' – ಎಂದು ಕರೆಯಿತ್ತಿದ್ದಾರೆ.

ಮನಸ್ಸು ಶಕ್ತಿಸಂಪನ್ನವಾಗುವುದು ಹೇಗೆ ? ಎಂದು ಪ್ರಶ್ನಿಸಿಕೊಂಡರೆ ಇದಕ್ಕೆ ಉತ್ತರ ಸುಲಭವಾಗಿ ಲಭಿಸುವುದಿಲ್ಲ. ಆರ್ಥಿಕ ಅಭಿವೃದ್ಧಿ ಮತ್ತು ಕ್ರಾಂತಿಕಾರಕ ತಂತ್ರಜ್ಞಾನಗಳಿಂದ 'ಮನಸ್ಸು' ಶಕ್ತಿಯುತವಾಗುತ್ತದೆ ಎನ್ನಲಾಗದು! ಈ ಪ್ರಶ್ನೆಗೆ ನಾಗರಿಕತೆಗಳ ಒಳಹೊಕ್ಕು ಶೋಧಿಸಿ ಉತ್ತರ ಪಡೆಯಬೇಕಾಗಿದೆ. ಪ್ರಪಂಚದ ಅತ್ಯಂತ ಪ್ರಾಚೀನವಾದ ನದಿದಂಡೆಯ ನಾಗರಿಕತೆಗಳೆಲ್ಲ ಇಂದು ನಿರ್ನಾಮವಾಗಿದ್ದು ಎಷ್ಟೋ ದೇಶಗಳ ಇತಿಹಾಸವು ತುಂಡು- ತುಂಡಾದ ಸರ್ಪಿಣಿಯಂತೆ ಕಂಡುಬರುತ್ತದೆ. ಆದರೆ, ಹರಪ್ಪ ಮತ್ತು ಮೊಹೆಂಜದಾರೊ ಅಥವಾ ಸಿಂಧೂನದಿಯ ನಾಗರಿಕತೆಯು ಇಂದಿಗೂ ಜೀವಂತವಾಗಿ, ಚಲನಶೀಲವಾಗಿ, ವೈವಿಧ್ಯಮಯವಾಗಿ ಪರಿವರ್ತನೆಗೊಳ್ಳುತ್ತಲೇ ತನ್ನ ಅಸ್ತಿತ್ವವನ್ನು ಕಾಯ್ದುಕೊಂಡು ಬಂದಿದೆ. ಭಾರತದೇಶದ ಇತಿಹಾಸವನ್ನು ಕುರಿತು ಮಾತನಾಡುವಾಗ 'ಯುಗಯಾತ್ರೀ ಭಾರತೀ' ಎನ್ನುವುದುಂಟು. ದೇಶ ಬೇರೆ; ಮನಸ್ಸು ಬೇರೆ ಎಂದು ತಿಳಿಯಬೇಕಾಗಿಲ್ಲ. ಭಾರತದೇಶದ ವಿಶಿಷ್ಟ ಮನಸ್ಸುಗಳ ಗುಣಲಕ್ಷಣಗಳೆಂದರೆ ಜೀವಂತಿಕೆ-ಚಲನಶೀಲತೆ-ವೈವಿಧ್ಯಮಯತೆ ಎಂದು ಹೇಳಬಹುದು. ದೇಶವಾಗಲಿ ಅಥವಾ ಮನಸ್ಸಾಗಲಿ ಸ್ಥಾವರವಾದರೆ ನಾಶಗೊಳ್ಳುತ್ತದೆ, ಜಂಗಮವಾದರೆ ನಿತ್ಯನೂತನವಾಗುತ್ತದೆ.

ಬಹುತ್ವ ಬಲವೇ ಮನಸ್ಸಿನ ಶಕ್ತಿ ಸಂಪನ್ನತೆಗೆ ಕಾರಣ. ಇದನ್ನರಿತು ಬಾಲ್ಯದಿಂದಲೇ ಬಹುತ್ವವನ್ನು ಜೀವನದ ಎಲ್ಲ ನಡೆ ಮತ್ತು ನುಡಿಗಳಲ್ಲಿ ಅನ್ವಯಿಸಿಕೊಳ್ಳುವಂಥ ಪ್ರಜ್ಞಾಪೂರ್ವಕವಾದ ಪ್ರಯತ್ನಗಳನ್ನು ಮಾಡಬೇಕಾಗುತ್ತದೆ. ಶಾಲಾ ಕಾಲೇಜುಗಳು, ವಿಶ್ವವಿದ್ಯಾಲಯಗಳ ಮೂಲಕವಾದ ಶಿಕ್ಷಣಕ್ಷೇತ್ರವು ಇನ್ನು ಮೇಲಾದರೂ ರಂಗಭೂಮಿ, ಸಿನೆಮಾ, ಸಂಗೀತಾದಿ ಕಲೆಗಳನ್ನು ಕಡ್ಡಾಯವಾಗಿ ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣದವರೆಗೆ ವ್ಯಾಪಕವಾಗಿ ಮತ್ತು ಆಳವಾಗಿ ಒಳಗೊಂಡು ವಿದ್ಯಾರ್ಥಿಗಳ ಎದೆಹೊಲದಲ್ಲಿ ಬಹುತ್ವಬಲವನ್ನು ಬಿತ್ತಿ ಬೆಳೆಯಬೇಕಾಗಿದೆ.

ಮನಸ್ಸು 'ಸ್ಥಾವರ'ವಾಗದೆ, ಸದಾ 'ಜಂಗಮ'ವಾಗಿರಬೇಕು. 'ಮನಸ್ಸು' ಜಂಗಮವಾಗಬೇಕಾದರೆ, ವೈವಿಧ್ಯಮಯ ರುಚಿಗಳು ಮತ್ತು ವೈವಿಧ್ಯಮಯ ಅಭಿರುಚಿಗಳು ಬೇಕಾಗುತ್ತವೆ. ರುಚಿಗಳು ನಾಲಗೆಗೆ ಸಂಬಂಧಪಟ್ಟಿದ್ದರೆ, ಅಭಿರುಚಿಗಳು ಮನಸ್ಸಿಗೆ ಸಂಬಂಧಪಟ್ಟಿವೆ. ಭಾರತೀಯರ ರುಚಿ ಮತ್ತು ಅಭಿರುಚಿಗಳು ಏಕರೂಪಿಯಲ್ಲ; ಬಹುರೂಪಿಯಾದವು ಎಂಬುದನ್ನು ಮೊದಲಿಗೆ ತಿಳಿಯಬೇಕು. ಬಹುಭಾಷಾಭಾರತಿ, ಬಹುಧರ್ಮಭಾರತಿ, ಬಹುಕೃಷಿಭಾರತಿ, ಬಹುವಿದ್ಯಾಭಾರತಿ, ಬಹುಧಾನ್ಯಭಾರತಿ ಎಂಬ ಸರಣಿಯಲ್ಲಿ ಗ್ರಹಿಸಬೇಕಾದ ವಿಚಾರವೆಂದರೆ 'ಬಹುತ್ವ' ತತ್ವವಿಚಾರ! ಜೀವನದ ಎಲ್ಲ ನಡೆ ಮತ್ತು ನುಡಿಗಳಲ್ಲಿ ಬಹುತ್ವವೇ ಭಾರತೀಯರ ಜೀವನಾಡಿಯಾಗಿದೆ. ಇಂಥ ಬಹುತ್ವಬಲದಿಂದ ಯುಗಯಾತ್ರಿಯಾಗಿರುವ ಭಾರತದೇಶ ಮತ್ತು ಭಾರತೀಯರ ಮನಸ್ಸುಗಳು ಇಂದು ಹೆಚ್ಚುತ್ತಿರುವ ಕೋಮುವಾದ ಮತ್ತು ಭೋಗವಾದಗಳಿಂದ ಏಕತ್ವದ ಕಡೆಗೆ ತುಯ್ಯುತ್ತಿದೆ.

ಧಾರ್ಮಿಕ ಏಕತೆಯ ಅಭ್ಯುದಯವಾಗಲಿ ಅಥವಾ ಜಾಗತಿಕ ಏಕತೆಯ ಅಭ್ಯುದಯವಾಗಲಿ ಮೂಲತಃ ಬಹುತ್ವ ವಿರೋಧಿಯಾದ ವೇದಿಕೆಗಳೆಂಬುದನ್ನು ಮರೆಯಬಾರದು! ಇದರಿಂದ ದೇಶ ಅಥವಾ ಮನಸ್ಸಿನ ಸ್ಥಿತಿ-ಗತಿಗಳು ಸ್ಥಾವರವಾಗಿ ಬಿಡುವ ಬಹುದೊಡ್ಡ ಅಪಾಯವಿದೆ. ನನ್ನ ದೃಷ್ಟಿಯಲ್ಲಿ ಒಂದು ಭಾಷೆ ಬಲ್ಲವರನ್ನು ಭಾರತೀಯರೆನ್ನಲಾಗದು. ಈ ಮಾತನ್ನು ಭಾಷಾವಿದ್ವಾಂಸರನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುತ್ತಿಲ್ಲ. ನಮ್ಮ ದೇಶದ ಸಾಮಾನ್ಯ ಜನರು, ಕೂಲಿಗಳು, ವ್ಯಾಪಾರಿಗಳು ಮುಂತಾದವರು ಹಲವು ಭಾಷೆಗಳನ್ನು ಸುಲಲಿತವಾಗಿ ದೈನಂದಿನ ವ್ಯವಹಾರದಲ್ಲಿ ಬಳಸುತ್ತಿದ್ದಾರೆ. ಪರ್ವತಪ್ರಿಯ ತೇನ್‌ಸಿಂಗ್ ಅನಕ್ಷರಸ್ಥನಾಗಿದ್ದರೂ ತನ್ನ ಕೂಲಿ ಕಾಯಕದಿಂದಾಗಿಯೇ ಹಲವು ಭಾಷೆಗಳಲ್ಲಿ ವ್ಯವಹರಿಸುವ ಪರಿಣತಿಯನ್ನು ಪಡೆದಿದ್ದನೆಂಬುದನ್ನು ಅವನ ಜೀವನ ಚರಿತ್ರೆಯಿಂದ ತಿಳಿಯಬಹುದು. ಒಬ್ಬ ರೈತನ ಬಳಿ ಹತ್ತು ಎಕರೆ ಜಮೀನಿದೆ ಎಂದು ಭಾವಿಸೋಣ. ಇವನು ತನ್ನ ಹತ್ತು ಎಕರೆ ಜಮೀನಿಗೂ ಟೊಮಾಟೋ ಬೆಳೆ ಹಾಕಿಬಿಟ್ಟರೆ 'ಭಾರತೀಯ'ನೆನಿಸಿಕೊಳ್ಳಲು ಅನರ್ಹನಾಗುತ್ತಾನೆ. ಏಕೆಂದರೆ, ಬಹುಬೆಳೆಯೇ ಭಾರತೀಯ ರೈತರ ಜೀವದುಸಿರು. ಏಕಬೆಳೆ – ಅಂದರೆ ಕಂಪನಿ ಬೀಜಗಳು – ಕಂಪನಿ ಗೊಬ್ಬರಗಳು – ಕಂಪನಿ ಕ್ರಿಮಿನಾಶಕಗಳು ಇದೊಂದು ವಿಷಮಯ ಚಕ್ರವ್ಯೂಹ! ಇದರೊಳಕ್ಕೆ ಒಮ್ಮೆ ಹೊಕ್ಕ ರೈತರು ವೀರಾವೇಶದಿಂದ ಹೋರಾಡುತ್ತಾ ಅಭಿಮನ್ಯುವಿನಂತೆ ನಿರ್ನಾಮವಾಗುತ್ತಾರೆ. ಭಾರತದೇಶವನ್ನು 'ಹಿಂದೂದೇಶ'ವನ್ನಾಗಿ ಮಾಡಲು ರಥಯಾತ್ರೆ – ಪಥಸಂಚಲನ ಮಾಡುವವರು ಕೂಡ ಭಾರತೀಯರಾಗಲು ಅನರ್ಹರಾಗುತ್ತಾರೆ. ಭಕ್ತಿಪಂಥಕ್ಕೆ ಸೇರಿದ ಮಹಾತ್ಮರನೇಕರು ಸರ್ವಧರ್ಮ ಸಮನ್ವಯತೆಯನ್ನು ಬದುಕಿ ತೋರಿಸಿದ್ದಾರೆ. ಬಹುಭಾಷೆಗಳು – ಬಹುಬೆಳೆಗಳು – ಬಹು ಧರ್ಮಗಳು ಇವುಗಳನ್ನೆಲ್ಲ ಬೇರೆ ಬೇರೆಯಾಗಿ ನೋಡದೆ ಇಡಿಯಾಗಿ ಒಂದೇ ಎಂಬಂತೆ ಪರಿಭಾವಿಸಬೇಕು.

ಬಹುತ್ವ ಬಲವೇ ಮನಸ್ಸಿನ ಶಕ್ತಿಸಂಪನ್ನತೆಗೆ ಕಾರಣ. ಇದನ್ನರಿತು ಬಾಲ್ಯದಿಂದಲೇ ಬಹುತ್ವವನ್ನು ಜೀವನದ ಎಲ್ಲ ನಡೆ ಮತ್ತು ನುಡಿಗಳಲ್ಲಿ ಅನ್ವಯಿಸಿಕೊಳ್ಳುವಂಥ ಪ್ರಜ್ಞಾಪೂರ್ವಕವಾದ ಪ್ರಯತ್ನಗಳನ್ನು ಮಾಡಬೇಕಾಗುತ್ತದೆ. ಶಾಲಾ ಕಾಲೇಜುಗಳು, ವಿಶ್ವವಿದ್ಯಾಲಯಗಳ ಮೂಲಕವಾದ ಶಿಕ್ಷಣಕ್ಷೇತ್ರವು ಇನ್ನು ಮೇಲಾದರೂ ರಂಗಭೂಮಿ, ಸಿನೆಮಾ, ಸಂಗೀತಾದಿ ಕಲೆಗಳನ್ನು ಕಡ್ಡಾಯವಾಗಿ ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣದವರೆಗೆ ವ್ಯಾಪಕವಾಗಿ ಮತ್ತು ಆಳವಾಗಿ ಒಳಗೊಂಡು ವಿದ್ಯಾರ್ಥಿಗಳ ಎದೆಹೊಲದಲ್ಲಿ ಬಹುತ್ವಬಲವನ್ನು ಬಿತ್ತಿ ಬೆಳೆಯಬೇಕಾಗಿದೆ.

ಜಗತ್ತಿನ ಶ್ರೇಷ್ಠ ಸಿನೆಮಾಗಳು ಮಾತ್ರವಲ್ಲ, ಕನ್ನಡ-ತೆಲುಗು-ತಮಿಳು-ಹಿಂದಿ-ಮಲಯಾಳಂ ಭಾಷೆಯ ಶ್ರೇಷ್ಠ ಸಿನೆಮಾಗಳನ್ನು ವಾರಕ್ಕೊಮ್ಮೆ ಶಾಲಾ ಕಾಲೇಜುಗಳಲ್ಲಿ ತೋರಿಸುವ ಚಟುವಟಿಕೆಗಳಿರಬೇಕು. ರಾಜ್‌ಕುಮಾರ್, ಎನ್. ಟಿ. ರಾಮರಾವ್, ಎ. ನಾಗೇಶ್ವರರಾವ್, ಶಿವಾಜಿ ಗಣೇಶನ್, ರಾಜ್‌ಕಪೂರ್, ದಿಲೀಪ್ ಕುಮಾರ್, ಬಲರಾಜ ಸಾಹ್ನಿ ಮುಂತಾದವರು ತಮ್ಮ ಶ್ರೇಷ್ಠ ಸಿನೆಮಾಗಳ ಮೂಲಕ ನೀಡಿರುವ ಜನತಾಶಿಕ್ಷಣವನ್ನು ವಿಶ್ವವಿದ್ಯಾಲಯಗಳು ಅರ್ಥಮಾಡಿಕೊಂಡು ಇದನ್ನು ಇಂದಿನ ಆಧುನಿಕ ತಂತ್ರಜ್ಞಾನ ವನ್ನಾಧರಿಸಿ ಯುವ ಪೀಳಿಗೆಗೆ ಪರಿಚಯಿಸುವ ಕಾರ್ಯ ಪಠ್ಯಕ್ರಮದ ಭಾಗವೆಂಬಂತೆ ನಡೆಯಬೇಕು. ಅಕ್ಷರದ ಅಹಂಕಾರವನ್ನು ಅಕ್ಷರೇತರ ಮಾಧ್ಯಮಗಳಾದ ಸಿನೆಮಾ- ರಂಗಭೂಮಿ-ಸಂಗೀತಾದಿ ಕಲಾಮಾಧ್ಯಮಗಳ ಮೂಲಕ 'ಗರ್ವಭಂಗ' ಮಾಡಬೇಕು.

ನಮ್ಮ ಕೋಲಾರವನ್ನು ಕೆರೆಗಳ ಜಿಲ್ಲೆ ಎಂದು ಕರೆಯುತ್ತಾರೆ. ಕೋಲಾರದಲ್ಲಿ ಮಾತ್ರವಲ್ಲ! ಬೆಂಗಳೂರು-ತುಮಕೂರುಗಳಲ್ಲೂ ಕೆರೆಗಳು ವಿಶೇಷವಾಗಿವೆ. ಆಧುನಿಕತೆಯ ಪ್ರಭಾವ, ನಗರೀಕರಣ ಮುಂತಾದ ಪ್ರಕ್ರಿಯೆಗಳಿಂದ ಎಷ್ಟೋ ಕೆರೆಗಳು ಇನ್ನಿಲ್ಲದಂತೆ ಮಾಯವಾಗಿಬಿಟ್ಟಿವೆ. ಅಳಿದುಳಿದ ಕೆರೆಗಳ ಸ್ಥಿತಿ-ಗತಿಗಳು ಅಷ್ಟು ಉತ್ತಮವಾಗೇನೂ ಇಲ್ಲ. ಮಹಾನಗರಗಳ ಆಸುಪಾಸಿನಲ್ಲಿರುವ ಕೆರೆಗಳು ಬಗೆಬಗೆಯ ತ್ಯಾಜ್ಯವಸ್ತುಗಳಿಂದ ಕೂಡಿ ಗಬ್ಬುನಾರುತ್ತಿವೆ. ಕೆಲವು ಕೆರೆಗಳಲ್ಲಿ ವಿಪರೀತವಾಗಿ ಜಲಸಸ್ಯಗಳು ಬೆಳೆದುಕೊಂಡು ನೀರೇ ಕಾಣದಂತೆ ಮುಚ್ಚಿಹೋಗಿವೆ. ಗ್ರಾಮೀಣ ಪ್ರದೇಶದ (ನಿರ್ದಿಷ್ಟವಾಗಿ ಹೇಳಬೇಕು ಎಂದರೆ, ಮಹಾನಗರಗಳಿಂದ ಬಹುದೂರ ಇರುವ) ಕೆರೆಗಳು ತಾವರೆಯ ಹೂಗಳನ್ನು ಒಳಗೊಂಡಿದ್ದು ನೋಡಲು ಮನೋಹರವಾಗಿರುತ್ತವೆ. ಇದೇನಿದು ? ಕೆರೆಗಳನ್ನು ಕುರಿತು ಮಾತನಾಡುತ್ತಿದ್ದಾರಲ್ಲ, ಎಂದು ಹುಬ್ಬೇರಿಸಬೇಡಿ! ನಾನು ಇಷ್ಟು ಹೊತ್ತು ಕೆರೆಗಳ ಮೂಲಕ ಮನಸ್ಸುಗಳ ಸ್ಥಿತಿ-ಗತಿಗಳನ್ನು ಕುರಿತೇ ಮಾತನಾಡಿದ್ದೇನೆ. ಕೆಲವು ಮನಸ್ಸುಗಳು ಬಗೆಬಗೆಯ ತ್ಯಾಜ್ಯವಸ್ತುಗಳನ್ನು ತುಂಬಿಸಿಕೊಂಡು ಗಬ್ಬುನಾತ ಬೀರುತ್ತವೆ. ಇನ್ನು ಕೆಲವು ಮನಸ್ಸುಗಳು ಎಷ್ಟು ನಿಗೂಢವಾಗಿರುತ್ತವೆಯೆಂದರೆ ಜಲಸಸ್ಯಗಳು ಬೆಳೆದು ನೀರೇ ಕಾಣದಂತೆ ಮುಚ್ಚಿಹೋಗಿರುತ್ತವೆ. ತಮ್ಮ ಪಾಡಿಗೆ ತಾವಿರುವ ಎಷ್ಟೋ ಜನರ ಮನಸ್ಸುಗಳು ತಾವರೆಯ ಹೂಗಳ ಸಮೃದ್ಧಿಯನ್ನು ಹೊಂದಿದ್ದು ಪ್ರಸನ್ನವೂ ಪ್ರಶಾಂತವೂ ಆಗಿರುತ್ತವೆ.

ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ, ಎಂಬ ಗಾದೆ ಕನ್ನಡದಲ್ಲಿದೆ. ಮಕ್ಕಳ ಎಳೆಯ ಮನಸ್ಸುಗಳು ಗಿಡದಂತೆ ಕೋಮಲವಾಗಿರುತ್ತವೆ. ಈ ಹಂತದಲ್ಲೇ ಮಕ್ಕಳನ್ನು ಒಲಿಸಿಕೊಳ್ಳಬೇಕು. 'ಬಗ್ಗಿಸಿಕೊಳ್ಳುವುದು' – ಎಂಬುದನ್ನು ವಿಧೇಯತೆ ಅಥವಾ ಗುಲಾಮಿ ಧೋರಣೆ ಎಂದು ತಿಳಿಯಬಾರದು. ಆಧುನಿಕ ಜಗತ್ತಿನಲ್ಲಿ ಎಲ್ಲವೂ ಸ್ವೀಕಾರಾರ್ಹವಲ್ಲ! ಇದರಲ್ಲಿ ತ್ಯಾಜ್ಯವಸ್ತುಗಳು ಎಷ್ಟೋ ಇವೆ. ಇವನ್ನೆಲ್ಲ ಒಡಲಿನಲ್ಲಿ ತುಂಬಿಸಿಕೊಂಡು ಗಬ್ಬುನಾತ ಬೀರುವಂತೆ ಮಕ್ಕಳು ಬೆಳೆಯಬಾರದು. ಅತಿಸಾರದಿಂದ ಮತಿಗೆಟ್ಟು ಜಲಸಸ್ಯಗಳ ವೃದ್ಧಿಯಾಗಿ ನೀರೆ ಕಾಣದಂತೆ ಮುಚ್ಚಿಹೋಗುವ ಅಪಾಯಕ್ಕೂ ಒಳಗಾಗಬಾರದು. ಮಕ್ಕಳ ಮನಸ್ಸು ತುಂಬ ನವಿರಾದುದು. ಇಲ್ಲಿರುವ ಜಲದ ಕಣ್ಣುಗಳನ್ನು ಶಿಕ್ಷಣಕ್ಷೇತ್ರ ಮುಚ್ಚಿಹಾಕಬಾರದು. ಅದು ಸದಾ ಉಕ್ಕುತ್ತಿರುವಂತೆಯೂ, ಕಲುಷಿತಗೊಳ್ಳದಂತೆಯೂ ನೋಡಿಕೊಳ್ಳಬೇಕಾದ ಜವಾಬ್ದಾರಿ ಎಲ್ಲ ಹಿರಿಯರ ಮೇಲಿದೆ. ಇದೆಲ್ಲವನ್ನು ಅರಿತು ಮಕ್ಕಳ ಮನಸ್ಸನ್ನು ಜಗತ್ತಿನ ಅತ್ಯಂತ ಶಕ್ತಿಶಾಲಿಯಾದ ಆಯುಧವನ್ನಾಗಿ ಪರಿವರ್ತಿಸಿದರೆ 'ಬಲಿಷ್ಠಭಾರತ' ತಂತಾನೆ ಸಿದ್ಧಿಯಾಗುತ್ತದೆ.

ವಿ. ಚಂದ್ರಶೇಖರ ನಂಗಲಿ
೧೬, ಶ್ರೀಗೌರಿ, ಕನಕನಗರ, ಸರ್ ಎಂ. ವಿ. ಬಡಾವಣೆ, ಹೊಸಕೋಟೆ - ೫೬೨೧೧೪ (ಬೆಂಗಳೂರು ಜಿಲ್ಲೆ)

# ಮನಸ್ಸು ಮತ್ತು ಶ್ರಮ

ಮಾನವ ಲೋಕದಲ್ಲಿ ಶ್ರಮದಾಯಕ ದುಡಿಮೆಗೆ ಬಹಳ ಮಹತ್ವ ಉಂಟು. ಮಾನವನಾಗಿ ಹುಟ್ಟಿ ಬಂದ ಮೇಲೆ ಉದರ ಪೋಷಣೆಗೆ ಒಂದಿಲ್ಲ ಒಂದು ಉದ್ಯೋಗ ಮಾಡಬೇಕಾಗುತ್ತದೆ. ಉದ್ಯೋಗ ಮಾಡುವುದರಿಂದ ಆರ್ಥಿಕ ಸ್ವಾವಲಂಬನೆ ಪಡೆಯಲು ಸಾಧ್ಯ. ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರು ಶ್ರಮದಾಯಕ ದುಡಿಮೆಗೆ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟಿದ್ದಾರೆ. ದುಡಿಯದೆ ಊಟ ಮಾಡುವ ಹಕ್ಕು ಯಾರಿಗೂ ಇಲ್ಲ ಎಂಬ ಮಾತನ್ನು ಹೇಳುತ್ತಾರೆ. ಮಹಾತ್ಮರಾದಂಥವರು ಶ್ರಮದಾಯಕ ದುಡಿಮೆಗೆ ಹೆಚ್ಚಿನ ಮಹತ್ವ ಕೊಟ್ಟಿರುವರು.




ಶ್ರಮದಾಯಕ ದುಡಿಮೆಯನ್ನು ಎರಡು ಪ್ರಕಾರಗಳಾಗಿ ವಿಭಜಿಸುತ್ತಾರೆ : (೧) ದೈಹಿಕಶ್ರಮ ಮತ್ತು (೨) ಮಾನಸಿಕಶ್ರಮ. ಎರಡೂ ಶ್ರಮಕ್ಕೆ ಅಷ್ಟೇ ಮಹತ್ವ ಉಂಟು. ಆದರೆ ಮಾನಸಿಕ ಶ್ರಮದಲ್ಲಿ ಬುದ್ಧಿವಂತರು ಬರುತ್ತಾರೆ. ಆದ್ದರಿಂದ ಮಾನಸಿಕ ಶ್ರಮಕ್ಕೆ ಹೆಚ್ಚಿನ ಸ್ಥಾನ ಕಲ್ಪಿಸಿದ್ದಾರೆ. ನಾಡಿನಲ್ಲಿ ಇವರ ಸಂಖ್ಯೆ ತೀರಾ ಕಡಿಮೆ ಇದ್ದು, ಜಗತ್ತಿನ ಆಗುಹೋಗುಗಳು ಇವರಿಂದಲೇ ನಡೆಯುತ್ತವೆ.

ಮಾನವ ಸಮಾಜದಲ್ಲಿ ಯಾವುದೇ ಶ್ರಮವಿರಲಿ, ಆ ಶ್ರಮದಲ್ಲಿ ದೇಹ, ಮನಸ್ಸು ಒಂದಾಗಬೇಕು. ಹಾಗಾದಾಗಲೇ ಶ್ರಮಕ್ಕೆ ಅರ್ಥ ಮತ್ತು ಬೆಲೆ ಸಿಗಲು ಸಾಧ್ಯ. ೧೨ನೇ ಶತಮಾನದ ಬಸವಾದಿ ಶಿವಶರಣರು ಶ್ರಮಕ್ಕೆ 'ಕಾಯಕ' ಎಂಬ ಪದವನ್ನು ಬಳಸಿದರು. ಅವರ ದೃಷ್ಟಿಯಲ್ಲಿ 'ಕಾಯಕ' ಎಂಬುದು ಹೇಗೆ ಇರಬೇಕೆಂದು ಒಂದು ವಚನದಲ್ಲಿ ಈ ರೀತಿ ತಿಳಿಯಪಡಿಸುತ್ತಾರೆ.

*ಕಾಯಕದಲ್ಲಿ ನಿರತನಾದರೆ, ಗುರುದರುಶನವಾದರೂ ಮರೆಯಬೇಕು,*
*ಲಿಂಗಪೂಜೆಯಾದಡೂ ಮರೆಯಬೇಕು, ಜಂಗಮ ಮುಂದಿದ್ದಡೂ*
*ಹಂಗು ಹರೆಯಬೇಕು, ಕಾಯಕವೆ ಕೈಲಾಸವಾದ ಕಾರಣ,*
*ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು ॥*

– ಎಂಬುದಾಗಿ ಆಯ್ದಕ್ಕಿ ಲಕ್ಕಮ್ಮ ಕಾಯಕದ ಮಹತ್ವ ಹೇಳುತ್ತಾಳೆ. ಇದೇ ನಿಜವಾದ ಕಾಯಕ ಎಂದು ವಚನದಲ್ಲಿ ತಿಳಿಯಪಡಿಸುತ್ತಾಳೆ. ಕಾಯಕಕ್ಕೆ ಬಡತನ ಮತ್ತು ಶ್ರೀಮಂತಿಕೆ ಎಂಬುದಿಲ್ಲ ನಾವು ನಮ್ಮನ್ನು ಯಾವಾಗಲೂ ಒಂದಲ್ಲ ಒಂದು ಕೆಲಸದಲ್ಲಿ ತೊಡಗಿಸಿಕೊಂಡಿರಬೇಕು. ಶ್ರೀಮಂತಿಕೆ ಬಡತನವನ್ನು ಕುರಿತು ಆಯ್ದಕ್ಕಿ ಲಕ್ಕಮ್ಮ ತನ್ನ ಒಂದು ವಚನದಲ್ಲಿ ಈ ರೀತಿ ತಿಳಿಯಪಡಿಸುತ್ತಾಳೆ :

*ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ*
*ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ*
*ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮೀ ತಾನಾಗಿಪ್ಪಳು*
*ಮಾರಯ್ಯಪ್ರಿಯ ಅಮಲೇಶ್ವರಲಿಂಗನ ಸೇವೆಯುಳ್ಳನ್ನಕ್ಕರ*

ಕೆಲಸ ಮಾಡುವ ಕ್ರಮ ರೀತಿ ಯಾವ ರೀತಿ ಇರಬೇಕು ಎಂಬುದಾಗಿ ತಿಳಿಯ ಪಡಿಸುತ್ತಾರೆ. ಅಸಿ, ಮಸಿ, ಕೃಷಿ ಯಾವುದೇ ಕಾಯಕ ಮಾಡಬೇಕಾದರೆ ಚಿತ್ತ ಶುದ್ಧ ವಾಗಿರಬೇಕು. ನಮ್ಮಲ್ಲಿರುವ ಅಹಂಕಾರ ತ್ಯಾಗಮಾಡಿರಬೇಕು. ಸ್ವಾರ್ಥವಿರಬಾರದು. ಯಾವುದೇ ಕಾಯಕ ಮಾಡಿದರೂ ಭಗವಂತನ ಅರ್ಪಣಾ ಮನೋಭಾವನೆಯಿಂದ ಹಂಗುಹರಿದು ಕಾಯಕ ಮಾಡಿದರೆ ಆತನಿಗೆ ಬಡತನವಿಲ್ಲವೆಂಬ ಮಾತನ್ನು ಹೇಳುತ್ತಾರೆ. ನಮ್ಮ ದೈನಂದಿನ ಕೆಲಸದಲ್ಲಿ ಮನಸ್ಸು ಪ್ರಮುಖ ಪಾತ್ರ ವಹಿಸುತ್ತದೆ. ಮನಸ್ಸು ಪರಿಶುದ್ಧವಿದ್ದರೆ ನಾವು ಮಾಡುವ ಕೆಲಸ ಪರಿಶುದ್ಧವಾಗಿರುತ್ತದೆ. ಅಂತಲೇ ಶಿವಶರಣರು 'ಚಿತ್ತಶುದ್ಧ' ಎಂಬ ಶಬ್ದವನ್ನು ಬಳಸಿದರು. ಪರಿಶುದ್ಧವಾದ ಹೃದಯ ಪರಿಶುದ್ಧವಾದ ಮನಸ್ಸು ಕೂಡಿದಾಗ ಮಾತ್ರ ಪರಿಶುದ್ಧವಾದ ಕಾಯಕ ನಿರ್ಮಾಣವಾಗುತ್ತದೆ. ನಮ್ಮ ಬದುಕು ಪವಿತ್ರವಾಗಬೇಕಾದರೆ 'ಚಿತ್ತ ಶುದ್ಧ'ವಾಗಿರಬೇಕು. ಜೀವನವನ್ನು ಸಾರ್ಥಕ ಪಡಿಸಿಕೊಳ್ಳಬೇಕಾದರೆ ಚಿತ್ತಶುದ್ಧದಲ್ಲಿ ಕಾಯಕ ಮಾಡಬೇಕು. ನಮ್ಮ ಬದುಕು ಸುಂದರ ವಾಗಬೇಕಾದರೆ ಹೆಚ್ಚಿಗೆ ಆಸೆಮಾಡದೆ ಸ್ವಾರ್ಥವನ್ನು ಸಾಧಿಸದೆ ಚಿತ್ತ ಶುದ್ಧದಲ್ಲಿ ಕಾಯಕ ಮಾಡಿದ್ದಾದರೆ ಉನ್ನತಿ ಹೊಂದಲು ಸಾಧ್ಯ.

**ಡಾ॥ ವಾಯ್. ಕೆ. ಗುಂಡಕರ್ಜಗಿ**
ಕನ್ನಡ ಉಪನ್ಯಾಸಕರು, ಕೆ.ಎಸ್.ಎಸ್. ಕಾಲೇಜು, ಗದಗ

---

# ದಾರಿಗೆ ಬೇಕಾದ ಕಣ್ಣು

ಹಾರುವ ಮನವೇ
ತೇಲಾಡುವ ಮನವೇ
ನೆಲಗೊಳ್ಳು ಬಾ ಇಷ್ಟ ದೈವದ ಹೆಸರಲ್ಲಿ
ಈ ಕಾಯದೊಳಗೆ
ಕುಲದೈವದ ಪದತಳದಲ್ಲಿ.

ಬೀಜ ಬೆಳೆದಂತೆ ಹಣ್ಣೊಳಗೆ
ಮೊಳೆತಂತೆ ಈ ಮಣ್ಣಲ್ಲಿ
ಹೆರೆ, ಕೊಂಬೆ, ಎಲೆ, ಹೀಚು ಬೆಳೆದಂತೆ ಕಣ್ಣಲ್ಲಿ
ನೆಲೆಗೊಳ್ಳು ಬಾ ಮನವೇ
ಸಾಕು ಹಾರುವುದು, ಸಾಕು ಓಡುವುದು
ಸಾಕು ಬೆಂಬತ್ತಿ ಸುತ್ತುವುದು
ಸಾಕು ಮನವೇ ಬೇರಿಲ್ಲದೇ ಬದುಕುವುದು.

ನೆಲದಾಳ ಬೇರಿಳಿಸಿ
ರೆಂಬೆ, ಕೊಂಬೆಗಳಲ್ಲಿ ಹಸಿರು ನಳನಳಿಸಿ
ಹೂವಾಗಿ ನಕ್ಕೂ, ಇದ್ದಲ್ಲೇ ಗಾಳಿಯಲ್ಲಿ ಅಲ್ಲಾಡಿ
ಅಲ್ಲೇ ವಾಲಿ, ಅಲ್ಲೇ ತೇಲಿ
ಮಿಡಿಯಾಗಿ ಕಾಯಾಗುವೆನು
ಮಾಗಿ ಹಣ್ಣಾಗುವೆನು.

ನನ್ನೊಳಗೆ ಬೆಳೆವ ಬೀಜಕ್ಕೆ
ಮಣ್ಣು ಬೇಕಲ್ಲ... ? ನೀರು ಬೇಕಲ್ಲ... ?
ಮಣ್ಣೊಳಗೆ ಬೇರು, ದಾರಿ ಹುಡುಕಬೇಕಲ್ಲ... ?

ಮನವೇ ಮಣ್ಣಾಗಲಿ
ಮನವೇ ನೀರಾಗಲಿ
ಮನವೇ ಹಣ್ಣಾಗಲಿ
ಮನವೇ ಬೀಜವಾಗಿ
ಕಣ್ಣಾಗಿ ದಾರಿ ಸಿಗಲಿ.



ಬಂದಗದ್ದೆ ರಾಧಾಕೃಷ್ಣ
'ಪುಸ್ತಕ ಹೊಂಬಾಳೆ', ಕೆಳದಿ ಅಂಚೆ - ೫೭೭ ೪೦೧
ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ



# ಪ್ರಸ್ತುತವಿದೆ ಹಿಂದೆಂದಿಗಿಂತಲೂ ಉತ್ತಮವಾದ ಹೊಸ ಸಂತೂರ್

ಇದೀಗ ಹೊಸ ಸಂತೂರ್ ಬಳಸಲು ಇನ್ನಷ್ಟು ಕಾರಣಗಳು

**ನ್ಯಾಚುರಲ್ ಸ್ಕಿನ್ ಸಾಫ್ಟನರ್ಸ್**
ನೀಡುವುದು ಕೋಮಲ
ಹಾಗೂ ನುಣುಪಾದ ತ್ವಚೆ

ಮೈಮರೆಸುವ **ಹೊಸ ಪರಿಮಳ**
ನೀಡುವುದು, ಆಹ್ಲಾದಕರ
ಸ್ನಾನದ ಅನುಭವ

**ಚಂದನ ಮತ್ತು ಅರಿಸಿನದ**
**ಅಡ್ವಾನ್ಸ್ಡ್ ಎಕ್ಸ್‌ಟ್ರಾಕ್ಟ್ಸ್**
ನೀಡುವುದು
ತಾರುಣ್ಯ ಭರಿತ ತ್ವಚೆ




ಹೊಸ **ಸಂತೂರ್**

ನಿಮಗೆಂದೇ ವಿಶೇಷವಾಗಿ

FCB✦ULKA-42940

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna
... in whole or in part without permission is prohibited.

**HOSATHU** Kannada Monthly / June 2006 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.







# ನವಕರ್ನಾಟಕ ಸಾಹಿತ್ಯ ಸಂಪದ

ಸಂಪಾದಕ

## ಡಾ|| ಪ್ರಧಾನ್ ಗುರುದತ್ತ

**ಪ್ರತಿಯೊಂದು ಮನೆಯ, ಶಾಲೆಯ ಗ್ರಂಥ ಭಂಡಾರದಲ್ಲಿ ಇರಲೇಬೇಕಾದ ಕೃತಿಗಳು**

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಸಾಹಿತಿಗಳ
ಜೀವನ ಸಾಧನೆಗಳ ಪರಿಚಯ – ಖ್ಯಾತ ಲೇಖಕ, ವಿಮರ್ಶಕರಿಂದ

ಸಾಹಿತಿಗಳ ಬಹುವರ್ಣ ಚಿತ್ರವಿರುವ ಮುಖಪುಟ ಸಹಿತ ಉತ್ತಮ ಕಾಗದದಲ್ಲಿ ಮುದ್ರಣಗೊಂಡಿರುವ ಡೆಮಿ ಅಷ್ಟಾಕಾರದ ಪ್ರತಿ ಪುಸ್ತಕದಲ್ಲೂ ಸುಮಾರು 120 ಪುಟಗಳಿರುತ್ತವೆ. ಪ್ರತಿಯೊಂದರ ಬೆಲೆ ರೂ. 60/–. ಮೊದಲ ಎರಡು ಕಂತಿನ 24 ಕೃತಿಗಳನ್ನು (ಮುಖಬೆಲೆ ರೂ. 1440/–) ಒಟ್ಟಿಗೆ ತರಿಸಿಕೊಳ್ಳುವವರಿಗೆ ವಿಶೇಷ ರಿಯಾಯಿತಿ ಬೆಲೆ ರೂ. 1000/–. ಅಂಚೆ ವೆಚ್ಚ ರೂ. 50/– ಪ್ರತ್ಯೇಕ. ಜುಲೈ 30, 2006ರ ಒಳಗಾಗಿ ಪೂರ್ತಿ ಹಣ ಮುಂಗಡ ಪಾವತಿಸಿ ಪ್ರತಿಗಳನ್ನು ತಕ್ಷಣ ಪಡೆಯಿರಿ. 3ನೇ ಕಂತಿನ ಬಿಡುಗಡೆ ಸಂದರ್ಭದಲ್ಲಿ ಹಿಂದಿನ ಕೃತಿಗಳನ್ನೂ ಕೊಳ್ಳಲು ಈ ಸುವರ್ಣಾವಕಾಶ.

**3ನೇ ಕಂತಿನ**
**12 ಸಂಪುಟಗಳಿಗೆ**
**(ಮುಖಬೆಲೆ ರೂ. 720/-)**
**ಪ್ರಕಟಣಪೂರ್ವ**
**ರಿಯಾಯಿತಿ ಬೆಲೆ**
**ರೂ. 500/- ಮಾತ್ರ**
(ಅಂಚೆವೆಚ್ಚ ರೂ. 25 ಸೇರಿಸಿ 30-07-2006ರೊಳಗೆ ಎಂ. ಓ./ಡಿ.ಡಿ. ಕಳಿಸಿ, ಪ್ರತಿಗಳನ್ನು ಕಾಯ್ದಿರಿಸಿಕೊಳ್ಳಿ)

**ಈಗಾಗಲೇ ಎರಡು ಕಂತುಗಳಲ್ಲಿ ಬಿಡುಗಡೆಯಾದ 24 ಕೃತಿಗಳು**

ಕುವೆಂಪು, ವಿ. ಕೃ. ಗೋಕಾಕ್
ದ. ರಾ. ಬೇಂದ್ರೆ, ದೇವುಡು
ಬಿ. ಪುಟ್ಟಸ್ವಾಮಯ್ಯ, ಚದುರಂಗ
ಪುತಿನ, ಎ. ಎನ್. ಮೂರ್ತಿರಾವ್
ಶಿವರಾಮ ಕಾರಂತ
ದೇವನೂರು ಮಹಾದೇವ
ರಾಶಿ, ವ್ಯಾಸರಾಯ ಬಲ್ಲಾಳ
ಚಂದ್ರಶೇಖರ ಕಂಬಾರ, ಡಿ. ವಿ. ಜಿ.
ಮಾಸ್ತಿ, ಕೆ. ಎಸ್. ನರಸಿಂಹಸ್ವಾಮಿ
ಬಿ. ಜಿ. ಎಲ್. ಸ್ವಾಮಿ, ಹಾಮಾನಾ
ಚಿದಾನಂದ ಮೂರ್ತಿ, ತರಾಸು
ಪೂರ್ಣಚಂದ್ರ ತೇಜಸ್ವಿ
ಗಿರೀಶ್ ಕಾರ್ನಾಡ್
ರಂ. ಶ್ರೀ. ಮುಗಳಿ
ಯಶವಂತ ಚಿತ್ತಾಲ

**ಜುಲೈ 2006ರಲ್ಲಿ ಬಿಡುಗಡೆಯಾಗಲಿರುವ 12 ಕೃತಿಗಳು**

ಶಾಂತಿನಾಥ ದೇಸಾಯಿ, ಎಸ್. ಎಲ್. ಭೈರಪ್ಪ, ಎ. ಆರ್. ಕೃಷ್ಣಶಾಸ್ತ್ರಿ
ಕೀರ್ತಿನಾಥ ಕುರ್ತಕೋಟಿ, ಗೋಪಾಲಕೃಷ್ಣ ಅಡಿಗ, ಪಿ. ಲಂಕೇಶ್
ವಿ. ಸೀತಾರಾಮಯ್ಯ, ಎಲ್. ಎಸ್. ಶೇಷಗಿರಿ ರಾವ್
ಎಚ್. ತಿಪ್ಪೇರುದ್ರಸ್ವಾಮಿ, ಬಿ. ಸಿ. ರಾಮಚಂದ್ರ ಶರ್ಮ
ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎಸ್. ವಿ. ರಂಗಣ್ಣ

































ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕೃತ ಕನ್ನಡ ಲೇಖಕರು
ಮೂರನೇ ಕಂತಿನ ಹನ್ನೆರಡು ಕೃತಿಗಳ ಬಿಡುಗಡೆ – ಜುಲೈ 30, 2006ರಂದು ಬೆಳಗ್ಗೆ 10.30ಕ್ಕೆ
ಸ್ಥಳ : ನಯನ ಸಭಾಂಗಣ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು–560 002

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಬೆಂಗಳೂರು – 560 001
✆ 22203580, 30578022 ಫ್ಯಾಕ್ಸ್: 30578023 e-mail : nkp@bgl.vsnl.net.in
ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302